ಬಿಡಿಮುತ್ತು—೨

# ಯಕ್ಷಪ್ರಶ್ನೆ

ಅಥವಾ

# ಬರಲಿರುವ ಸಮಾಜ



ಶಂ. ಬಾ. ಜೋಶಿ

ಅಗ್ನಿವಿದ್ಯೆ, ದಾರಿಯ ಬುತ್ತಿ, ಕಂನಾಡ ಕತೆ
ಮೊದಲಾದ ಗ್ರಂಥಕರ್ತರು



೧೯೪೮ ೩-೦-೦



ಡಾ. ಜೋಗಳೇಕರ ಶಂಕರರಾಯರು, F. R. C. S (Engl.)

ಪ್ರಿ. ಗಾಡಗೀಳ ಧನಂಜಯರಾಯರು, M. A , M. Lit (Cantab)

( ಯಾರೊಡನಾಡಿಯಾಗಿದ್ದಾಗ ಜಾತ್ಯತೀತ ದೃಷ್ಟಿಯು
ಹಲಕಾಲದ ಹಿಂದೆಯೆ ಒಡಮೂಡಿತೊ )

ಗೆಳೆಯ ಕೋಟಿ ಶಿವರಾಮ ಕಾರಂತರು,

( ಸರಿಯೆಂದು ಅರಿತುದನ್ನು ಆಚರಿಸುವ ಯಾರ ಎದೆಗಾರಿಕೆಯನ್ನು
ಕಂಡು ಎರ್ದೆಗೊಂಡೆನೊ )

ಪರಮವಂದ್ಯ ಬಾಪೂಜಿ,

ಯಾರ ನಡೆನುಡಿಗಳಿಂದ ಬಾಳಿನಲ್ಲಿ ಹೊಸ ಬೆಳಕು ಕಂಡಿತೊ )

ಸರ್ವೋದಯ ಸಮಾಜದ ಸಂಚಾಲಕರು,

( ಯಾರು ಪೂಜ್ಯ ಬಾಪೂಜಿಯವರ ಜಾತ್ಯತೀತ ಸಮಾಜದ ಕಣಸನ್ನು ನನಸಾಗಿಸುವ
ನೋಂಪಿಗಳಾಗಿ ಅನುದಿನವೂ ದುಡಿಯುತ್ತಿರುವರೋ )

ಇವರಿಗೆಲ್ಲ ಆದರದ ಕಾಣಿಕೆ



# ಅರಿಕೆ



ಈಗ ಜೀವಕ್ಕೆ ಸ್ವಲ್ಪ ಸಮಾಧಾನ. ಎರಡು ವರುಷಗಳಿಂದ ಇದ್ದ ವಿಚಾರದ ಒತ್ತಡವು ಈ ಪ್ರಕಟನೆಯಿಂದ ಅದೆಷ್ಟೋ ಕಡಿಮೆಯಾಯಿತು. ಪ್ರಕಟಿಸುವ ಸಾಹಸಕ್ಕೆ ಎಂತೂ ಕೈಯಿಕ್ಕಿದ್ದು ಈ ಕಾರಣದಿಂದಲೇ. ಇದರಲ್ಲಿಯ ಜಳ್ಳು ಹಾರಿಹೋಗಲಿ; ಗಟ್ಟಿಯಿದ್ದರೆ ಉಳಿಯಲಿ.

**ಸ್ವಾತಂತ್ರ್ಯವೇ ಹೆಗ್ಗುರಿಯಾಗಿದ್ದರೆ,** ಈಗಿನ ಸಮಾಜರಚನೆಯಲ್ಲಿ ಕೆಲವೊಂದು ಮಾರ್ಪಾಟಗಳು ಅನಿವಾರ್ಯವೆಂದು ನನ್ನ ಮನವರಿಕೆಯಾಗಿದೆ. ಸ್ವಾತಂತ್ರ್ಯವಂತೂ ಬೇಕು; ಮಾರ್ಪಾಟಗಳು ಮಾತ್ರ ಬೇಡವೆಂಬುದು ರೂಢಿಯ ಜನದ ರೀತಿಯಾಗಿದೆ. ಜನಗಳಲ್ಲಿ ಈ ಪರಸ್ಪರ ವಿಸಂಗತಿಯ ಅರಿವು ಉಂಟಾಗದಿದ್ದರೆ ದೊರೆತ ಸ್ವಾತಂತ್ರ್ಯಕ್ಕೆ ಬೇಗನೆಯೆ ಎರವಾಗುವಲ್ಲಿ ಸಂದೇಹವಿಲ್ಲ.

ಈ ಕಾರಣದಿಂದಲೆ, ಸಂಧಿ ದೊರೆತಾಗಲೆಲ್ಲ ಇದನ್ನು ವಿಚಾರಿಗಳೊಡನೆ ಚರ್ಚಿಸುವುದು ಕರ್ತವ್ಯವೆನಿಸಿತು. ೧೯೪೭ರ ನಾಡಹಬ್ಬದಲ್ಲಿ ಹುಬ್ಬಳ್ಳಿ ಮತ್ತು ರಾಣೇಬೆನ್ನೂರುಗಳಲ್ಲಿ ಇದನ್ನು ಕುರಿತು ಮಾತನಾಡಿ ಜನಾಭಿಪ್ರಾಯ ತಿಳಿಯಲು ಯತ್ನಿಸಿದೆ. ಕಳೆದ ವರುಷ ವಿಜಾಪುರದ ದರ್ಬಾರ ಹೈಸ್ಕೂಲಿನ ವಾರ್ಷಿಕ ಸ್ನೇಹಸಮ್ಮೇಲನದ ಅತಿಥಿಯೆಂದು ಕರೆದಾಗ ಈ ವಿಚಾರಗಳನ್ನು ಸ್ವಲ್ಪದರಲ್ಲಿ ತರುಣರ ಎದುರು ಇರಿಸಲು ಎಡೆ ದೊರೆತಿತು. ಬಳಿಕ ಹಾವೇರಿಯ ನಾಡಹಬ್ಬದಲ್ಲೂ, ಮೈಸೂರಿನ ಇಂಟರ ಮೀಡಿಯೆಟ್ ಕಾಲೇಜಿನ ಕರ್ಣಾಟಕ ಸಂಘದ ಆರಂಭೋತ್ಸವದಲ್ಲೂ, ಪುತ್ತೂರಿನ ಸ್ವರಾಜ್ಯ ಸಪ್ತಾಹದಲ್ಲೂ 'ಮುಂಬರುವ ಸಮಾಜ'ವನ್ನು ಕುರಿತು ಚರ್ಚಿಸುವುದಕ್ಕೆ ಅವಕಾಶ ಸಿಕ್ಕಿತು. ಇದೇ ವರುಷ ಮಾರ್ಚ ಕೊನೆಯಲ್ಲಿ ಗದಗು ಸಮಿತಿ ಸ್ಕೂಲಿನ ಕುಮಾರವ್ಯಾಸ ಬಳಗದಲ್ಲಿ 'ಯಕ್ಷ-ಪ್ರಶ್ನೆ'ಗಳನ್ನು ವಿವರಿಸಿದ್ದಾಯಿತು. ಈ ಮಧ್ಯೆ ಜಯಂತಿ, ಜಯಕರ್ನಾಟಕ, ಸುಬೋಧಗಳಲ್ಲಿ ಕೆಲವು ಮಾತುಗಳನ್ನೆತ್ತಿ ಚರ್ಚಿಸಿದೆ. ಇವೆಲ್ಲ ಸಂಘ-ಸಂಸ್ಥೆ ಮತ್ತು ಪತ್ರಿಕೆಗಳ ಸಂಚಾಲಕರು ವಿಚಾರ-ಚರ್ಚೆಗಳಿಗೆ ಸಂಧಿಯನ್ನು ಕಲ್ಪಿಸಿ ಕೊಟ್ಟುದಕ್ಕಾಗಿ ಅವರಿಗೆ ಕೃತಜ್ಞನಾಗಿದ್ದೇನೆ.

ಪೂಜ್ಯ ಬಾಪೂಜೀಯವರ ಘೋರ ಹತ್ಯಾಕಾಂಡದ ತರುವಾಯ, ಇತ್ತೀಚೆಗೆ, ಜಾತೀಯತೆಯು ನಷ್ಟವಾಗಲೇಬೇಕೆಂಬ ಕೂಗು ಎಲ್ಲೆಡೆಗೂ ಕಿವಿಗಡಚಿಕ್ಕುವಷ್ಟು, ಕೇಳಬಹುತ್ತಿದೆ. ಆದರೆ ಪಕ್ಷಗಳ ಜಯಘೋಷ, ಉದ್ಘೋಷಗಳಂತೆ ಇದೂ ಒಂದು ಹೊಣೆಗಾರಿಕೆಯ ಅರಿವುಯಿಲ್ಲದೆ ಕೇವಲ ಕಿರಿಚಿ ಬಿಡುವ ಅರ್ಭಕಗಳ ಕೂಗು ಆಗದಿರಲಿ. ಏಕೆಂದರೆ ಜಾತೀಯತೆಯ ಲಾಭ ಪಡೆದು ಸಂಧಿಸಾಧಿಸಿಕೊಳ್ಳುವ 'ದುಷ್ಟ ಬುದ್ಧಿ'ಗಳು ಪಾಪಿಗಳಂತೆ ಸಮಾಜದಿಂದ ಇನ್ನೂ ತಿರಸ್ಕೃತರಾಗಿಲ್ಲ. ಪತ್ರಿಕೆಗಳಲ್ಲಿ ಜಾತೀಯತೆಗೆ ಪುಟಗೊಡುವ ಸುದ್ದಿ, ವಿಚಾರ, ಬರೆಹಗಳು ಬಗೆಬಗೆಯ ರೂಪದಲ್ಲಿ ತೆರಪಿಲ್ಲದೆ ಬರುತ್ತಲೆ ಇವೆ!

ಕೆಲಸ ಕೆಡಿಸಬೇಕಿದ್ದರೆ ಕೆಣಕಿ ಆಡಬೇಕು. ಒಬ್ಬರೊಬ್ಬರು ಕೂಡಿ ಶಾಂತಿ-ಸೌಖ್ಯದಿಂದ ಬಾಳಬೇಕೆಂದು ಹಾರಯಿಸುತ್ತಿದ್ದಲ್ಲಿ, ಅಂತಹರು, ಒಬ್ಬರೊಬ್ಬರ ಅಭಿಮಾನವನ್ನು ಕೆರಳಿಸುವುದರಿಂದ ಸುಖಜೀವನದ ತಮ್ಮ ಮೂಲೋದ್ದೇಶವನ್ನು ತಾವೇ ಹಾಳುಮಾಡಿಕೊಳ್ಳುವರು; ದ್ವೇಷ, ದುಃಖ ಗಳಿಗೆ ಆಮಂತ್ರಿಸುವರು. ತಾವು ಧೀಮಂತರೆಂಬ ಹೆಮ್ಮೆಯಿಂದ ಉಳಿದವ ರನ್ನು ಹೀಯಾಳಿಸಿ ತಮ್ಮ ಕಪಿಮುಷ್ಟಿಯಲ್ಲಿ ಹಿಡಿದಿಡಬೇಕೆಂಬ ಹಂಬಲದ ಹಾರುವರು, ಬಹುಮತದ ಅಹಂಕಾರದಿಂದ ಉಳಿದವರ ಗುಣಾವಗುಣಗಳ ಎಗ್ಗಿಲ್ಲದೆ ಎಲ್ಲರ ತಲೆಮೆಟ್ಟಿ ತುಳಿಯಲು ಹಾತೊರೆವ ಬಹುಸಂಖ್ಯಾಕರ ಜಾತಿವಾದಿಗಳು ಇಬ್ಬರೂ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಹಾಳುಮಾಡು ವುದಕ್ಕೆ ಹೊರಟ ನರರಾಕ್ಷಸರೆ ಸರಿ.

'ನೀವು ಕೆಳಗಿನವರು' ಎಂದೊಡನೆ 'ನಮಗೆ ಕೀಳರೆಂಬ ನಿಮ್ಮ ಮೂಲ ವೇನು ಗೊತ್ತೆ?' ಎಂಬ ಮಾರ್ನುಡಿ ಬಂತೆ. 'ಇದೆ ನಿಮ್ಮ ಕಾರ್ಯಕ್ಷೇತ್ರ' ಎಂದು ವಿಧಿಸುವ ವಾಕ್ಯಕ್ಕೆ 'ನಾವು ಅದರಿಂದ ಹೊರಬರತಕ್ಕವರೆ' ಎಂಬ ಪ್ರತಿಕ್ರಿಯೆ ನಿಶ್ಚಿತ. 'ನೀವು ಇಲ್ಲಿ ಅಡಿಯಿಡಲಾಗದು' × 'ನಾವು ಬಂದೇ ಬಿಡತಕ್ಕವರು.' 'ನೀವು ನಮ್ಮನ್ನು ಮುಟ್ಟಿಸಿಕೊಳ್ಳಲೇಬೇಕು'×'ಪ್ರಾಣತ್ಯಾಗಮಾಡಬಹುದು; ಹತ್ತಿರ ಹಾಯಗೊಡಲಿಕ್ಕಿಲ್ಲ'........ ಯಾರಿಗೆ ಯಾರು ಹೆದರಿ ಜಾತಿಯನ್ನು ಬಿಡುವ ಪ್ರಶ್ನೆಯೇ ಈಗ ಇಲ್ಲ. **ಜಾತಿ-ಧರ್ಮಕ್ಕಿಂತಲೂ ರಾಷ್ಟ್ರೀಯ ಸ್ವಾತಂತ್ರ್ಯವು ಮಿಗಿಲಾದುದೆಂಬುದು** ನಿಜವಿದ್ದರೆ ಅದಕ್ಕಾಗಿ ಎಲ್ಲರೂ

ತಮ್ಮ ಜಾತಿಯ (ಧರ್ಮದ) ಹೆಮ್ಮೆಯ ತ್ಯಾಗಮಾಡುವುದು ಆದ್ಯಕರ್ತವ್ಯ ವಾಗುವುದಿಲ್ಲವೆ?

ಬ್ರಾಹ್ಮಣದ್ವೇಷದ ಭೂತಕ್ಕೆ ಧೂಪಹಾಕಿ ಆ ಸೈತಾನೀ ಪ್ರಳಯದಲ್ಲಿ ಸಾವಿರಾರು ನಿರಪರಾಧೀ ಜೀವಿಗಳ ಜೀವಿತ-ವಿತ್ತದ ಧ್ವಂಸಮಾಡಿಸಿದಾಯಿತು. ಈ ಬಗೆಯ ಆಸುರೀಕೃತ್ಯಗಳಿಂದ ಬ್ರಾಹ್ಮಣರನ್ನು ಬಗ್ಗಿಸಬಹುದೆಂದು ಯಾರಾದರೂ ಭಾವಿಸಿದ್ದರೆ ಅದು ಅವರ ಬುದ್ಧಿಹೀನತೆಯ ಸಾಕ್ಷಿ. ಜಾತ್ಯಭಿಮಾನವನ್ನು ತೊರೆಯಬೇಕೆಂದು ಹಾರಯಿಸುತ್ತಿದ್ದ ಅನೇಕ ಹಾರುವರೂ ಉರಿದೆದ್ದು ರಾಷ್ಟ್ರೀಯ ದೃಷ್ಟಿಯು ಮಂದವಾಗಿ ಮತ್ತೆ ಜಾತ್ಯಂಧರಾಗುವ ಹೆದರಿಕೆಯುಂಟಾಗಿದೆ. ಆದರೆ ಇದೂ ಅಸಮಂಜಸವೆ.

ಜಾತೀಯ ದಾರಿಯು ರಾಷ್ಟ್ರೀಯ ಸ್ವಾತಂತ್ರ್ಯದತ್ತ ಒಯ್ಯುವದಿಲ್ಲ. ಜಾತಿಯೆ ಅದರ ಆದಿ; ಜಾತಿಯೆ ಅದರ ಅಂತ್ಯ. ಜಾತಿಯನ್ನು ಹಿಡಿದು ಕೊಂಡು ರಾಷ್ಟ್ರದ ಸಮಸ್ಯೆ ಬಿಡಿಸುವುದಾದರೆ ಆಡಳಿತದಲ್ಲಿ ಜಾತಿಯ ಪ್ರಾತಿನಿಧ್ಯ ಒಪ್ಪಿಕೊಳ್ಳಲೇಬೇಕು. ಭಾರತದೊಳಗಿನ ಜಾತಿಗಳಿಗೆಲ್ಲ ಪ್ರಾತಿನಿಧ್ಯವನ್ನು ಕೊಟ್ಟು ಆಡಳಿತ ಸಾಗಿಸುವುದು ಸಾಧ್ಯವೇ? ಗುಣಕ್ಕಿಂತಲೂ ಜಾತಿಯ ಹೆಸರಿನಲ್ಲಿ ಆರಿಸಿ ಬಂದ ವ್ಯಕ್ತಿ, ಅಂತರ್‌ರಾಷ್ಟ್ರೀಯ ರಂಗದಲ್ಲಿ ಬೇರೆ ದೇಶಗಳ ಕಾರ್ಯಕುಶಲರ ಎದುರು ಜಪ್ಪಾಗಿ ನಾಡಿಗೆ ಕೇಡು ಒದಗದೆ ಇದ್ದೀತೆ? ಆದುದರಿಂದ ಭಾರತದ ಏಳ್ಗೆಯನ್ನು ಹಾರಯಿಸುವವರು ರಾಷ್ಟ್ರೀಯ ದೃಷ್ಟಿಯನ್ನು ದೃಢಪಡಿಸಿಕೊಂಡು, ಯಾರು ಎಷ್ಟು ಕೆಣಕಿದರೂ ಜಾತ್ಯಂಧತೆಯು ಆವರಿಸದಂತೆ ದೃಢವ್ರತಿಗಳಾಗುವುದು ಕರ್ತವ್ಯವಾಗಿದೆ.

ಗುಣ, ಕರ್ತೃತ್ವಶಕ್ತಿಗೆ ತಕ್ಕ ಸ್ಥಾನಮಾನಗಳು, ಕೇವಲ ಬ್ರಾಹ್ಮಣನೆಂಬುದಕ್ಕಾಗಿಯೇ ದೊರೆಯದವರುಂಟು. ಬ್ರಾಹ್ಮಣನು; ಆದುದರಿಂದ ತಾನು ಬುದ್ಧಿವಂತ, ಗುಣಿಯೆಂದು ಅನೇಕ ಸ್ಥಳಗಳಿಗೆ ಆಸೆಪಡುವ ಅಥವಾ ಆ ಸ್ಥಳಗಳನ್ನು ಸಹಜವಾಗಿ ಆಕ್ರಮಿಸುತ್ತಿದ್ದ ಹಾರುವರುಂಟು. ಇಂತಹರಲ್ಲಿ ಕೆಲರು ನಿರಾಶೆಯ ಮಬ್ಬಿನಲ್ಲಿ ಆಡುವ ಮಾತುಗಳು ತಮಗೂ ರಾಷ್ಟ್ರಕ್ಕೂ ಯಾರಿಗೂ ಕಲ್ಯಾಣಕರವಾಗಿರುವುದಿಲ್ಲ. 'ಕೊನೆಗೆ ಬ್ರಾಹ್ಮಣನೇ ಮೊದಲನೆಯ ಗವ್ಹರ್ನರ ಜನರಲ್; ಮೊದಲನೆಯ ಮುಖ್ಯ ಮಂತ್ರಿ! ಆಯ್ತೊ ಇಲ್ಲೊ?' ಎಂದು ಉಸುರಿ ವಿಚಿತ್ರ ಸಮಾಧಾನ ಹಚ್ಚಿಕೊಳ್ಳುವವರುಂಟು!

ಇದು ವಿವೇಕಶೂನ್ಯಮಾತು. ಇದರಲ್ಲಿ ಎರಡು ಬಗೆಯ ಅವಿಚಾರ ವುಂಟು. ಮೊದಲನೆಯದು, ರಾಜಾಜಿ-ಜವಾಹರಲಾಲರು ಬ್ರಾಹ್ಮಣರೆಂದು ಆನಂದಿಸುವವರನ್ನೆ ಇನ್ನೊಂದು ಪ್ರಸಂಗದಲ್ಲಿ ಕೇಳಿನೋಡಿ; ಅವರನ್ನು ಬ್ರಾಹ್ಮಣರೆಂದು ಒಪ್ಪಿಕೊಳ್ಳಲಿಕ್ಕೆ ಈ ಜನ ಸಿದ್ಧವಿರುವುದಿಲ್ಲ. ಬೇಕಾದ ಜಾತಿಯವರೊಡನೆ ಊಟ ಉಡಿಗೆಗೆ, ಬೀಗತನಕ್ಕೆ ಅಡ್ಡಿಯಿರದ ರಾಜಾಜಿ, ಪಂಡಿತಜೀಯವರು ಬ್ರಾಹ್ಮಣರೆಂದು ಹಿಗ್ಗುವ ಶರಣರು ತಾವೂ ಅವರಂತೆ ಆಚರಿಸಲಿಕ್ಕೆ ಸಿದ್ಧರಿರುವರೊ? ರಾಜಾಜಿ–ಪಂಡಿತಜಿಯವರಂತೆ ತಮ್ಮ ನಾಡಿನಲ್ಲಿ ನೆಲಸಿರುವವರನ್ನೆಲ್ಲ ನಿಜವಾಗಿಯೂ ಬಾಂಧವರೆಂದು ಸ್ವೀಕರಿಸಲು ಸಿದ್ಧರಾದವರಿಗೆ ಬ್ರಾಹ್ಮಣ, ವೀರಶೈವಾದಿ ಒಣ ಹೆಮ್ಮೆಯ ಬಿಂಕವು ಎಂದೂ ಸೋಂಕಲಾರದು. ಎಲ್ಲರೂ ಹೀಗೆ ನಡೆದುಕೊಳ್ಳಲಾರಂಭಿಸುತ್ತಲೆ ಜಾತಿಯ ಜಗಳಗಳ ಇಂದಿನ ಆಸುರೀ ಸ್ವರೂಪವು ನಷ್ಟವಾಗುವುದು. ಗುಣಕ್ಕೆ ಮನ್ನಣೆ ಬರುವುದು.

ಇನ್ನೊಂದು ಅವಿಚಾರವೆಂದರೆ, ಜಾತಿಭೇದದಿಂದ ದೂರ ಹೊರಟವರನ್ನೂ ಮತ್ತೆ ಜಾತಿಯ ತೊಡಕಿನಲ್ಲಿ ತಂದು ಅವರ ಕಾರ್ಯ ಘಾತಮಾಡುವುದು! ಚುನಾವಣೆಗಳ ಕಾಲದಲ್ಲಿ ರಾಜಾಜಿ–ಪಂಡಿತಜೀಯಂತಹರನ್ನು ಬ್ರಾಹ್ಮಣರೆಂದು ನೆಪಹೇಳಿ ಹಿಂದಿಕ್ಕಬೇಕೆಂಬ ಜಾತಿದ್ವೇಷಿ ಪಿಶಾಚಿಗಳಿಗೆ ಇವರೂ ಬೆಂಬಲಿಗರಾಗಿ ದನಿಗೂಡಿಸಿದಂತಾಗುವುದಿಲ್ಲವೆ? ಆದುದರಿಂದ ಜಾತಿಯ ಈರ್ಷೆಯ ಮಾತುಗಳಿಂದ ಲಾಭವಂತೂ ಯಾರಿಗೂ ಇಲ್ಲ. ಹಾನಿಯೆ ವಿಶೇಷ.

ಜಾತಿನಿರ್ಮೂಲನದ ಆಂದೋಲನವು, ಅಸಹಕಾರದ ಅಂಗವಾಗಿ ಹರಿಜನೋದ್ಧಾರದೊಡನೆಯೆ ವ್ಯಕ್ತವಾಗಿ ಆರಂಭವಾಗಬೇಕಾಗಿತ್ತು. ಈಗ ಅದಕ್ಕೆ ಸ್ಪಷ್ಟವಾಗಿ ಬಾಯಿಯೊಡೆದಿದೆ. ಬಿತ್ತಿಗೆಯಾದ ಮರುದಿನವೆ ತೆನೆಯಾಗುವುದಿಲ್ಲ ಕಾಯಬೇಕು. ಕಾಯದೆ ಕಾಯಾಗದು. ಸಮಾನ ಸ್ಥಿತಿಗತಿಯವರಲ್ಲಿ ಸಂಪರ್ಕ-ಸಂಬಂಧ, ಕಾರಣ–ಕಾರ್ಯಗಳು ಹೆಚ್ಚಿದಂತೆ ಜನ್ಮದಿಂದಿರುವ ಭೇದಭಾವವು ಅಳಿಯುವುದು. ವೈಷಮ್ಯಬುದ್ಧಿಯು ಮುಂದಿನ ಪೀಳಿಗೆಗೆ ಕ್ರಮವಾಗಿ ಕಡಿಮೆಯಾಗುವುದು.

ಬುದ್ಧಿ, ಭಾವನೆ ಮತ್ತು ಸಂಕಲ್ಪ, ಈ ಮೂರರ ಬೆಂಬಲದಿಂದ

ಆದುದೆ ಸಮರ್ಪಕವಾದ ಕ್ರಿಯೆ. ಬುದ್ಧಿ ಹೆಳವ. ಹೀಗಾಗುವುದು ಲೇಸೆಂದು ಬರಿ ಹೇಳಬಲ್ಲುದು. ಬುದ್ಧಿಗೆ ಭಾವನೆಯ ಕಾವು ಇಲ್ಲದೆ ಕೆಲಸವಾಗದು. ಬರಿ ಭಾವನೆ ಕುರುಡ; ಅಥವಾ ಹುಂಬ; ಎಂಜಿನ್ ಶಕ್ತಿಯಿದ್ದಂತೆ. ಅದನ್ನು ಅಂಕೆಯಲ್ಲಿರಿಸುವ ಸಾಧನವಾದ ಬುದ್ಧಿಯ ನೆರವು ಇಲ್ಲದಲ್ಲಿ ಭಾವನೆಯು ಮನುಷ್ಯನನ್ನು ಅವಿಚಾರದ ಮಾರ್ಗದಲ್ಲಿ ನೂಕದಿರದು. ಬುದ್ಧಿಭಾವನೆಗಳಿಗೆ ಸಂಕಲ್ಪಶಕ್ತಿಯ ಸತತ ಪ್ರೇರಣೆಯು ದೊರೆತರೆ ಆ ಕಾರ್ಯವು ಮುಂದುವರೆಯುವುದು. ಇದೆ ಕ್ರತು. ರಾಷ್ಟ್ರೀಯ ಭಾವನೆಯು ಬಲಗೊಂಡು ಜಾತ್ಯತೀತ ಸಮಾಜ ನಿರ್ಮಾಣಕ್ಕಾಗಿ ಮಾಡುವ ಸಂಕಲ್ಪಶುದ್ಧಿಗಾಗಿ ಅದರ ವೈಚಾರಿಕ ಭೂಮಿಕೆಯು ಸ್ಪಷ್ಟವಾಗಬೇಕಾಗುತ್ತದೆ. ಇದನ್ನು ವಿವರಿಸುವುದೆ ಈ ಲೇಖನದ ಗುರಿ.

ಇದನ್ನು ಬರೆಯುವಾಗ ಡಾ. ಘುರ್ಯೆ, ಶ್ರೀ. ದಿವೇಕರ, ಬಳ್ಳುಂಜೆಯವರ ಪುಸ್ತಕಗಳು ಸಹಾಯಕವಾದುವು. ಆದರೂ ಮಹಾಮಹೋಪಾಧ್ಯಾಯ ಕಾಣೆಯವರ History of Dharmashastras ಎಂಬ ಮಹಾಗ್ರಂಥದಿಂದ ಪಡೆದ ಲಾಭವು ವಿಶೇಷ. ಅವರಿಗೆಲ್ಲ ವಂದನೆಗಳು.

**ಶಂ. ಬಾ. ಜೋಶಿ**

# ಪರಿವಿಡಿ







# ವಿಚಾರಸೂತ್ರ:



ಸತ್ಯಂ ( ಜ್ಞಾನಂ ಅನಂತಂ ) ಬ್ರಹ್ಮ ।
Truth is God.

ಪುರುಷ ಏವೇದಂ ಸರ್ವಂ ಯದ್ ಭೂತಂ ಯಚ್ಚ ಭವ್ಯಂ ।

ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ ।

ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಸಮಂ ಪಶ್ಯನ್ ಆತ್ಮಯಾಜೀ ಸ್ವಾರಾಜ್ಯಮ್ ಅಧಿಗಚ್ಛತಿ ॥

ಅಹಂ ಸರ್ವೇಷು ಭೂತೇಷು ಭೂತಾತ್ಮಾದಾಸ್ಥಿತಃ ಸದಾ ।
ತಮವಜ್ಞಾಯ ಮಾಂ ಮರ್ತ್ಯಃ ಕುರುತೇಽರ್ಚಾ ವಿಡಂಬನಮ್ ॥

ಯೋ ಮಾಂ ಸರ್ವೇಷು ಭೂತೇಷು ಸಂತಮಾತ್ಮಾನಮೀಶ್ವರಮ್ ।
ಹಿತ್ವಾರ್ಚಾಂ ಭಜತೇ ಮೌಢ್ಯಾತ್ ಭಸ್ಮನ್ಯೇವ ಜುಹೋತಿ ಸಃ ॥

ಅಪಹಾಯ ನಿಜಂ ಕರ್ಮ ಕೃಷ್ಣ ಕೃಷ್ಣೇತಿ ವಾದಿನಃ ।
ತೇ ಹರೇರ್ ದ್ವೇಷಿಣಃ ಪಾಪಾಃ ಧರ್ಮಾರ್ಥಂ ಜನ್ಮ ಯತ್ ಹರೇಃ ॥

ಸರ್ವಸ್ಯೈವ ಜನಸ್ಯಾಸ್ಯ ವಿಷ್ಣುರಭ್ಯಂತರೇ ಸ್ಥಿತಃ ।
ತಂ ಪರಿತ್ಯಜ್ಯ ಯೇ ಯಾಂತಿ ಬಹಿರ್ವಿಷ್ಣುಂ ನರಾಧಮಾಃ ॥

ಪರಸ್ಪರಂ ಭಾವಯಂತಃ ಶ್ರೇಯಃ ಪರಂ ಅವಾಪ್ಸ್ಯಥ ॥

ಸತ್ಯಾನ್ನಾಸ್ತಿ ಪರೋ ಧರ್ಮಃ ।

ಯದ್ಭೂತಹಿತಂ ಅತ್ಯಂತಂ ಏತತ್ ಸತ್ಯಂ ಮತಂ ಮಮ ॥

In all posibility of things there is and can be but one misery is nature and creature left to itself, the one happiness is the Life, the Light, the Spirit of God, manifested in nature and creature, this is the true meaning of the words of our Lord: There is but one that good and that is God

ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗಂತಿಂ ತಾತ, ಗಚ್ಛತಿ ।

ಸ್ವಲ್ಪಂ ಅಪಿ ಅಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ।

ಲೋಕಾಃ ಸಮಸ್ತಾಃ ಸುಖಿನೋ ಭವಂತು ॥

**ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ।**

---

# ಯಕ್ಷಪ್ರಶ್ನೆ

‘ಶ್ರೀ ವ್ಯಾಸರು ಮಹಾಭಾರತದ ನಿಮಿತ್ತದಿಂದ ಮಾನವನ ಸನಾತನ ಇತಿಹಾಸವನ್ನು ಬರೆದಿರುವರು,’ ಎಂದು ಮಹಾತ್ಮಾಜೀಯವರು ಒಂದು ಸಂದರ್ಭದಲ್ಲಿ ಹೇಳಿದ್ದು ಯಥಾರ್ಥದ ಸಂಗತಿಯಾಗಿದೆ. ಮಹಾಭಾರತಾಂತರ್ಗತ ಯಕ್ಷಪ್ರಶ್ನೆಯು ಪ್ರಸ್ತುತ ಕತೆಯಲ್ಲಿಯೂ ಮಹಾತ್ಮಾಜಿಯವರ ಈ ಮಾತಿನ ಅನುಭವವು ಬರುತ್ತದೆ.

ಪಾಂಡವರು ವನವಾಸದಲ್ಲಿ ಇದ್ದಾಗ ಅವರು ವಾಸಿಸುತ್ತಿದ್ದ ಅಡವಿಯೊಳಗಿನ ಒಬ್ಬ ಬ್ರಾಹ್ಮಣನ ಅರಣಿಗಳನ್ನು ಒಂದು ಕೃಷ್ಣಸಾರಮೃಗವು ಕೊಂಡು ಓಡಿಹೋಯಿತು. ಬ್ರಾಹ್ಮಣನ ಅಗ್ನಿಹೋತ್ರವು ಎಂದೂ ಲೋಪವಾಗಬಾರದು. ಅರಣಿಗಳೇ ಹೋದುದರಿಂದ ತನ್ನ ಅಗ್ನಿಸೇವೆಯೇ ಕಟ್ಟಾಗುವ ಹೊತ್ತುಬಂದಿದೆ, ಏನುಮಾಡಲಿ? ಎಂದು ಆ ಬ್ರಾಹ್ಮಣನು ಧರ್ಮನಲ್ಲಿಗೆ ಮೊರೆತಂದನು. ಕ್ಷತ್ರಧರ್ಮಕ್ಕನುಸರಿಸಿ ಧರ್ಮನು ಆ ಬ್ರಾಹ್ಮಣನ ಧರ್ಮಕಾರ್ಯಕ್ಕೆ ನೆರವಾಗುವುದು ತನ್ನ ಕರ್ತವ್ಯವೆಂದು ಬಗೆದು ತಮ್ಮಂದಿರೊಡನೆ ಅರಣಿಯನ್ನು ಹುಡುಕಿಕೊಂಡು ಬರುವುದಕ್ಕಾಗಿ ಹೊರ ಹೊರಟನು.

ಅರಣಿಯನ್ನು ಹುಡುಕಲು ಅಡವಿಯನ್ನು ಅಲೆಯುತ್ತಿರುವಾಗ ಪಾಂಡವರಿಗೆ ನೀರಡಿಕೆಯಾಯಿತು. ಧರ್ಮನು, ನಕುಲನಿಗೆ ಸಮೀಪದಲ್ಲಿ ಎಲ್ಲಿಯಾದರೂ ನೀರಿದೆಯೆ ಎಂಬುದನ್ನು ಮರವನ್ನೇರಿ ನಿರೀಕ್ಷಿಸಲು ಬಿನ್ನವಿಸಿದನು. ಹತ್ತಿರದಲ್ಲಿಯೇ ಇರುವ ಒಂದು ಮರವನ್ನೇರಿ ನಕುಲನು ಸುತ್ತಲೂ ಸಿಡಿದಾಗಿ ನೋಡುವಷ್ಟರಲ್ಲಿ ಅನತಿ ದೂರದಲ್ಲಿಯೆ ನೀರಿನ ಆಶ್ರಯದಿಂದ ಬೆಳೆದ ಹಲವು ಮರಗಳು ಕಂಡವು. ಸಾರಸಪಕ್ಷಿಗಳೂ ಅಲ್ಲಿ ಹಾರಾಡುತ್ತಿರುವುದು ಕಾಣಿಸಿತು. ಆದುದರಿಂದ ಅಲ್ಲಿ ಸರೋವರವು ಇರಲೇ ಬೇಕೆಂದು ನಿರ್ಧರಿಸಿ ಹೇಳಿದನು. ಅಣ್ಣನ ಅಪ್ಪಣೆಯಂತೆ ನೀರುತರಲು ಕೊಳಕ್ಕೆ ಹೊರಟನು.

ನೀರಡಿಸಿದುದರಿಂದ ತಾನೂ ಕುಡಿದು ಅಣ್ಣಂದಿರಿಗೂ ಒಯ್ಯಬೇಕೆಂದು ಕೊಳದೊಳಗೆ ಕಾಲಿಟ್ಟನು. ಅಷ್ಟರಲ್ಲಿ ಒಂದು ಬಾನುಲಿಯು ಕೇಳಬಂದಿತು: 'ತಮ್ಮಾ, ಈ ಜಲಾಶಯದ ಮೇಲಿನ ಒಡೆತನವು ನನ್ನದು. ನನ್ನ ಒಪ್ಪಿಗೆ ಯಿಲ್ಲದೆ ಇಲ್ಲಿ ಯಾರೂ ನೀರು ಕುಡಿಯಲಾರರು. ನಿನಗೆ ನೀರು ಬೇಕಾಗಿದ್ದರೆ ಮೊದಲು ನನ್ನ ಪ್ರಶ್ನೆಗಳಿಗೆ ಉತ್ತರಕೊಡು.' ನಕುಲನು ಅದಾವುದನ್ನೂ ಕಿವಿಯದೆ ನೇರವಾಗಿ ನೀರು ಮೊಗೆಯಹೋದನು. ಆ ಗಳಿಗೆಯಲ್ಲಿ ಅರಿವು ಹಾರಿ ನೆಲಕ್ಕುರುಳಿದನು.

ತಮ್ಮನು ಇನ್ನೂ ಬಾರದ್ದನ್ನು ನೋಡಿ ಧರ್ಮನು ಸಹದೇವನಿಗೆ ತಮ್ಮನನ್ನೊಡಗೊಂಡು ನೀರುತರಲು ಸೂಚಿಸಿದನು. ಆತನು ಜಲಾಶಯವನ್ನು ಸೇರಿ ನೀರಿಗೆ ಇಳಿಯುವಷ್ಟರಲ್ಲಿ ತಮ್ಮನು ನಿಶ್ಚೇಷ್ಟಿತನಾಗಿ ಅಲ್ಲಿ ಬಿದ್ದಿರುವುದು ಕಂಡಿತು. ಸೋಜಿಗವಾಯಿತು. ಆದರೂ ನೀರಿಲ್ಲದೆ ಬದುಕಲಾರ. ನೀರು ಕುಡಿಯಹೋದನು. ಮತ್ತೆ ಹಿಂದಿನ ಮಾತುಗಳೇ ಅಂತರಿಕ್ಷದೊಳಗಿಂದ ಕೇಳಬಂದುವು. ನೀರು ದೊರಕಿಸುವ ಅವಸರದಲ್ಲಿ ಸಹದೇವನೂ ಆ ನುಡಿಯನ್ನು ಗಮನಿಸಲಿಲ್ಲ. ನೀರು ಗಂಟಲಿನಲ್ಲಿ ಇಳಿವಷ್ಟರಲ್ಲಿ ಅದು ವಿಷವಾಗಿ ಪರಿಣಮಿಸಿತು. ಆತನೂ ಮೂರ್ಛಿತನಾಗಿ ಬಿದ್ದನು.

ಆಗ ನೀರಿಗಾಗಿ ಹೊರಡುವ ಅರ್ಜುನನ ಸರತಿ ಬಂತು. ಅರ್ಜುನನಿಗೆ ತಾನು ಲೋಕೈಕವೀರನೆಂಬ ಹೆಮ್ಮೆ ಬೇರೆ! ಸರೋವರಕ್ಕೆ ಬಂದನು. ತಮ್ಮಂದಿರ ಹೆಣಗಳು ಕಾಣಿಸಿದುವು. ಆತನಿಗೆ ಮೊದಲು ಅಚ್ಚರಿ. ತನ್ನ ತಮ್ಮಂದಿರನ್ನು ಸಾಯಿಸಿದ ಸಾಸಿಗನಾರೆಂದು ಸೋಜಿಗಪಟ್ಟನು. ಮೊದಲು ನೀರು ಕುಡಿದು ಬಳಿಕ ತಮ್ಮಂದಿರನ್ನು ಕೊಂದವನಿಗೆ ಕೈತೋರುವೆನು. ಆ ನೀಚನು ತನ್ನ ಕೂದಲೆಳೆಯನ್ನೂ ಕೊಂಕಿಸಲಾರನು ಎಂಬ ಗರುವತನದಲ್ಲಿ ಆತನು ನೀರು ಕುಡಿಯಹೋದನು. ಆಗ ಮತ್ತೆ ಅದೇ ಆ ಅಜ್ಞಾತ ಸೊಲ್ಲು! 'ಅರ್ಜುನಾ, ನನ್ನ ಪ್ರಶ್ನೆಗಳಿಗೆ ಉತ್ತರಕೊಡದೆ ನಿನಗೆ ಜೀವನವಿಲ್ಲ. ಬಲುಮೆಯಿಂದ ಕುಡಿಯಹೋದರೆ ನಿನ್ನ ತಮ್ಮಂದಿರ ಪಾಡೇ ನಿನ್ನದು.' ಅರ್ಜುನನಿಗೆ ಹಿಡಿಸಲಾರದ ಸಿಟ್ಟು, ಇದನ್ನು ಕೇಳಿ ಕೂಡಲೆ ಎಲ್ಲ ದಿಕ್ಕುಗಳಿಗೂ ಬಾಣಗಳ ಮಳೆಗರೆದನು. ಶಬ್ದ-ವೇಧದಿಂದ ಆ ವಿರೋಧಿಯನ್ನು ಸಂಹರಿಸ ಬಗೆದನು.

ಅಂತರಾಳದಲ್ಲಿ ನಗು ಕೇಳಬಂದಿತು. ನನ್ನನ್ನು ಕೊಲ್ಲಲಮ್ಮುವನಾವನಿಲ್ಲ. ನೀನು ವ್ಯರ್ಥ ಶ್ರಮಪಟ್ಟು ನಗೆಗೀಡಾಗಬೇಡ; ಎಂಬ ಧ್ವನಿ ಆತನ ಕಿವಿಗೆ ಬಂದಿತು. ಅರ್ಜುನನು ಅದಾವುದನ್ನೂ ಲೆಕ್ಕಿಸದೆ, ನೀರು ಕುಡಿಯ ಬಂದನು. ಹತ್ತಿರಬಂದು ತನ್ನನ್ನು ತಡೆಯುವುದಕ್ಕಾದರೂ ಬರಲಿ, ನೋಡುವೆ, ಎಂಬ ಆವೇಶದಲ್ಲಿ ನೀರುಕುಡಿದನು. ನೆಲಕ್ಕೆ ಒರಗಿದನು. ಪರಾಕ್ರಮದ ಹುಮ್ಮಸದ ಭೀಮನು ಬಂದನು. ಅವನದೂ ಅದೇಗತಿಯಾಯಿತು.

ಕೊನೆಗೆ ಧರ್ಮನೆ,ವಿಶ್ವಕರ್ಮನಿಂದ ನಿರ್ಮಿತವಾದಂತಿದ್ದ ಸುಂದರವಾದ ಆ ಸರಸ್ಸಿಗೆ ಬಂದನು. ತಮ್ಮಂದಿರು ಅರಿವುಗೆಟ್ಟು ಹೆಣಗಳಾಗಿ ಬಿದ್ದುಕೊಂಡಿದ್ದರು. ಧರ್ಮನಿಗೆ ಅದೆಲ್ಲವನ್ನೂ ಕಂಡು ಕಳವಳವಾಯಿತು. ಹತ್ತಿರಬಂದು ನಿಟ್ಟಿಸಿದನು. ಮೈಮೇಲೆ ಶಸ್ತ್ರದ ಗಾಯಗಳೇನೂ ಕಾಣಲಿಲ್ಲ. ದುರ್ಯೋಧನನು ಮೋಸದಿಂದ ಮಾಡಿದ ವಿಷಪ್ರಯೋಗವೆನಬೇಕೆ? ಹೆಣಗಳಂತಾಗಿದ್ದರೂ ಮೋರೆಯ ಮೇಲಿನ ಕಾಂತಿಯು ಸ್ವಲ್ಪವೂ ಕುಂದಿರಲಿಲ್ಲ! ಅದರಿಂದ ಆತನು ಸ್ವಲ್ಪ ಸಮಾಧಾನಪಟ್ಟುಕೊಂಡನು. ಇದೇನು ಎಂಬುದೇ ತಿಳಿಯದೆ ಕಂಗೆಟ್ಟನು.

ಮೊದಲು ನೀರುಕುಡಿಯ ಬಗೆದು ಕೊಳದತ್ತ ಹೊರಡಲು ಮತ್ತೆ ಆ ಸೊಲ್ಲು! 'ನನ್ನ ಪ್ರಶ್ನೆಗಳಿಗೆ ಮಾರುಗೊಡದೆ ನೀರು ಕುಡಿದವರು ಬದುಕಲಾರರು. ನೀನೂ ಒತ್ತಾಯದಿಂದ ನೀರು ಕುಡಿಯಹೋದರೆ ನಿನ್ನ ತಮ್ಮಂದಿರ ಸ್ಥಿತಿಯೆ ನಿನಗೂ ಬಂದೀತು;' ಎಂಬ ಆಕಾಶವಾಣಿಯು ಕೇಳಬಂತು.

ಧರ್ಮನು ಆ ಧ್ವನಿಗೆ ಪ್ರತಿಯಾಗಿ ಪ್ರಶ್ನಿಸಿದನು. 'ಹೇ ಅದೃಶ್ಯ ಶಕ್ತಿಯೆ! ನೀನಾರು? ನೀನಾವುದಾದರೂ ದೇವಾಧಿದೇವತೆಯಾಗಿರಬೇಕು. ಅಲ್ಲದೆ ಇದ್ದರೆ ನನ್ನ ತಮ್ಮಂದಿರನ್ನು ಈ ಪರಿಯಾಗಿ ನೆಲಕ್ಕುರಿಳಿಸುವ ಅರ್ಪು ಆವನಿಗೂ ಇಲ್ಲ. ನೀನಾರೆಂಬುದು ನನಗೆ ತಿಳಿಯಬಹುದೇ ?'

ಧರ್ಮನ ಎದುರು ಕೊಳದಲ್ಲಿ ಒಂದು ಬಕಪಕ್ಷಿಯು ಕಾಣಿಸಿಕೊಂಡಿತು. ಈ ಸರೋರದ ತೀರದಲ್ಲಿ ಶೈವಾಲ ಹಾಗೂ ಮೀನಗಳನ್ನು ತಿಂದು ಬದುಕುವ ಬಕನು ತಾನು, ಎಂಬ ಉತ್ತರವು ಬಂದಿತು. ಧರ್ಮನು ಮರಳಿ ನುಡಿದನು.

ನೀನು ಕೇವಲ ಈ ಬಕನಲ್ಲ. ಮತ್ತಾರಾದರೂ ಒಂದು ಮಹಾಶಕ್ತಿಯಾಗಿರಬೇಕೆಂಬ ಧರ್ಮನಮಾತಿಗೆ ಪ್ರತಿಯಾಗಿ ಒಂದು ಸೊಲ್ಲು ಕೇಳಬಂದಿತು. 'ಇಕೊ! ನಾನೊಂದು ಯಕ್ಷ; ನಾನು ಈ ಕೊಳದ ಒಡೆಯ' ಎಂಬ ನುಡಿಯು ಬಂದ ದಿಕ್ಕಿನಕಡೆಗೆ ಧರ್ಮನು ಹೊರಳಿನೋಡಿದನು. ಕೊಳದ ತಡಿಗೆ ಆತುಕೊಂಡ ಪರ್ವತ ಪ್ರಾಯವಾದ ಒಂದು ಭವ್ಯಮೂರ್ತಿಯನ್ನು ಧರ್ಮನು ಕಂಡನು. ತಾಲವೃಕ್ಷದಂತೆ ಎತ್ತರವಾದ ಶರೀರನು; ಭಯಾನಕ ನೇತ್ರನು; ಅಗ್ನಿಸೂರ್ಯರಂತೆ ಅಂಗಕಾಂತಿಯುವನು. ಮೇಘ ಗಂಭೀರಧ್ವನಿಯಿಂದ ಧರ್ಮನಿಗೆ ನುಡಿದನು. ತನ್ನ ಪ್ರಶ್ನೆಗಳನ್ನು ಬಿಡಿಸುವೆಯಾದರೆ ನೀರು ಕುಡಿ ಎಂದನು.

ಅವರಿಬ್ಬರಲ್ಲಿ ಹಲವು ಪ್ರಶ್ನೋತ್ತರಗಳು ನಡೆದುವು. ಧರ್ಮನು, ಯಕ್ಷನು ಒಡ್ಡಿದ ತೊಡಕುಗಳಿಗೆ ತನಗೆ ತಿಳಿದ ನ್ಯಾಯವಾದ ಉತ್ತರಗಳನ್ನು ಕೊಟ್ಟನು. ಯಕ್ಷನಿಗೆ ಸಂತೋಷವಾಯಿತು. 'ನಾನು ನಿನ್ನ ನುಡಿಗಳಿಗೆ ಒಲಿದಿದ್ದೇನೆ. ನಿನ್ನ ತಮ್ಮಂದಿರಲ್ಲಿ ಬೇಕಾದ ಒಬ್ಬನನ್ನು ಬದುಕಿಸಲು ಕೇಳು' ಎಂದು ಯಕ್ಷನು ಹೇಳಿದನು. ನಕುಲನು ಜೀವಂತನಾಗಲೆಂದು ಧರ್ಮನು ಕೇಳಿಕೊಂಡನು.' ಯಕ್ಷನು ಸೋಜಿಗಗೊಂಡಂತೆ, 'ಎಲಾ! ಧರ್ಮಾ ಇದೇನು ಮಾಡಿದೆ? ಅತುಲಪರಾಕ್ರಮಿ ಭೀಮನನ್ನಾಗಲಿ, ಅಸದೃಶ ವೀರನಾದ ಅರ್ಜುನನನ್ನಾಗಲಿ, ಬದುಕಿಸಲು ಹೇಳದೆ ತೀರ ಸಾಮಾನ್ಯ ಶಕ್ತಿಯ ನಕುಲನನ್ನೇಕೇ ಕೇಳಿಕೊಂಡೆ ?' ಎಂದು ವಿಚಾರಿಸಿದನು.

ಕೌರವರನ್ನು ಎದುರಿಸುವ ಹೊಣೆಯ ನಾಳಿನಚಿಂತೆಯು ತಲೆತಿನ್ನುತ್ತಿದ್ದರೂ ಯುಧಿಷ್ಠಿರನು ಭೀಮಾರ್ಜುನರನ್ನು ಬದುಕಿಸಲು ಪ್ರಾರ್ಥಿಸಲಿಲ್ಲ. ಕುಂತಿಯ ಒಬ್ಬ ಮಗನು ನಾನು ಜೀವಂತವಾಗಿರುವಂತೆ, ನನ್ನ ಇನ್ನೊಬ್ಬ ತಾಯಿ ಮಾದ್ರಿಯ ಒಬ್ಬ ಮಗನೂ ಬದುಕುವುದು ಧರ್ಮವು; ತನ್ನ ಬೆನ್ನ-ಬಂದ ತಮ್ಮಂದಿರೆಂಬ ಮೋಹದಿಂದ ಭೀಮಾರ್ಜುನರಲ್ಲಿ ಯಾರನ್ನಾದರೂ ಬದುಕಿಸಲು ಕೇಳಿದ್ದರೆ ನಾನು ನನ್ನ ಕರ್ತವ್ಯದಲ್ಲಿ ತಪ್ಪಿದಂತಾಗುತ್ತಿತ್ತು; ಎಂದು ಯಕ್ಷನಿಗೆ ತನ್ನ ಹೃದ್ಗತವನ್ನು ತಿಳಿಸಿಹೇಳಿದನು.

ಯಕ್ಷನು ಇನ್ನೂ ಮೆಚ್ಚಿ ನಿನ್ನ ತಮ್ಮಂದಿರೆಲ್ಲ ಬದುಕಲಿ ಎಂದು ಹರಸಿದನು. ಗಾಢನಿದ್ರೆಯಿಂದ ಎಚ್ಚತ್ತವರಂತೆ ಎಲ್ಲರೂ ನಗುಮೊಗದಿಂದ

ಎದ್ದರು. ಯಕ್ಷನಾದರೂ ಧರ್ಮನಿಗೆ, ತಾನು ಕೇವಲ ಒಂದು ಸಾಮಾನ್ಯ ಯಕ್ಷವಲ್ಲ; ಪ್ರತ್ಯಕ್ಷ ಯಮ-ಧರ್ಮರಾಯನೇ ಆಗಿದ್ದೇನೆಂದು ದರ್ಶನವಿತ್ತು ಅದೃಶ್ಯನಾದನು. ಅದೃಶ್ಯನಾಗುವ ಮೊದಲು ಎಲ್ಲ ಪಾಂಡವರಿಗೆ ಜೀವನ ವನ್ನಿತ್ತುದಲ್ಲದೆ ಆ ಬ್ರಾಹ್ಮಣನ ಕಳೆದ ಅರಣಿ ಮತ್ತು ಪಾತ್ರೆಯನ್ನು ಮರಳಿ ಕೊಟ್ಟನು. ತಾನೇ ಕೃಷ್ಣಸಾರಮೃಗರೂಪದಿಂದ ಅವನ್ನು ದೋಚಿಕೊಂಡು ಬಂದುದಾಗಿಯೂ ಒಳಗುಟ್ಟನ್ನು ವಿವರಿಸಿದನು.

ವ್ಯಾಸರು ಈ ಕಥೆಯ ರೂಪದಿಂದ ಒಂದು ಸನಾತನ ಸತ್ಯವನ್ನು ಲೋಕಕ್ಕೆ ಅರುಹಿದ್ದಾರೆ. ಇದರಲ್ಲಿ ಕೆಲವು ಸಂಕೇತಗಳಿವೆ. ಆ ಸಂಕೇತಗಳ ಅರ್ಥವು ತಿಳಿದರೆ ಉಳಿದ ಕಥೆಯ ಸ್ವಾರಸ್ಯವು ಚೆನ್ನಾಗಿ ಮನಸ್ಸಿಗೆ ಹೊಳೆಯು ವುದು. ವಿಶ್ವಕರ್ಮ ನಿರ್ಮಿತವಾದ ಸರೋವರದಂತಹ ಆ ಜಲಾಶಯ ವೆಂದರೆ 'ಜೀವನ'-ಕಾಸಾರ. ಇಲ್ಲಿ ನೀರನ್ನು 'ಜೀವನ' ಎಂಬರ್ಥದಲ್ಲಿ ಬಳಸಿದ್ದಾಗಿದೆ.

ಮರವು, ಮೀನಗಳು ಜೀವಿಗಳ ಪ್ರತೀಕ. ಮರವನ್ನು (ಜೀವಿಯ) ಸಂಸಾರಕ್ಕೆ ಹೋಲಿಸುವ ಸಂಪ್ರದಾಯವು ಅತ್ಯಂತ ಪುರಾತನವಾಗಿದೆ. ತೈತ್ತಿ ರೀಯೋಪನಿಷತ್ತಿನಲ್ಲಿ ತ್ರಿಶಂಕು ಋಷಿಯ ಒಂದು ಅನುಭಾವ ವಚನದಲ್ಲಿ ಈ ರೂಪಕವು ಬಂದಿದೆ. 'ಅಹಂ ವೃಕ್ಷಸ್ಯರೇರಿವ' ನಾನು (ಸಂಸಾರರೂಪಿ) ವೃಕ್ಷದ (ಅಂತರ್ಯಾಮಿಯಾಗಿ) ಅದರ ಪ್ರೇರಕನಾಗಿದ್ದೇನೆ; ಎಂಬ ಈ ವಚನ ದೊಂದಿಗೆ ಗೀತೆಯೊಳಗಿನ ಅಶ್ವತ್ಥವೃಕ್ಷದ ವರ್ಣನೆಯನ್ನು ನೆನೆದುಕೊಳ್ಳ ಬಹುದು. ಧರ್ಮನು ನಕುಲನಿಗೆ ಮರವನ್ನೇರಿ ನಿರೀಕ್ಷಿಸಿ ನೀರನ್ನು ಕಂಡ್ಕು ಹಿಡಿಯಲು ಹೇಳಿದ್ದಾನೆ. ಸಂಸಾರ ವೃಕ್ಷದ ತುದಿಯಲ್ಲಿ ನಿಂತು ಸಮ್ಯಕ್ ರೀತಿಯಿಂದ ನೋಡಿದ್ದಲ್ಲದೆ ಜೀವನಕಾಸಾರವು ಗೋಚರವಾಗದು. ಆ ಸರೋವರದ ದಂಡೆಯಲ್ಲಿ ಪ್ರಾಣಿ ವನಸ್ಪತಿಗಳು ಇರುವುದು ನಕುಲನ ಕಣ್ಣಿಗೆ ಬೀಳುವುದು.

('ಜೀವನ'-)ಕಾಸಾರದ ಸ್ವಾಮಿತ್ವವು ಮೊದಲಿನಿಂದಲೂ ತನಗೆ ಸೇರಿ ದ್ದೆಂದು ಯಕ್ಷನು ಹೇಳುವನು. ಈ ಯಕ್ಷನೆಂದರೆ 'ಕಾಲ' (Time-spirit) ಎಂಬುದು ನಿಃಸಂದಿಗ್ಧವಾಗಿದೆ. ಇದೇ ಯಕ್ಷನು ಧರ್ಮನಿಗೆ ಆರಂಭದಲ್ಲಿ ಬಕ-ರೂಪದಲ್ಲಿ ಕಾಣಿಸಿಕೊಂಡನೆಂಬುದೂ ಅರ್ಥವತ್ತಾಗಿದೆ.

ಸರೋವರದೊಳಗಿನ ಶೈವಾಲ ಮತ್ತು ಮೀನಗಳಿಂದ ತಾನು ಜೀವಿಸುವು ದಾಗಿ ಆ ಬಕವು ಹೇಳುವ ಔಚಿತ್ಯವು ಇದರಿಂದ ಸ್ಪಷ್ಟವಾಗುವುದು. ಈ ವಿಷಯದಲ್ಲಿ ಇನ್ನೂ ಏನಾದರೂ ಸಂದೇಹವಿದ್ದಲ್ಲಿ ಈ ಅಧ್ಯಾಯದ ಕೊನೆ ಯಲ್ಲಿ ವ್ಯಾಸರು ಅದನ್ನೂ ನಿವಾರಿಸಿದ್ದಾರೆ. 'ನೀನು ಸಾಮಾನ್ಯ ಯಕ್ಷ ನಾಗಿರಲಾರೆ' ಎಂದು ಧರ್ಮನು ಕೇಳಿಕೊಂಡಾಗ ತಾನು ಪ್ರತ್ಯಕ್ಷ ಯಮ-ಧರ್ಮ ನೆಂದೇ ಹೇಳಿ ಆ ಯಕ್ಷವು ಅದೃಶ್ಯವಾದ ವರ್ಣನೆಯುಂಟು (ಆರಣೇಯ ಪರ್ವ ೩೧೫. ೬ )

ಪ್ರಾಣಿಮಾತ್ರರೆಲ್ಲ ಕಾಲವಶರು. ಕಾಲನ ಕೈಯಲ್ಲಿದ್ದಾರೆ. ಕಾಲ ಪುರುಷನು ಕಾಲಕಾಲಕ್ಕೆ ಕೆಲವೊಂದು ಜೀವನಸಮಸ್ಯೆಗಳನ್ನು ಮುಂದೊಡು ತ್ತಿರುತ್ತಾನೆ. ಆ ಸಮಸ್ಯೆಗಳನ್ನು ಬಿಡಿಸದೆ ಯಾರಿಗೂ ಜೀವಿಸುವ ಅರ್ಹತೆಯು ಇಲ್ಲ. 'ಜೀವನ' ಬೇಕಾದವರು ಯಕ್ಷನು ಎಂದರೆ ಕಾಲ- ಪುರುಷನು ಒಡ್ಡಿದ ಪ್ರಶ್ನೆಗಳನ್ನು ಮೊದಲು ಬಿಡಿಸಲೇಬೇಕು. ಇಲ್ಲವಾದರೆ ಹೇಗೂ ಮೊದಲು ಬದುಕುವಾ, ಎಂದು ಒತ್ತಾಯದಿಂದ ಜೀವನ-ಕಾಸಾರ ದೊಳಗಿನ ನೀರು ಕುಡಿಯ ಹೋದರೆ ಅವರು ನೆಲಕ್ಕುರುಳುವುದೇ ಕಂಡಿತ. ಭೀಮಾರ್ಜುನಾದಿ ಪಾಂಡವರ ಪಾಡೆ ಹಾಗಾದ ಬಳಿಕ ಉಳಿದವರು ಯಾವ ಗಿಡದ ತೊಪ್ಪಲು!

ಕಾಲನಿಗೆ ಯಮ-ಧರ್ಮನೆಂದಿರುವ ಹೆಸರಿನ ಔಚಿತ್ಯವು ಇಲ್ಲಿ ಶ್ರೀ ವ್ಯಾಸರು ಬಹಳ ಉದಾತ್ತವಾದ ತಾತ್ವಿಕ ಭೂಮಿಕೆಯ ಮೇಲಿಂದ ಮಾಡಿದ ವಿವರಣೆಯಿಂದ ಚೆನ್ನಾಗಿ ಮನವರಿಕೆಯಾಗುವಂತಿದೆ. ಕಾಲವು ಲೋಕವನ್ನು (ಯಮ) ನಿಯಮಬದ್ಧವಾಗಿ ಇರಿಸಿದೆ. ಕಾಲನು ಲೋಕವನ್ನು ಸಂಯಮ ದಲ್ಲಿ ಇರಿಸಿಕೊಂಡ ಅಂದವನ್ನೆ ಸೂಕ್ಷ್ಮವಾಗಿ ಬಗೆದು ಭಾವಿಸಿದರಲ್ಲಿ ಅದರಲ್ಲಿ ಆತ್ಯಂತಿಕ ಸ್ವರೂಪದಲ್ಲಿ ಕಟ್ಟಕಡೆಗೆ ಕಾಣುವ ಶಕ್ತಿಗಳಾವುವು? ಕಾಲವು ಒಂದು ದುಷ್ಟ ಶಕ್ತಿಯೆ? ಅವನು ಲೋಕನಾಶಕನೆ? ಸಂರಕ್ಷಕನೆ? ಒಳಿತು ಆಗಬೇಕೆಂಬುದೇ ಪ್ರತಿಯೊಂದು ವ್ಯಕ್ತಿಯ ಹೃದಯಾಂತರಾಳದಲ್ಲಿ ಹುದುಗಿರುವ ಆತ್ಯಂತಿಕ ಭಾವವಾಗಿದೆಯಷ್ಟೆ? ಪ್ರತಿಯೊಂದು ಕೃತಿಯ ಗುರಿಯೂ ಅವರವರ ಕಲ್ಪನೆಯಂತೆ ಯಾವುದೊಂದು ಒಳಿತೇ ಆಗಿದೆ ಯಲ್ಲದೆ ಕೆಡುಕಲ್ಲ. ಕಲ್ಯಾಣವೇ ಗುರಿ. ಲೋಕದಲ್ಲಿ ಯಾರೇ ಆಗಲಿ ಬದುಕುವು

ದಕ್ಕಾಗಿ ಸಾವನ್ನು ಸೇರುವರೆ ಹೊರತು, ಸಾವಿಗಾಗಿ ಸಾವನ್ನು ಯಾರೂ ಹಾರೈಸುವದಿಲ್ಲ. ಇದು ಲೋಕಧರ್ಮವು. ಈ ಧರ್ಮದಿಂದಲೆ ಲೋಕವು ಬದ್ಧವಾಗಿದೆ. ಈ ನಿಯಮವೆಂದರೇ ಯಮ–ಧರ್ಮನ ಆತ್ಯಂತಿಕ ರೂಪ.

ಯುಧಿಷ್ಠಿರನಿಗೆ ಯಕ್ಷನು, ಕೊನೆಗೆ, ತಾನು ನಿನ್ನ ತಂದೆ ಯಮ–ಧರ್ಮನೆಂದು ಸ್ಪಷ್ಟೀಕರಿಸಿದನು.

ಯಶಃ ಸತ್ಯಂ ದಮಃ ಶೌಚಮಾರ್ಜವಂ ಹ್ರೀರಚಾಪಲಮ್ ।
ದಾನಂ ತಪೋ ಬ್ರಹ್ಮಚರ್ಯಮಿತ್ಯೇತಾಸ್ತನವೋ ಮಮ॥ ೭ ॥
ಅಹಿಂಸಾ ಸಮತಾ ಶಾಂತಿಸ್ತಪಃ ಶೌಚಮಮತ್ಸರಃ ।
ದ್ವಾರಾಣ್ಯೇತಾನಿ ಮೇ ವಿದ್ಧಿ ಪ್ರಿಯೋಽಸ್ಯಸಿ ಸುತೋಽಮಮ ॥ ೮ ॥

ಬದುಕುವ ಹಾರಯಿಕೆ ಏತಕ್ಕೆ ? ಕಲ್ಯಾಣಕ್ಕಾಗಿ; ಆನಂದಹೊಂದುವುದಕ್ಕಾಗಿ ತಾನೆ ? ಆದುದರಿಂದ ಕಲ್ಯಾಣಕ್ಕೆ ಕಾರಣವಾಗುವ ಸಂಗತಿಗಳೇ ತಾನು; ಅದುವೆ ತನ್ನ ಶರೀರ; ತನ್ನ ದ್ವಾರವೆಂದು ಯಕ್ಷನ ಬಾಯಿಂದ ಶ್ರೀ ವ್ಯಾಸರು ಯಮನ ತಾತ್ವಿಕಸ್ವರೂಪವನ್ನು ವರ್ಣಿಸಿದ್ದಾರೆ. ಶ್ರೀ ವ್ಯಾಸರ ದಿವ್ಯದೃಷ್ಟಿಯಲ್ಲಲ್ಲದೆ ಯಮ–ಧರ್ಮನ ಇಂತಹ ಉದಾತ್ತವಾದ ಆತ್ಯಂತಿಕ ವರ್ಣನೆಯು ಜಗತ್ತಿನ ಬೇರೆ ಸಾಹಿತ್ಯದಲ್ಲಿ ಸಿಕ್ಕುದು ದುರ್ಲಭ.

ಬದುಕುವುದೇ ಎಲ್ಲರ ಧಗ್ಗುರಿ ಲೋಕವು ಯಾವ ನಿಯಮ ( ಎಂದರೆ ಧರ್ಮ, Law )ಗಳಿಂದ ಬದ್ಧವಾಗಿದೆಯೊ ಅವನ್ನು ಮೀರಿ ನಡೆಯುವದರಿಂದಲೆ ಆತ್ಮನಾಶ; ಸಾವು. ಅವನ್ನು ಅನುಸರಿಸುವುದರಿಂದಲೇ ಬದುಕು; ಕಲ್ಯಾಣ. ಈ ಬಗೆಯ ಬದುಕಿಗಾಗಿ ಹೆಣಗುವವನು, ಹೋರುವವನು ಯಕ್ಷನ ಅಥವಾ ಯಮಧರ್ಮನ ಒಲುಮೆಗೆ ಪಾತ್ರನಾಗಿ ಸಾವಿನಿಂದ ಪಾರಾಗುವನು. ಎಂದರೆ ಅಮರನಾಗುವನು. ಲೋಕಹೃದಯದಲ್ಲಿ ಸ್ಥಾನವನ್ನು ಪಡೆದು ಮರಣವನ್ನು ಗೆಲ್ಲುವನು. ಆ ನಿಯಮಗಳನ್ನು ಮೀರಿ ಬದುಕಿದವರೆಲ್ಲ ಜೀವನ್ಮೃತರಂತೆ ಜೀವಿಸುವುದರಲ್ಲಿ ಸಂದೇಹವಿಲ್ಲ.

ಇದುವೆ ಮೇಲಣ ಯಕ್ಷನ ರೂಪಕದ ಸಾರವಾಗಿದೆ. ಈ ಕಾರಣದಿಂದಲೆ ಯುಧಿಷ್ಠಿರನು ಕೊನೆಗೆ ಆ ಯಕ್ಷರೂಪಿ ಯಮನಲ್ಲಿ ಹೀಗೆ ಬೇಡಿಕೊಂಡನೆಂದು ವ್ಯಾಸರು ವರ್ಣಿಸಿದ್ದಾರೆ.

ದೇವದೇವೊ ಮಯಾದೃಷ್ಟೋ ಭವಾನ್ ಸಾಕ್ಷಾತ್ ಸನಾತನಃ ।
ಯಂ ದದಾಸಿವರಂ ತುಷ್ಟಸ್ತಂ ಗ್ರಹೀತ್ಯಾಹಂ ಪಿತಃ ।
ಜಯೇಯಂ ಲೋಭಮೋಹೌ ಚ ಕ್ರೋಧಂ ಚಾಹಂ ಸದಾ ವಿಭೋ।
ದಾನೇ ತಪಸಿ ಸತ್ಯೇ ಚ ಮನೋ ಮೇ ಸತತಂ ಭವೇತ್ ॥ ೨೪ ॥

ಲೋಭ, ಮೋಹ, ಕ್ರೋಧಗಳನ್ನು ಗೆದ್ದು ನನ್ನ ಮನಸು ಸದಾ ದಾನ, ತಪಸ್ಸು, ಸತ್ಯದಲ್ಲಿ ಸ್ಥಿರವಾಗಲಿ ಎಂದು ಬೇಡಿಕೊಂಡಿದ್ದಾನೆ. ಇದೇ ಅಮರಧರ್ಮ. ಈ ಧರ್ಮವನ್ನು ಯಾರು ಎಷ್ಟು ಅಳವಡಿಸಿಕೊಳ್ಳುವರೋ ಅಷ್ಟು ಅವರು ಅಮೃತತ್ವವನ್ನು ಪಡೆಯುವರು.

ಧರ್ಮನ ಉತ್ತರಗಳನ್ನು ಕೇಳಿ ಸಂತುಷ್ಟನಾದ ಯಕ್ಷನು ವರವನ್ನು ಬೇಡೆಂದಾಗ ಧರ್ಮನು ಮೊದಲು ಯಾರನ್ನು ಬದುಕಿಸಲು ಕೇಳಿಕೊಂಡನು? 'ನ-ಕುಲನನ್ನು' (fallen, downtroden, oppressed or depressed). ನಿಜವಾದ ಧರ್ಮದ ರೀತಿಯು ಇದೇ ಆಗಿದೆ. ಮಹಾತ್ಮಾಜೀಯವರು ಧರ್ಮಾತ್ಮರೆಂದು ಲೋಕವು ಒಕ್ಕೊರಲಿನಿಂದ ಸಾರಿದ್ದುದೇಕೆ ಮತ್ತೆ! 'ನ-ಕುಲ' ಶಬ್ದದಲ್ಲಿ ಧ್ವನಿತವಾಗುವ ಅರ್ಥದ ಬಗೆಗೆ ಕೆಲವರಿಗೆ ಸಂದೇಹವುಂಟಾಗಬಹುದು. ಆದರೆ ಭಾರತದೊಳಗಿನ ಮಹತ್ವದ ಹಲವು ಹೆಸರು ತಾಯ್ತಂದೆಗಳು ಇಟ್ಟ ಹೆಸರಾಗಿರದೆ, ಅವು ಅವರ ಗುಣ ಸ್ವಭಾವಾದಿಗಳಿಂದ ಬಂದ (ಅಥವಾ ವ್ಯಾಸರು ಕಲ್ಪಿಸಿದ) ಅನ್ವರ್ಥಕನಾಮಗಳಾಗಿವೆ. 'ಧೃತರಾಷ್ಟ್ರನು' ಕುರುಡನು. ರಾಷ್ಟ್ರಧಾರಣಮಾಡಿದವನು ಧೃತರಾಷ್ಟ್ರನು. ಧೃತ-ರಾಷ್ಟ್ರರು ಅಧಿಕಾರಮೋಹದಿಂದ ಕುರುಡರಾಗುವುದು ಲೋಕರೂಢಿ. ಪಾಂಡವರ ಹೆಸರುಗಳೂ ಇದೇ ಬಗೆಯಾಗಿ ಸಾರ್ಥವಾಗಿವೆ. ಭೀಮ—ಪರಾಕ್ರಮ, ವೀರ—ಶೌರ್ಯಗಳು ಧರ್ಮದ ಅಂಕೆಯಲ್ಲಿದ್ದರೇ ಅವಕ್ಕೆ ಗೆಲ್ಲು. ಧರ್ಮನು ಸಾಮಾನ್ಯವಾಗಿ ನಿಷ್ಕ್ರಿಯನಂತೆ ತೋರುವುದನ್ನು ಯುಧಿಷ್ಠಿರನ ಒಟ್ಟಿನ ವರ್ಣನೆಯಿಂದ ಚೆನ್ನಾಗಿ ಧ್ವನಿತಮಾಡಿದ್ದಾರೆ. ಪತಿತರನ್ನು ಬೆನ್ನಬಂದ ತಮ್ಮಂದಿರಂತೆ ನಡಿಸಿಕೊಂಬುವುದೇ ಧರ್ಮದ ಪರಾಕ್ರಮದ ಕರ್ತವ್ಯ. ಇದೆ ಧರ್ಮ. ಸ್ವರ್ಗದಲ್ಲಿ ಧರ್ಮನು ತನ್ನ ಸಂಗಡದ ನಾಯಿಯೊಡನೆಯೆ ಬರತಕ್ಕವನು ಹೊರತು ಒಬ್ಬನನ್ನೇ ಕರೆದರೆ ತಾನೊಲ್ಲೆನೆಂದ ಮಾತುಗಳನ್ನೂ ಈ ಸಂದರ್ಭದಲ್ಲಿ ಲಕ್ಷಿಸಬಹುದಾಗಿದೆ. ಇಂತಿದು ಶ್ರೀ. ವ್ಯಾಸರ ವ್ಯಂಗ್ಯಸರಣಿಯು ನಿತಾಂತ ರಮಣೀಯವಾಗಿದೆ.

ಅಗ್ನಿಯ ಉಪಾಸನೆ, ಸೂರ್ಯೋಪಾಸನೆಯೆಂದರೆ ಜ್ಞಾನೋಪಾಸನೆ ಎಂಬುದನ್ನು 'ಅಗ್ನಿವಿದ್ಯೆ' ಎಂಬ ಚಿಕ್ಕ ಹೊತ್ತಿಗೆಯಲ್ಲಿ ನಾನು ಈ ಮೊದಲೆ ಒಂದೆಡೆಗೆ ವಿವರಿಸಿದ್ದೇನೆ. ಬ್ರಾಹ್ಮಣನು ಅಗ್ನಿಹೋತ್ರವನ್ನು ಬಿಡಲಾಗದು, ಎಂಬುದರ ರಹಸ್ಯವು ಆತನು ಆಜನ್ಮ ಜ್ಞಾನ-ಜಿಜ್ಞಾಸುವಾಗಿ ಸ್ವಾಧ್ಯಾಯದಲ್ಲಿಯೆ ನಿರತನಾಗಿರಬೇಕೆಂಬುದಾಗಿದೆ. 'ಚಿದಗ್ನಿಕುಂಡ'ದಲ್ಲಿ ಅಗ್ನಿಯನ್ನು ಯಾವಾಗಲೂ ಜಾಗ್ರತವಾಗಿಡುವುದು ಆತನ ಆದ್ಯಕರ್ತವ್ಯವಾಗಿದೆ. ವಿಚಾರ ಮನನಗಳಿಂದ ಈ ಅಗ್ನಿಯನ್ನು ಪಡೆಯಬೇಕು.

ಆದರೆ ಅರೆದು, ಉಜ್ಜಿ—ಚರ್ಚೆ, ವಿಮರ್ಶೆ, ವಿವೇಕ, ವಿಚಾರಾದಿಗಳಿಂದ ಅಗ್ನಿಸಾಧನ ಮಾಡಿಕೊಳ್ಳುವ ಹದವನ್ನೆ ಮರೆತ ಬ್ರಾಹ್ಮಣನ ಅಗ್ನಿ ಉಪಾಸನೆಯು ಲೋಪವಾಗಿ ಆತನು ತೇಜಸ್ಸನ್ನೆ ಕಳೆದುಕೊಳ್ಳುತ್ತಾನೆ.

ಕಾಲಪ್ರವಾಹದಲ್ಲಿ ಬ್ರಾಹ್ಮಣನು, ಅರಿವ ಸಾಧನವಾದ ಅರಣಿಯನ್ನೇ ಕಳೆದುಕೊಂಡನು. ಕಾಲನು (ಕೃಷ್ಣಸಾರಮೃಗವು) ದೋಚಿಕೊಂಡೊಯ್ದನು; ಅದನ್ನು ಮರಳಿ ತಂದುಕೊಡಲು ಬ್ರಾಹ್ಮಣನು ಧರ್ಮನಲ್ಲಿ ಮೊರೆಯಿಟ್ಟನು. ಜ್ಞಾನೋಪಾಸಕ ಮತ್ತು ರಾಜ್ಯಶಾಸಕರೊಳಗಿನ ಈ ಅನ್ಯೋನ್ಯ ಸಂಬಂಧವು ನಿಕಟ ಸಹಕಾರದ್ದಾಗಿದ್ದರೇ ಅದು ಅವರಿಗೂ ಮತ್ತು ಲೋಕಕ್ಕೂ ಕಲ್ಯಾಣಕಾರವೆಂಬ ಸೂಚನೆಯೂ ಈ ಕಥೆಯಲ್ಲಿ ಅಡಕವಾಗಿದೆ.

ವಿಚಾರಮಂಥನದ--ಅರೆದು ಅರಿತುಕೊಂಬ ಆಂತರಿಕ ಸಾಧನವನ್ನು ಅರಣಿಗಳನ್ನು ಕಳೆದುಕೊಂಡ ಬ್ರಾಹ್ಮಣನು ಜೀವನ್ಮೃತನು. ಯಕ್ಷನು ಒಡ್ಡಿದ ಕಾಲಿಕ ಪ್ರಶ್ನೆಗಳನ್ನು ಬಿಡಿಸಲು ಆಗದ ವೀರರೂ ಪರಾಕ್ರಮಿಗಳೂ ಜೀವನ್ಮೃತರಾಗಿ ಉಲುಕಲಿಕ್ಕಾಗದೆ ಬಿದ್ದುಕೊಂಡಿರುವಾಗ ಇನ್ನುಳಿದ ಹಿಂಬಾಲಿಗರ ಪಾಡೇನು? ಕೊಳದ ತಡಿಯಲ್ಲಿ ಬಿದ್ದವರು ಹೆಣಗಳಂತಾಗಿದ್ದಾರೆಂದು ಹೇಳಿದ್ದು ಬಹಳ ಸಮರ್ಪಕವಾಗಿದೆ. ಪೂರ್ಣ ಸತ್ತಿಲ್ಲ. ಮೋರೆಯ ಮೇಲೆ ಜೀವಂತತನದ ಕಳೆಯಿದೆ. ಆದರೆ ಬದುಕಿರುವರೆಂದೂ ಹೇಳಲಿಕ್ಕಾಗುವುದಿಲ್ಲ. **ಆ ಕಾಲದ ಪ್ರಶ್ನೆಗಳಿಗೆ ಉತ್ತರವನ್ನು ಕೊಡದೆ ಯಾರಿಗೂ ಜೀವಂತವಾಗಿ ಬದುಕುವುದೇ ಸಾಧ್ಯವಿಲ್ಲ** ಎಂಬುದೇ ಈ ಯಕ್ಷಪ್ರಶ್ನೆ ಕಥೆಯ ರಹಸ್ಯವಾಗಿದೆ.

೭ನೆಯ ಶತಮಾನದಿಂದ ಮುಂದೆ ಭಾರತದ ಸ್ವಾತಂತ್ರ್ಯವು ಕ್ರಮ ಕ್ರಮವಾಗಿ ನಷ್ಟವಾದಂತೆ ನಮ್ಮ ರಾಷ್ಟ್ರಕ್ಕೆ ಜೀವನ್ಮೃತಾವಸ್ಥೆಯು ಬಂದೊದಗಿತು. ಮೊದಲು ಉತ್ತರದಲ್ಲಿ ಸ್ವಾತಂತ್ರ್ಯ ಸೂರ್ಯನು ಮುಳುಗಿದನು. ಆ ಕಗ್ಗತ್ತಲೆಯು ಕ್ರಮವಾಗಿ ಭಾರತವನ್ನೆಲ್ಲ ವ್ಯಾಪಿಸಿತು. 'ಸೂರ್ಯ ಆತ್ಮಾ ಜಗತಃ ತಸ್ಥುಷಶ್ಚ' ಆತ್ಮಾಂಧತೆಯ ಮೂಲಕ ಜೀವನ್ಮೃತಾವಸ್ಥೆಯಲ್ಲಿಯೆ ಈ ವರೆಗೆ ಹೇಗೋ ನಮ್ಮ ರಾಷ್ಟ್ರವು ಪ್ರಾಣಧಾರಣಮಾಡಿಕೊಂಡು ಉಳಿದು ಬಂದಿದೆ. ಇದೇ ಲೋಕವಿಲಕ್ಷಣವಾದ ಆಶ್ಚರ್ಯಕಾರಕ ಸಂಗತಿಯು!

ನಮ್ಮ ಸಮಾಜವು ಈ ಕಾಲದಲ್ಲಿ ಜೀವನ್ಮೃತಾವಸ್ಥೆಯಲ್ಲಿದ್ದಿತೆಂಬುದಕ್ಕೆ ಒಂದು ಕುರುಹನ್ನು ಇಲ್ಲಿ ನೋಡಿಕೊಳ್ಳಬಹುದು. ದೇಹವು ಜೀವಂತವಾಗಿದ್ದಾಗ ಉಂಡ ಅನ್ನವು ಒಡಲಲ್ಲಿ ಅರಗದೆ ಹಾಗೆಯೆ ಉಳಿದರೆ ಅದು ಸಲ್ಲ; ಅರಗಿಸಿಕೊಳ್ಳದೆ ಅನ್ನಾಂಶವನ್ನು ಹಾಗೆಯೆ ಉಳಿಸಿಕೊಂಬ ದೇಹವು ಅನಾರೋಗ್ಯದ ಬೀಡು ಆಗಿ ಸಾವಿಗೆ ಔತಣವು ದೊರೆಯುವುದು. ನಮ್ಮ ಸಮಾಜದಲ್ಲಿ ಸುಮಾರು ೭ನೆಯ ಶತಮಾನದ ವರೆಗೆ ಇದ್ದ ಈ ಪಚನಶಕ್ತಿಯು ಮುಂದೆ ನಷ್ಟವಾಯಿತೆಂಬುದಕ್ಕೆ ಮುಸಲ್ಮಾನರ ಕುತ್ತವೇ ಸಾಕ್ಷಿ.

ಆರ್ಯ ಮತ್ತು ಯದು-ತುರ್ವರ (ದ್ರಾವಿಡರ) ಸಂಬಂಧವು ಬಂದಿತು. ಅವರಿಬ್ಬರೂ ಬೆರೆತು ವರ್ಣವ್ಯವಸ್ಥೆಯು ನಿರ್ಮಾಣವಾಯಿತು. ಆರ್ಯೇತರರಾದ ವ್ರಾತ್ಯರನ್ನು ಒಳಗೊಳ್ಳಲು ಕೆಲವೊಂದು ಸಂಸ್ಕಾರಗಳು ನಿರ್ಮಾಣವಾದುವು. ಅಥರ್ವಣವೇದದಲ್ಲಿ ಬಂದ ವ್ರಾತ್ಯಸ್ತೋಮದ ವರ್ಣನೆಗಳು ಇದಕ್ಕೆ ಸಾಕ್ಷಿ. ಮುಸಲ್ಮಾನರ ಮೊದಲು ಹಿಂದೂದೇಶಕ್ಕೆ ಯವನರು, ಶಕರು, ಹೂಣರು, ಆಭೀರರು ಮೊದಲಾದ ಹಲವು ಪಂಗಡದವರು ಬಂದರು. ಆದರೆ ಅವರಲ್ಲಿ ಹಲವರನ್ನು ಚೆದರಿಸಿ ಹೊರಗಟ್ಟಿದರೂ ಇಲ್ಲಿಯೆ ನೆಲಸಿದ ಇನ್ನುಳಿದವರನ್ನು ಅಂದಿನ ಭಾರತೀಯ ಸಮಾಜವು ತನ್ನಲ್ಲಿ ಅಳವಡಿಸಿಕೊಂಡು ಬಿಟ್ಟಿತು. ಆ ಜನಗಳು ತೀರ ಬೇರೆಯಾಗಿ ಉಳಿದುಕೊಳ್ಳಲಿಲ್ಲ. ಭಾರತೀಯ ಸಮಾಜದ ಅಂಗಾಂಗಗಳಲ್ಲಿ ಅವರು ಬೆರೆತು ಹೋದರು.

ಆದರೆ, ೭ನೆಯ ಶತಮಾನದ ಮುಂದೆ ನಮ್ಮ ಸಮಾಜದಲ್ಲಿ ಹೊರಗಿನವರನ್ನು ಹೀಗೆ ಅರಗಿಸಿಕೊಳ್ಳುವ ಶಕ್ತಿಯು ಉಳಿಯಲಿಲ್ಲ. ನಮ್ಮ ಸಮಾಜವು

ನಿರ್ಜೀವವಾಗುತ್ತ ನಡೆದ ಸ್ಪಷ್ಟವಾದ ಕುರುಹು ಇದು. ಹೀಗಾಗಿ ಮುಸಲ್ಮಾನಾದಿಗಳ ಕುತ್ತವು ಬೆಳೆಯುತ್ತ ಹೋಯಿತು. ದೇಶವು ಪರಾಧೀನವಾಯಿತು. ಜನರು ಪರಕೀಯರ ಆಳಾದರು. ಪಾರತಂತ್ರ್ಯವೇ ನರಕ. ಪರಾವಲಂಬನಕ್ಕಿಂತಲೂ ಜೀವನ್ಮೃತಾವಸ್ಥೆಯು ಬೇರೊಂದಿಲ್ಲ.

ಹಾಗಾದರೆ ಈ ಬಗೆಯ ಜೀವನ್ಮೃತಾವಸ್ಥೆಯ ಕಾರಣವು ಯಾವುದು? ಮಹಾಭಾರತದ ಪಾರಾಯಣಗಳು ನಮ್ಮ ನಾಡಿನಲ್ಲಿ ಎಡೆಬಿಡದೆ ನಡೆದಿದ್ದರೂ ಅದರ ರಹಸ್ಯಾರ್ಥವನ್ನು ನಮ್ಮ ಜನರ ಮನಸು ತಿಳಿಯಲಿಲ್ಲ. ಬಾಹ್ಯಾರ್ಥದಿಂದಲೆ ಸಮಾಧಾನ ಹಚ್ಚಿಕೊಳ್ಳುತ್ತಿದ್ದರು. ಯಕ್ಷಪ್ರಶ್ನೆಯ ರೂಪಕದ ಗುಟ್ಟು ತಿಳಿದು ಅದರಂತೆ ನಡೆದುಕೊಂಡಿದ್ದರೂ ನಾವು ಜೀವಂತರಾಗಬಹುದಾಗಿತ್ತು. ಕಾಲರೂಪಿಯಾದ ಯಕ್ಷನು ಕಾಲಕಾಲಕ್ಕೆ ಒಡ್ಡುವ ತೊಡಕುಗಳನ್ನು — ಪ್ರಶ್ನೆಗಳನ್ನು ತಿಳಿದುಕೊಂಡು ಬಿಡಿಸುವ ಪ್ರಯತ್ನಪಟ್ಟಿದ್ದರೆ ನಮ್ಮ ರಾಷ್ಟ್ರವು ಹೀಗೆ ಜೀವನ್ಮೃತಾವಸ್ಥೆಯನ್ನೈದುತ್ತಿರಲಿಲ್ಲ.

ತಲೆಯುವರೂ ( ತೋಳ್ಬಲದವರೂ ) ಹೇಗೊ ಮೇಲೇಳುವುದಕ್ಕೆ ಹೆಣಗಾಡುತ್ತಿದ್ದರಾದರೂ ಅವರು ಸಂಕುಚಿತ ದೃಷ್ಟಿಯುವರಾಗಿ ತಮ್ಮ 'ಸ-ಕುಲ' ರನ್ನು ಮೇಲಕ್ಕೆತ್ತುವುದನ್ನೇ ಕಡೆಗಣಿಸಿದರು. ಅದು ತಮ್ಮ ಆದ್ಯ ಕರ್ತವ್ಯವೆಂಬುದನ್ನೂ ಮರೆತರು. ನಮ್ಮ ನಾಡಿನ ವಿಚಾರವಂತರ ಈ ಅಧರ್ಮಾಚರಣೆಯನ್ನು ಕಾಲನು ಸಹಿಸಲಿಲ್ಲ. ಸಹಿಸುವುದು ಸಾಧ್ಯವೂ ಇಲ್ಲ. ಮೇಲಣ ಎರಡೂ ಬಗೆಯ ಅಪರಾಧಕ್ಕಾಗಿ, ಅಧರ್ಮಾಚರಣಕ್ಕಾಗಿ ಕಾಲನಿಂದಾದ ಶಿಕ್ಷೆಯೆ ನಮ್ಮ ಈ ಪತಿತ ಪರಾವಲಂಬನದ ದಾಸ್ಯದ ಸ್ಥಿತಿ.

ಕಾಲನ ಕೆಲವು ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಕೊಟ್ಟು ಇದೀಗ ಒಬ್ಬ ಮಹಾತ್ಮನು ನಮ್ಮನ್ನು ಚೇತರಿಸಿ ಎದ್ದು ನಿಲ್ಲುವಂತೆ ಮಾಡಿದ್ದಾನೆ. ಆತನ ತಪಃ ಪ್ರಭಾವದಿಂದ ಭಾರತವು ಸ್ವಾತಂತ್ರ್ಯವನ್ನು ಪಡೆದುಕೊಂಡಿದೆ. ಆದರೆ ಇದೀಗ ಮತ್ತೆ ಹಲವು ಹೊಸ ಹೊಸ ಸಮಸ್ಯೆಗಳು ನಮ್ಮೆದುರು ಆಯೆಂದು ಬಾಯ್ದೆರೆದು ನಿಂತಿವೆ. ಅವುಗಳಿಗೆ ಸರಿಯಾದ ಉತ್ತರವು ದೊರೆತರೆ ಸರಿ. ಇಲ್ಲವಾದರೆ ಮತ್ತೆ ಕಾಲನ ಬಾಯಲ್ಲಿ ಬೀಳುವ ಹೆದರಿಕೆಯು ತಪ್ಪಿದ್ದಲ್ಲ.

**ಯಕ್ಷನು ಇಂದು ನಮ್ಮೆದುರು ಒಡ್ಡಿರುವ, ನಾವು ಬಿಡಿಸಲೇ ಬೇಕಾದ ಇಂದಿನ ಕೆಲವು ಮಹತ್ವದ ಪ್ರಶ್ನೆಗಳು :**

೧. ಭಾರತ ಸ್ವಾತಂತ್ರ್ಯವು ನಿಜವಾಗಿಯೂ ನಮ್ಮ ಗುರಿಯೆ ?

೨. ಹಾಗಾದರೆ, ಶ್ರೇಷ್ಠವಾವುದು, ಜಾತಿಧರ್ಮವೆ ? ರಾಷ್ಟ್ರಧರ್ಮವೇ ?

೩. ರಾಷ್ಟ್ರೀಯ ಸೈನ್ಯವಿಲ್ಲದೆ ಸ್ವಾತಂತ್ರ್ಯರಕ್ಷಣೆಯು ಸಾಧ್ಯವೆ ?

೪. ಈಗಿನ ಜಾತಿಭೇದದ ಮೇಲೆ ನಿಂತಿರುವ ಸಮಾಜವು ರಾಷ್ಟ್ರೀಯ ಸೈನ್ಯನಿರ್ಮಾಣಕ್ಕೆ ಸಹಾಯಕವೆ ? ವಿಘಾತಕವೆ ?

೫. ಬ್ರಾಹ್ಮಣ ಇನಫಂಟ್ರಿ,ಲಿಂಗಾಯತ ಬ್ಯಾಟೇಲಿಯನ್, ಶೀಖಪಡೆ, ಎಂಬೀ ತೆರನಾದ ಜಾತಿ ವಿಭಾಗಗಳು ಸೈನ್ಯದಲ್ಲಿ ರಾಷ್ಟ್ರೀಯತೆಯನ್ನು ದೃಢ ಪಡಿಸಬಲ್ಲುವೊ ?

೬. ಪ್ರಜಾಪ್ರಭುತ್ವವು ನಮ್ಮ ಗುರಿಯೆ ?

೭. ಹಾಗಾದರೆ ಜನ್ಮದಿಂದಲೆ ಕೆಲವು ಜಾತಿಗಳಿಗೆ ಹೆಚ್ಚಿನವು, ಕೆಲವು ಜಾತಿ ಕಡಿಮೆಯವು ಎಂಬ ಇಂದಿನ ಗ್ರಹಿಕೆಯು, ಪ್ರಜಾಪ್ರಭುತ್ವದ ಸಮಾನ ಭಾವದ ತತ್ವಕ್ಕೆ ಸುಸಂಗತವೆ ?

೮. ಅದರಂತೆ, ಆಡಳಿತಕ್ಕೆ ಬೇಕಾಗುವ ಜನರನ್ನು ಆರಿಸುವಾಗಲೂ ನಿಯಮಿಸುವಾಗಲೂ ಗುಣಕ್ಕೆ ಪ್ರಥಮಸ್ಥಾನವಿರಬೇಕಲ್ಲವೆ ?

ಜಾತಿಕುಲಗಳನ್ನು ಗಮನಿಸಿ ಅಥವಾ ಪ್ರಾಂತಾಭಿಮಾನದಿಂದ (ಕರ್ತೃತ್ವ ಶಾಲಿಗಳೂ ದಕ್ಷರೂ ಧೀಮಂತರೂ ಆದವರನ್ನು ದುರ್ಲಕ್ಷಿಸಿ) ಜನರನ್ನು ಆರಿಸಿದರೆ ಅಥವಾ ನಿಯಮಿಸಿದರೆ ಅವರು ಜಾಗತಿಕ ರಂಗದಲ್ಲಿ ರಾಜತಂತ್ರ ನಿಪುಣರಾದ ಕ್ರಿಪ್ಸ, ಮಾಲಟೋವರಂತಹ ಪ್ರಬಲರೊಡನೆ ಸರಿಸಮಾನರೆನಿಸಿ ಮುಂದುವರೆಯಲು ಸಾಧ್ಯವೆ ?

ಈ ಕಾರಣದಿಂದಲೂ ಇಂದಿನ ಸ್ವರೂಪದ ಜಾತಿಭೇದವು ಅಳಿಯು ವುದು ಅನಿವಾರ್ಯವಾಗಿಲ್ಲವೆ ?

೯. ಶುದ್ಧೀಕರಣದಿಂದ, ಮರಳಿ ಜನರನ್ನು ಹಿಂದುಗಳೆಂದು ಸ್ವೀಕರಿಸಬೇಕೆ ?

೧೦. ಮರಳಿ ಹಿಂದುಗಳೆಂದು ಸ್ವೀಕರಿಸಲು ಒಪ್ಪಿದರೆ, ಇಂದು ಜಾತಿನಿಬದ್ಧವಾದ ನಮ್ಮ ಸಮಾಜದಲ್ಲಿ, ಸಂಸ್ಕಾರಪಡೆದು ಮರಳಿಬಂದವರ ಸ್ಥಾನಮಾನಗಳೇನು ? ಅವರು ಆಯಾಯ ಮೊದಲಿನ ಜಾತಿಗಳಲ್ಲಿ ಸೇರಬೇಕೆ ? ಅಥವಾ ಸಂಸ್ಕಾರದಿಂದ ಮರಳಿಬಂದವರ ಒಂದು ಹೊಸ ಜಾತಿಯೆ ನಿರ್ಮಾಣವಾಗಬೇಕೆ ?

೧೧. ಸಂಸ್ಕಾರಹೊಂದಿ ಮರಳಿ ಬರುವ ಕ್ರಿಸ್ತಿ, ಮುಸಲ್ಮಾನ ಮೊದಲಾದ ಧರ್ಮದವರನ್ನು ಇಂದು ಉಚ್ಚಜಾತಿಯವರೆನಿಸುವ ಮಹಾಜನಗಳು ತಮ್ಮಿಂದ ದೂರವಿಡುತ್ತಿದ್ದರೆ ಆ ಜನಗಳು ಮರಳಿ ಒಳಗೆ ಬರಲು ಮನಸು ಮಾಡಬಹುದೆ ?

೧೨. ಸಂಸ್ಕಾರಹೊಂದಿ ಬಂದವರನ್ನು ಹಿಂದುಗಳನ್ನಾಗಿ ಸ್ವೀಕರಿಸಲು ಒಪ್ಪದೆ ಇದ್ದರೆ, ಪಂಜಾಬ, ಬಂಗಾಲಗಳಲ್ಲಿ ಮುಸಲ್ಮಾನರ ಒತ್ತಾಯಕ್ಕೆ ಸಿಲುಕಿ ಧರ್ಮಾಂತರ ಹೊಂದಿದ ಲಕ್ಷಾವಧಿ ಜನರು ಮಹಾತ್ಮಾಜೀಯವರ ಪುಣ್ಯದಿಂದ ಮರಳಿ ಹಿಂದುಗಳಾಗಲು ಮುಂದೆ ಬಂದವರನ್ನು ಮತ್ತೆ ಹಿಂದಕ್ಕಟ್ಟಿ ನಮ್ಮ ಎದುರಾಳಿಗಳಾದ ಪಾಕಿಸ್ತಾನಿಗಳ ಬಲವನ್ನು ಹೆಚ್ಚಿಸುವುದು ಆತ್ಮಘಾತಕ ಕೃತ್ಯವಾಗಲಿಕ್ಕಿಲ್ಲವೆ ?

ಸ್ವೀಕರಿಸಬೇಕಿದ್ದರೆ, ನಾವು ಉಚ್ಚ-ನೀಚ ಭೇದವನ್ನು ಮರೆತು ಅವರೆಲ್ಲರೊಡನೆ ಸಮಾನಭಾವದಿಂದ ನಡೆದುಕೊಂಬುವುದು (ಎಂದರೆ ಇಂದಿನ ಜಾತಿಭೇದವನ್ನು ತೊಡೆದುಹಾಕುವುದು ) ಕರ್ತವ್ಯವಾಗಿಲ್ಲವೆ ?

೧೩. ಹಿಂದೂ ಶಬ್ದವು ಮೂಲತಃ ದೇಶವಾಚಕ. ಇಂದು ಮತ್ತೆ ಅದೇ ಅರ್ಥದಲ್ಲಿ ಈ ಶಬ್ದವನ್ನು ಬಳಸಿ ಹಿಂದೂ ದೇಶದ ನಾಗರಿಕರೆಲ್ಲರೂ ಹಿಂದುಗಳು ಅಥವಾ ಹಿಂದೀಯರು ಎಂದರೆ ತಪ್ಪೇನು ?

೧೪. ಮುಸಲ್ಮಾನರೆಲ್ಲರನ್ನೂ ಪಾಕಿಸ್ತಾನಕ್ಕೆ ತಳ್ಳುವುದು, ಅಥವಾ ಹಿಂದುಗಳನ್ನಾಗಿ ಮತಾಂತರಿಸುವುದು ನ್ಯಾಯವೆ? ಸಾಧ್ಯವೆ ?

ಹಾಗಾದರೆ ಅವರು ಭಾರತನಿಷ್ಠರಾಗಿ ಉಳಿದು ಪಂಚಮದಳದವರಾಗದಂತೆ ಅವರ ಮನಃಪ್ರವೃತ್ತಿಯಾಗಲು ಉಪಾಯಗಳು ಯಾವವು ?

೧೫. ಮನುಷ್ಯನು ಎಂಬುದು ಪುಲ್ಲಿಂಗ. ಆದುದರಿಂದ ಸ್ತ್ರೀಯರನ್ನು ಮನುಷ್ಯರೆಂದು ಎಣಿಸಬಹುದೆ?

೧೬. ಅವರೂ ಮಾನವರೆಂಬುದು ನಿಜವಿದ್ದರೆ ಗಂಡಸಿನಂತೆ ಅವರ ವ್ಯಕ್ತಿತ್ವ ವಿಕಾಸಕ್ಕೂ ಸಮಾಜದಲ್ಲಿ ಇಂಬು ಇರಬೇಕಷ್ಟೆ?

ಈ ಪ್ರಶ್ನೆಗಳು ನನಗೆ ಸ್ಪಷ್ಟವಾಗಿ ಕೇಳಬಂದುದು ಮೂಡಿ ಮಿನುಗಿ ಮಿಂಚಿಹೋದುದು ಈಗ ಎರಡು ವರ್ಷಗಳ ಮೊದಲು ಸಪ್ಟಂಬರ ತಿಂಗಳ ಮೊದಲನೆಯ ವಾರದಲ್ಲಿ. ೧೯೪೬ನೆಯ ವರುಷದ ಸಪ್ಟಂಬರ ತಿಂಗಳ ೨ನೆಯ ದಿನದಂದು ರಾಷ್ಟ್ರೀಯ ಮಹಾಸಭೆಯವರು ಕೇಂದ್ರದಲ್ಲಿ ತಾತ್ಪೂರ್ತಿಕ ಸರಕಾರವನ್ನು ಸ್ಥಾಪಿಸಿದರು. ಅಂದು ಸ್ವರಾಜ್ಯ ಸೂರ್ಯನು ಮುಸಲ್ಮಾನರ ಅನಾಚಾರ, ಅತ್ಯಾಚಾರಗಳ ಕಂಕಣಾಕೃತಿ ಗ್ರಹಣವು ಹಿಡಿದುಕೊಂಡೇ ಅಂದಿನ ಅರುಣೋದಯದ ಕಾಲಕ್ಕೆ ಪೂರ್ವಕ್ಷಿತಿಜದಲ್ಲಿ ಕಾಣಿಸಿಕೊಂಡನು.

ನವಕಾಲಿ ಮೊದಲಾದ ಕಡೆಗಳಲ್ಲಿ ಮುಸಲ್ಮಾನರು ಮಾಡಿದ ಹತ್ಯಾಕಾಂಡದ ಆ ಭೀಕರ ಸುದ್ದಿಗಳನ್ನು ಕೇಳಿ ಸ್ವರಾಜ್ಯದ ಸವಿಗನಸುಗಳೆಲ್ಲವೂ ಮಾಯವಾದುವು. ದಾರುಣವಾದ ಆ ಸುದ್ದಿಗಳಿಂದುಂಟಾದ ತಲ್ಲಣದಿಂದ ಆ ವಾರಾಂತವಾರವೆಲ್ಲವೂ ಮನಸಿನಲ್ಲಾದ ಕಸಿವಿಸಿ ಹೇಳಲಾಸಲ್ಲ. ಪಂ. ಜವಾಹಿರ ಲಾಲರ ಹಲವಾರು ಆರ್ಥಿಕ, ಔದ್ಯೋಗಿಕ ಯೋಜನೆಗಳಿಂದ ಇನ್ನು ನಮ್ಮ ದೇಶವು ಉನ್ನತಸ್ಥಿತಿಗೆ ಬರುವುದು; ಜಗತ್ತಿನ ಪ್ರಮುಖ ರಾಷ್ಟ್ರಗಳ ಮಾಲಿಕೆಯಲ್ಲಿ ಸೇರುವುದು; ಎಂದು ಹಂಬಲಿಸಿ, ಹಾರಯಿಸುತ್ತಿದ್ದ ಜೀವಕ್ಕೆ ಈ ಸಾಮಾಜಿಕ ವಿಪ್ಲವದಿಂದ ಉಸಿರುಕಟ್ಟಿದಂತಾಯಿತು. ಸಭ್ಯ ಜೀವನಕ್ಕೆ ಜೀವನ ವಿಕಾಸಕ್ಕೆ ತೀರ ವಿಪರೀತವಾದ ಈ ಪರಿಸ್ಥಿತಿಯು ತಲೆದೋರಲು ಕಾರಣವೇನು? '**ಮೃತಂ ರಾಷ್ಟ್ರಂ ಅರಾಜಕಮ್**;' ಪರದಾಸ್ಯದಿಂದ ಮುಕ್ತರಾಗಿ ಸ್ವರಾಜ್ಯವನ್ನು ಪಡೆದು ಸ್ವಾತಂತ್ರ್ಯ ಸುಖವನ್ನು ಅನುಭವಿಸಬೇಕೆಂದು ಹಾತೊರೆಯುತ್ತಿರುಗಲೆ ದೇಶದಲ್ಲಿ ಅರಾಜಕವು ಹಬ್ಬಿ ಮತ್ತೆ ನಮ್ಮ ರಾಷ್ಟ್ರಕ್ಕೆ ಜೀವನ್ಮೃತಾವಸ್ಥೆಯು ಪ್ರಾಪ್ತವಾಗುವ ಲಕ್ಷಣಗಳು ಕಾಣಹತ್ತಿದುವು. ಇದಕ್ಕೆ ಕಾರಣವೇನೆಂದು ಚಿಂತಿಸುತ್ತಿರುವ ಕಾಲದಲ್ಲಿಯೆ ಮೇಲಣ ಹಲವು ಪ್ರಶ್ನೆಗಳು ಕಣ್ಣಮುಂದೆ ಕುಣಿಯಲಾರಂಭಿಸಿದುವು. ಭಾರತದೊಳಗಿನ ಯಕ್ಷಪ್ರಶ್ನೆಯ ಕತೆಯು ನೆನಪಾಯಿತು.

ನಮ್ಮ ಯಾವ ಸಾಮಾಜಿಕ ನೆಲಗಟ್ಟಿನ ಮೇಲೆ ಸ್ವಾತಂತ್ರ್ಯದ-ಪ್ರಜಾ ರಾಜ್ಯದ ಭವ್ಯ ರಾಜಮಂದಿರವನ್ನು ಕಟ್ಟತಕ್ಕವರಿರುವೆವೋ ಆ ನೆಲವೆ ಭದ್ರವಾಗಿ, ಗಟ್ಟಿಯಾಗಿ ಇಲ್ಲದೆ ಇದ್ದುದು ಅನುಭವಕ್ಕೆ ಬರಲಾರಂಭಿಸಿದೆ. ಜಾತಿದ್ವೇಷ, ಅಸೂಯಾದಿ ಹೆಗ್ಗಣಗಳ ಹೋರುಗಳು ಅಲ್ಲಲ್ಲಿ ಮುಚ್ಚಿ ಕೊಂಡಿದ್ದು ಅವು ಪಕ್ಕನೆ ಬಾಯ್ದೆರೆದಾಗ ಮನೆಯವರೆಲ್ಲ ಅದರಲ್ಲಿ ಮಾಯ ವಾಗುವ ಹೆದರಿಕೆಯೂ ಹಲವೆಡೆಗೆ ಉಂಟಾಗಿದೆ. ಸಾಧ್ಯವಾದಷ್ಟು ಬೇಗನೆ ಅದನ್ನು ಭದ್ರವಾದ ತಳಹದಿಯಮೇಲೆ ಅಡಿಯಿಂದ ಮಾಡದವರೆಗೆ ಹೊಸ ದಾಗಿ ಕಟ್ಟುವ ಅವಶ್ಯಕತೆಯು ಅಡಿಗಡಿಗೂ ಪ್ರತಿಯೊಬ್ಬರಿಗೆ ಎನಿಸುತ್ತಿದೆ. ಆದರೆ ಸಾವಿರಾರು ವರ್ಷಗಳಿಂದ ತಲೆತಲಾಂತರಗಳಿಂದ ಇದ್ದು ಸಂಸಾರ ಮಾಡಿದ ಮನೆ. ಅದನ್ನು ಬದಲಿಸಿ ಕಟ್ಟುವುದಕ್ಕೆ ಅನೇಕರ ಮನಸು ಹಿಂಜರಿಯುತ್ತಲಿದೆ. ಹಲವೆಡೆಗೆ ಮನೆಯ ತೊಲೆ ಜಂತಿಗಳೇ ಮೈ ಮೆಲೆ ಬೀಳುವಂತಾಗಿದ್ದರೂ ಈ ಹಳೆಯ ಮನೆಯ ಮೇಲಣ ಮೋಹವು ಅದನ್ನು ಮಾರ್ಪಡಿಸಿಕೊಂಡು ಹೊಸದಾಗಿ ಕಟ್ಟಿಕೊಳ್ಳಲು ಅಡ್ಡಬರುತ್ತಿದೆ. ಹೀಗೆ ಸುಮ್ಮನೆ ಮಾನಮೇಷಮಾಡುತ್ತಿರುವುದು ಎಲ್ಲಿ ನಮ್ಮ ಜನದ ಸರ್ವಸ್ವ ನಾಶಕ್ಕೇ ಕಾರಣವಾಗುವುದೊ ಎಂಬ ಹೆದರಿಕೆಯುಂಟಾಯಿತು.

ನಿಂತ ನೆಲವೆ ಎದ್ದು, ಒಡೆಯಲು ಬಂದಂತೆ ನನಗಾದ ಆ ಅನುಭವ ವನ್ನು ಇನ್ನುಳಿದ ನನ್ನ ನೆರೆಹೊರೆಯವರಿಗೂ ಹೇಳಿ ಅವರ ವಿಚಾರ, ಅನುಭವವೇನೆಂದು ಅರಿತುಕೊಳ್ಳುವುದು ಕರ್ತವ್ಯವೆನಿಸಿತು. ನಮ್ಮ ಸಮಾಜದ ಬುಡಕಟ್ಟು ಅದಿರುತ್ತಿರುವುದರಿಂದ ಅದರ ಮೇಲೆ ನಾವು ನಿಲ್ಲಿಸ ಬೇಕೆಂದಿರುವ ಸ್ವರಾಜ್ಯಮಂದಿರವು ಸುಸ್ಥಿರವಾಗಿ ಎಂದೂ ತಾಳಿಬಾಳಲಾರ ದೆಂಬ ನನ್ನ ಎನಿಸಿಕೆಯು ಸುಳ್ಳೆಂದು, ಇದು ಕೇವಲ ನನ್ನ ಭ್ರಾಂತಿಯೆಂದು ಸಿದ್ಧವಾದರೆ ನನಗೂ ಅದರಲ್ಲಿ ಸಂತೋಷವೆ ಇದೆ. ಆದರೆ ಥಕ್ಕನೆ ಒಂದು ವೇಳೆ ನನ್ನ ಸಂದೇಹವೆ ನಿಜವಾದರೆ, ನನ್ನ ಕಂಡುದನ್ನು ಉಳಿದವರಿಗೂ ಹೇಳಿ ಸಕಾಲದಲ್ಲಿ ಎಚ್ಚರಿಸದೆ ಹೋದೆನಲ್ಲ, ಎಂಬ ಮಿಡುಕಾಟಕ್ಕೆ ಕಾರಣ ವಾಗಬಾರದೆಂದು ಕಳೆದ ಎರಡು ವರುಷಗಳಿಂದ ಸಂಧಿದೊರೆತಾಗಲೆಲ್ಲ ಹಲ ವೆಡೆದುರು ಅಲ್ಲಲ್ಲಿ ಈ ಯಕ್ಷಪ್ರಶ್ನೆಗಳನ್ನು ವಿವರಿಸುತ್ತಲೆ ಬಂದಿದ್ದೇನೆ.

ಆಗ ನನ್ನ ವಿಚಾರಗಳು ಕೆಲವರಿಗೆ ಸೇರಿದುವು; ಕೆಲವರಿಗೆ ಸೇರಲಿಲ್ಲ.

'ಮುಂದೆ ಆಗುವುದು ಆಗುತ್ತದೆ; ಈಗಲೆ ಅದರ ಚಿಂತೆಮಾಡಿ ಸುಮ್ಮನೆ ಕೊರಗುವುದೇತಕ್ಕೆ' ಎಂಬ ವಿಚಾರದವರು ಹಲವರು ದೊರೆತರು. ಹೋದಲ್ಲಿ ಮಾಡಿದ ಚರ್ಚೆ, ವಿಚಾರ-ವಿನಿಮಯದೊಡನೆ ಪತ್ರಿಕೆಗಳಲ್ಲಿ ಕೆಲವು ಲೇಖನಗಳನ್ನು ಬರೆದುದಾಯ್ತು. ಪ್ರತಿಯೊಂದು ಗುಂಪಿನವರೂ ತಮ್ಮ ಜಾತೀಯ ದೃಷ್ಟಿಯಿಂದಲೇ ಹೆಚ್ಚಾಗಿ ನೋಡುವರೆ ಹೊರತು, ಅಖಿಲ ರಾಷ್ಟ್ರೀಯ ಭಾವನೆಗೆ ಪ್ರಾಮುಖ್ಯತೆಯನ್ನು ಕೊಟ್ಟು ಅದಕ್ಕನುಗುಣವಾಗಿ ದೃಷ್ಟಿಯನ್ನು ಶೀಳಿಮಾಡಿಕೊಂಡು ತಮ್ಮ ವಿಚಾರಗಳನ್ನು ಸರಿಪಡಿಸಿಕೊಳ್ಳಲು ಸಿದ್ಧರಿದ್ದವರು ತೀರ ವಿರಳವಾಗಿದ್ದುದೆ ಎಲ್ಲೆಡೆಯಲ್ಲೂ ಕಂಡುಬಂದಿತು. ಮಹಾತ್ಮಾಜಿಯವರ ಕೆಲವೊಂದು ಕಾರ್ಯಕ್ರಮಗಳ ಬಗೆಗೆ ಸ್ವಲ್ಪಭಿನ್ನಾಭಿಪ್ರಾಯವನ್ನು ಸೂಚಿಸಿದೊಡನೆ ರೊಚ್ಚುಗೊಳ್ಳುವ, ಹರಿಜನ ಪತ್ರಿಕೆಯನ್ನು ನಿತ್ಯ ಭಕ್ತಿಯಿಂದ ಓದುವ ಜನರು ಎಲ್ಲೆಲ್ಲೂ ತುಂಬಿದ್ದು ಅನುಭವಕ್ಕೆ ಬರುತ್ತಿದ್ದತಾದರೂ, ಆಗ ಗಾಂಧಿಜಿಯವರು ನವಕಾಲಿಯಲ್ಲಿ ನಡಸಿದ ಲೋಕೋದ್ಧಾರದ ಮಹಾಪ್ರಯೋಗದ ತಿರುಳೇನೆಂದು ಕೇಳಿದರೆ ಬೆಪ್ಪಾಗಿ ಬಾಯಿಬಾರದವರೆ ಬಹಳ. ಉಗಿಬಂಡಿಯ ನಿಲ್ದಾಣಗಳಲ್ಲಿ 'ಹಿಂದೂಪಾನಿ; ಮುಸಲ್ಮಾನಪಾನಿ' ಎಂಬ ಭೇದ ಬೇಡವೆಂದು ಮಹಾತ್ಮಾಜಿಯವರು ಉಪದೇಶಿಸುತ್ತಲಿರುವ ಮಾತಿನ ಮರ್ಮವೇನು? 'ಇಂದಿನ (ಅಂದಿನ) ಗಾಂಧಿಜೀ ಕೇವಲ ಖಾದಿಗಾಂಧಿಯಲ್ಲ; ಬರಿ ಹರಿಜನೋದ್ಧಾರಕ ಗಾಂಧಿಯೂ ಅಲ್ಲ; ಜಾತಿಭೇದ ನಿರ್ಮೂಲಕ, ಮಾನವಕುಲೋದ್ಧಾರಕ ಗಾಂಧಿಜಿ ಇಂದಿನವರು. ಜಾತಿಬಂಧನಗಳನ್ನು ಹರಿದೊಗೆದು ಹೊಸ ಸಮಾಜಸ್ಥಾಪನೆಗೆ ನವಕಾಲಿಯಲ್ಲಿ ಆರಂಭಿಸಿರುವ ಈ ಗಾಂಧೀಜಿಯವರು ನಿಮಗೆ ಅನುಸರಣೀಯರೆ? ಅನುಕರಣೀಯರೆ?' ಎಂದು ಬಿಡಿಬಿಡಿಸಿ ಕೇಳಿದಾಗ ಹೌಹಾರಿ ಏನೂ ಮಾತಿಲ್ಲದಾದವರನ್ನು ಕಂಡಿದ್ದೇನೆ. ದೇವರನ್ನು ಜಗಲಿಯ ಮೇಲಿಟ್ಟು ಭಕ್ತಿಯಿಂದ ಪೂಜಿಸಿ ಕೈಮುಗಿದು ಆ ಮೇಲೆ ಮತ್ತೆ ಸ್ವೇಚ್ಛಾಚಾರಿಗಳಾಗಿ ನಡೆವ ಸನಾತನಿ ಆಸ್ತಿಕ ಭಕ್ತಗಣಗಳಂತೆ, ಗಾಂಧಿ-ಸ್ತುತಿಪಾಠಕರಾಗಿ ಗಾಂಧಿ ಅನುಯಾಯಿಗಳೆಂದು ಹೆಮ್ಮೆಪಟ್ಟುಕೊಂಬುವವರೇ ೧೦೦ಕ್ಕೆ ೯೫ಕ್ಕಿಂತಲೂ ಹೆಚ್ಚು ಜನವೆಂದು ನನಗೆ ಕಂಡಿತು.

ಪೂಜ್ಯ ಮಹಾತ್ಮಾಜಿಯವರ ಬಲಿದಾನದ ತರುವಾಯ ಈ ಮಾತು

ಇನ್ನಿಷ್ಟು ನಿಚ್ಚಳವಾಗಿ ಎಲ್ಲರ ಅನುಭವಕ್ಕೆ ಬಂದಿತು. ಎರಡು ವರುಷಗಳ ಮೊದಲಿನಿಂದ ತಲೆದೋರುತ್ತಿದ್ದ ವಿಚಾರಗಳನ್ನು ಎಲ್ಲರ ಅರಿಕೆಗಾಗಿ ಬಲ್ಲಿದರ ಮುಂದೆ ಇರಿಸುವುದು ಅತ್ಯಗತ್ಯವೆನಿಸಿತು.

ಇದು ಹೀಗೆಯೇ ಆಗಬೇಕೆಂದು ಹೇಳುವ ಅಧಿಕಾರವು ನನಗೆ ಇಲ್ಲ. ಅಥವಾ ಇದು ಹೀಗೆಯೇ ಆಗುವುದೆಂದು ಎದೆತಟ್ಟಿ ಹೇಳುವ ಭವಿಷ್ಯವಾದಿಯೂ ನಾನಲ್ಲ. ಇದರಲ್ಲಿ ಬಂದುವು ನನ್ನ ಕಂಡಿತದ ಕೆಲವು ಮಾತು ಮತ್ತು ಕೆಲವು ಸೂಚನೆಗಳು ಮಾತ್ರ. ಪ್ರವಾಹ-ಪತಿತರಾಗಿ ನಾವು ಹೊರಟಿದ್ದೇವೆ. 'ವಿಚಾರಿ' ಎಂದುಕೊಳ್ಳುವ ಮಾನವನಿಗೆ ಇದು ಭೂಷಣವಲ್ಲ. ಮಾನವ ಜೀವನದ ಗುರಿ ಮತ್ತು ಕಾಲಕಾಲದ ಯುಗಧರ್ಮಾದಿಗಳನ್ನು ಲೆಕ್ಕಕ್ಕೆ ಹಿಡಿದು ಆಯಾಕಾಲದ ಅವಶ್ಯಕತೆಗಳಂತೆ ನಮ್ಮ ಸಮಾಜರಚನೆಯನ್ನು ಮಾರ್ಪಡಿಸಿ ಕೊಳ್ಳುವುದರಲ್ಲಿಯೇ ಬುದ್ಧಿವಂತಿಕೆಯಿದೆ. ಸಮಾಜವೆಂಬುದು ಒಂದು ಸ್ಥಿರ ವಾದ ವಸ್ತುವಲ್ಲ. ಆದಕಾರಣ ಅದಕ್ಕೆ ಒಂದು ವಿಶಿಷ್ಟಕಾಲದಲ್ಲಿ ಮಾಡಿದ ಕಟ್ಟು ಕಟ್ಟಳೆಗಳು ಆ ಕಾಲವು ಬದಲಾಗುತ್ತಲೆ ನಿರುಪಯುಕ್ತವಾಗುತ್ತವೆ. ಸಮಾಜವು ಯಾವಾಗಲೂ ಗತಿಯುಕ್ತವಾಗಿದೆ. ಅದು ಸ್ಥಿತ್ಯಾತ್ಮಕವಲ್ಲ. ನಿಂತ ವಸ್ತುವಲ್ಲ; ನಡೆದ ಸಂಗತಿ. ಆದ ಮಾತಲ್ಲ; ಆಗುತ್ತಿರುವ ವಿಷಯ. ಅದು ಕೇವಲ ಭೂತವಲ್ಲ; 'ಭವ್ಯವೂ' ಆಗಿದೆ. ಆದುದರಿಂದ ಬೆಳೆವ ವಸ್ತುವಿಗೆ ಆಗಾಗ ಅದರ ಮೈಗೆ ಸರಿಹೋಗುವ ಬಟ್ಟೆಗಳೇ ಬೇಕಲ್ಲವೆ? ಆದಕಾರಣ ಈಗ ಯಾವ ಬಗೆಯ ಸಮಾಜರಚನೆ ಬೇಕೆಂಬುದನ್ನು ಬಲ್ಲಿದರು ನಿರ್ಧರಿಸಬೇಡವೆ?

ಭಾರತಸ್ವಾತಂತ್ರ್ಯವೆ ನಮ್ಮ ಗುರಿಯಾಗಿದ್ದರೆ ಇಂದಿನ ನಮ್ಮ ಜಾತೀಯ ನಡೆವಳಿ,ಸಮಾಜ ಅದಕ್ಕೆ ಪೋಷಕವಾಗಿದೆಯೆ? ಎಂಬುದೆ ಇಲ್ಲಿ ಮುಖ್ಯ ಪ್ರಶ್ನೆ.

---

# ಜಾತೀಯ ಸಮಸ್ಯೆಯ ಹಿನ್ನೆಲೆ

ನಮ್ಮ ಸಮಾಜದಲ್ಲಿ ಕಾಲಕ್ಕೆ ತಕ್ಕ ಮಹತ್ವದ ಕೆಲವು ಮಾರ್ಪಾಟು ಗಳಾಗಬೇಕೆಂದು ಪ್ರಯತ್ನಿಸಿದ ಆಧುನಿಕರಲ್ಲಿ ಶ್ರೀ ರಾಜಾರಾಮ ಮೋಹನ ರಾಯರು ಮೊದಲಿಗರು (ಕ್ರಿ.ಶ. ೧೮೨೮). ಇವರು ಹಿಂದೂಸಮಾಜದೊಳಗಿನ ಜಾತಿಭೇದ ಮೊದಲಾದುವುಗಳನ್ನು ತೊಡೆದು ಹಾಕಬೇಕೆಂದು ಪ್ರಯತ್ನಿಸಿ ದರೂ ಆಗ ಸಮಾಜವು ಈ ವಿಷಯದಲ್ಲಿ ತೀರ ವಿರೋಧವುಳ್ಳದಾಗಿತ್ತು.

ಕಾಲಚಕ್ರದಲ್ಲಿ ಸಿಲುಕಿ ಕಂಗೆಟ್ಟು ಜಾತಿಧರ್ಮಗಳ ಮೂಲೋದ್ದೇಶವನ್ನೇ ಮರೆತರೂ ನಮ್ಮ ಸಮಾಜವು ಎಂತಹ ಕಗ್ಗತ್ತಲೆಯೊಳಗಿಂದ ಪಾರಾಗಿಬಂದಿದೆ ಯೆಂಬುದನ್ನು ನೆನೆದರೆ ಯಾರಿಗಾಗಲಿ ಸೋಜಿಗವೆನಿಸದೆ ಇರದು. ಗೋವೆ ಯೊಳಗಿನ ಪರಂಗಿಗಳು ಕ್ರಿಸ್ತೀಧರ್ಮ ಪ್ರಸಾರಕ್ಕಾಗಿ ನಡಸಿದ ಅತ್ಯಾಚಾರ ಗಳನ್ನು ಎದುರಿಸಲು ಹಿಂದೂ ಸಮಾಜವು ನಡೆದುಕೊಂಡ ಬಗೆಯು ಅಂದಿನ ಮುಂದಾಳುಗಳ ತಿಳಿಗೇಡಿತನವನ್ನೇ ಬಯಲಿಗೆ ತರುತ್ತದೆ. ಧರ್ಮಪ್ರಸಾರಕ ಪಾದ್ರಿಗಳು, ಇರುಳು ಯಾವುದಾದರೊ ಒಂದು ಮನೆಯ ಮೇಲೆ ಮಾಂಸದ ಒಂದು ತುಂಡು ಚೆಲ್ಲಿದ್ದರೆ, ಮರುದಿನ ಹಿಂದೂ ಸಮಾಜವು ಆ ಮನೆಯವ ರನ್ನೆ ಜಾತಿಬಾಹಿರರೆಂದು ಅವರೊಡನೆ ಎಲ್ಲ ವ್ಯವಹಾರಗಳನ್ನು ನಿಲ್ಲಿಸುತ್ತಿತ್ತು! ತಮ್ಮ ಉಪದೇಶಕ್ಕೆ ಮನಮೆಚ್ಚಿ ಯಾರೂ ಕ್ರಿಸ್ತಿಗಳಾಗದೆ ಇರುವುದನ್ನು ಕಂಡು ಅಂದಿನ ಪಾದ್ರಿಗಳು ಈ ಹಂಚಿಕೆಯನ್ನು ಕಂಡುಹಿಡಿದು ತಮ್ಮ ಕೆಲಸವನ್ನು ಸಾಧಿಸಿದರು. ಹಲವರನ್ನು ಕ್ರಿಸ್ತಿಗಳನ್ನಾಗಿ ಪಡೆದುಕೊಂಡರು. ಆ ಮನೆಯವರು ಹಿಂದೂಧರ್ಮದಲ್ಲಿ ಉಳಿಯಲು ಹಂಬಲಿಸುತ್ತಿದ್ದರೂ ಅವ ರೊಡನೆ ಉಳಿದವರು ಅಸಹಕಾರವನ್ನೆ ಆರಂಭಿಸಿದ್ದರಿಂದ ಆ ಜನರಿಗೆ ಕ್ರಿಸ್ತಿ ಗಳಾಗದೆ ಬೇರೆ ದಾರಿಯೆ ಇರಲಿಲ್ಲ.

ಗೋವೆಯ ಪಾದ್ರಿಗಳು ಜುಟ್ಟು ಬಿಟ್ಟವರಿಗೆ ಧಾರ್ಮಿಕ ಕರವನ್ನು ಹಾಕಿದರು. ಚೆಂಡಿಕೆಯ ಆಕಾರದಂತೆ ಹೆಚ್ಚು ಅಥವಾ ಕಡಿಮೆ ಕರವನ್ನು ಕೊಡಬೇಕಾಗುತ್ತಿದ್ದಿತು. ಅನೇಕರು ಹೆಚ್ಚು ಚೆಂಡಿಕೆ ಇಟ್ಟು ಹೆಚ್ಚು ಕರ ವನ್ನು ಕೊಡುವುದರಲ್ಲಿ ಹೆಮ್ಮೆಬಡುತ್ತಿದ್ದರು. ಜುಟ್ಟಿದ ಕರವನ್ನು ಉಳಿದವ ರಿಗಿಂತ ಹೆಚ್ಚು ಕೊಡುವುದು ಅವರ ವಿಶೇಷ ಧರ್ಮಾಭಿಮಾನದ ದ್ಯೋತಕ ವೆಂದು ಅಂದಿನ ಜನದ ತಿಳುವಳಿಕೆಯಾಗಿತ್ತು!

ಕಂನಾಡ ಕರಾವಳಿಯಲ್ಲಿ ಅಲ್ಬುಕರ್ಕನು ಹಾಗೂ ಪೋರ್ತುಗೀಸ ಪಾದ್ರಿಗಳು ಬಂದು ಧರ್ಮಪ್ರಸಾರಕ್ಕಾಗಿ ನಡಸಿದ ಕೋಲಾಹಲ ಕಾಲದ ಇತಿ ಹಾಸದಲ್ಲಿ ಅಂದಿನ ನಮ್ಮ ಧಾರ್ಮಿಕ ಕಲ್ಪನೆಗಳ ಚಿತ್ರವೂ ಚೆನ್ನಾಗಿ ಒಡಮೂಡಿ ನಿಂತಿದೆ. ೧೭, ೧೮, ೧೯ನೆಯ ಶತಮಾನಗಳಲ್ಲೂ ನಮ್ಮ ಜಾತಿ, ಧರ್ಮಗಳ ತಿಳುವಳಿಕೆಗಳು ದಿನದಿನಕ್ಕೆ ಹೀಗೆಯೆ ವಿರೂಪಗೊಳ್ಳುತ್ತಲೆ ನಡೆದುದು,

(ಒಂದೆರಡು ಅಪವಾದಗಳನ್ನು ಬಿಟ್ಟರೆ) ಆ ಕಾಲದಲ್ಲಿ ನಮ್ಮ ರಾಷ್ಟ್ರದಲ್ಲಾದ ಹಲವು ಘಟನೆಗಳಿಂದ ಸ್ಪಷ್ಟವಾಗುತ್ತದೆ.

ಹೆರರು ಮುಟ್ಟಿದರೆ ಮೈಲಿಗೆಯಾಗುತ್ತದೆಂದು ತನ್ನ ನೆರಳಿಗೆ ತಾನೇ ಹೆದರಿ ಹಿಂದೂ ಸಮಾಜವು ಸಂಕೋಚಗೊಂಡಿತು. ಕ್ಷೀಣವಾಗುತ್ತ ನಡೆದಿತು. ತಾವು ಧಾರ್ಮಿಕರು, ತಾವು ಪವಿತ್ರರು ಎಂಬ ಈರ್ಷೆಯಲ್ಲಿ ಪ್ರತಿಯೊಂದು ಜಾತಿಮತದವರೂ ಒಬ್ಬರಿಂದೊಬ್ಬರು ದೂರವಾಗುತ್ತ ನಡೆದರು. ಒಬ್ಬರನ್ನೊಬ್ಬರು ಕೀಳ್ಗೆಯಲಾರಂಭಿಸಿದರು.

ಮುಸಲ್ಮಾನರು ಮೈಮೇಲೆ ಬಂದರು. ಅವರು ಏರಿಬಂದಂತೆ ನಮ್ಮ ಮಡಿಯನ್ನು ಕಾಯ್ದುಕೊಳ್ಳಲು ನಾವು ಹಿಂದೆ ಹಿಂದೆ ಸರಿಯುತ್ತ ನಡೆದೆವು. ಭಾರತವು ಸ್ವಾತಂತ್ರ್ಯವನ್ನು ಕಳೆದುಕೊಂಡಿತು. 'ದೇಶವು ಹೋಗಲಿ ನಮ್ಮ ಧರ್ಮವೊಂದು ಉಳಿದರೆ ಸಾಕು' ಎಂಬ ಪ್ರವೃತ್ತಿಯು ತೋರಿಬಂತು. ಪರಕೀಯರ ಸೇವಕರಾಗಿ-ತಮ್ಮ ದೇಶವನ್ನು ದಾಸ್ಯದಲ್ಲಿಡಲು ಕಾರಣರಾಗಿ ಬದುಕುತ್ತಿದ್ದರೂ ಭವ್ಯವಾಗಿ ಜುಟ್ಟು, ಜನಿವಾರ, ಲಿಂಗ, ಮುದ್ರೆಗಳನ್ನು ಧರಿಸಿ ತಾವು ಪರಮಧಾರ್ಮಿಕರೆಂಬ ಭ್ರಾಂತಿಯಲ್ಲಿ ಜನ ಹೊರಳಾಡುತ್ತಲಿದ್ದಿತು.

ಬ್ರಿಟಿಶರು ಬಂದರು. ಅವರು ದೇಶವನ್ನು ಮುಸಲ್ಮಾನರಂತೆ ಹುಂಬತನದಿಂದ ಸುಲಿಯಲಿಲ್ಲ. ಮುಸಲ್ಮಾನರು ದಾಳಿಮಾಡಿ ದೇವಸ್ಥಾನಗಳನ್ನೂ ನಾಡಿನ ಸಿರಿವಂತರನ್ನೂ ಲೂಟಿಮಾಡುತ್ತಿದ್ದರು. ಒತ್ತಾಯದಿಂದ ಧರ್ಮಾಂತರಗಳನ್ನು ನಡಸುತ್ತಿದ್ದರು. ಹಿಂದೂ ಹೆಣ್ಣುಮಕ್ಕಳನ್ನು ಓಡಿಸುತ್ತಿದ್ದರು. ಈ ಕಾರಣದಿಂದ ತೀರ ಅಸಹ್ಯವಾಗಿ ಆಗ-ಈಗ ಹಿಂದೂಜನ ಪುಂಡು ಏಳುತ್ತಲಿತ್ತು. ತಮ್ಮ ಧರ್ಮರಕ್ಷಣೆಗಾಗಿ 'ಹಿಂದೂರಾಯ ಸುರತ್ರಾಣರು' ಮುಂದೆ ಬಂದರು. 'ಹಿಂದೂ ಪದ ಪಾದಶಾಹಿ' ತಲೆಯೆತ್ತಲು ಹವಣಿಸಿತು. ಆದರೂ ಇದರಲ್ಲಿ ನಿಜವಾದ ರಾಜಕೀಯ ಸ್ವಾತಂತ್ರ್ಯದ ಗುರಿಯಿರಲಿಲ್ಲ.

೧೬ನೆಯ ಶತಕದ ಸಂಕುಚಿತ ಧಾರ್ಮಿಕ ಭಾವನೆಯ ಮಾದರಿಯನ್ನು ತೋರಿಸುವ ಎರಡು ಉದಾಹರಣಗಳನ್ನು ಇಲ್ಲಿ ಎತ್ತಿ ಹೇಳಬಹುದು. ರಕ್ಕಸತಂಗಡಿಯ ಕಾಳಗದಲ್ಲಿ 'ಹಿಂದೂರಾಯ ಸುರತ್ರಾಣ'ರೆನಿಸಿದ ವಿಜಯನಗರದ ರಾಜರ ಎದುರಾಳಿಗಳೆಲ್ಲ ಮುಖ್ಯವಾಗಿ ಮುಸಲ್ಮಾನರೆ ಇದ್ದರಷ್ಟೇ.

ಕೈಯಿಂದಾದಷ್ಟು ನೆರವಾದರು. ವಿರೋಧಿಸಲಿಲ್ಲ. ಜಾತಿಬಣಗಳೊಳಗಿನ ಮಾತುಗಳಲ್ಲಿ ತಾವು ತಟಸ್ಥರಾಗಿ ಉಳಿಯುವೆವೆಂಬ ವಚನವನ್ನು ಕರ್ತವ್ಯ ಬುದ್ಧಿಯಿಂದ ಬಹಳ ಧೂರ್ತತನದಿಂದ ಕೊನೆಯುವರೆಗೂ ಪಾಲಿಸಿದರು.

ನಮ್ಮೊಳಗೆ ಇದ್ದ ಜಾತಿಭೇದಗಳ ಲಾಭ ಪಡೆದು ಬ್ರಿಟಿಶರು ತಮ್ಮ ರಾಜ್ಯವನ್ನು ಇಲ್ಲಿ ಸ್ಥಿರವಾಗಿ ಉಳಿಸಿಕೊಳ್ಳಲು ಹೆಣಗಾಡಿದರೆಂಬ ವಿಧಾನವು ಕೆಲವರಿಗೆ ನಿರಾಧಾರವಾದ ಕಾಲ್ಪನಿಕ ಸಂಗತಿಯೆನಿಸಬಹುದು. ಅಂತಹರು ಕೆಳಗಣ ಈ ಅವತರಣಿಕೆಯನ್ನು ಮನನ ಮಾಡಬಹುದು. ಇದನ್ನು ಬರೆದವನು ಸರ್ ಜಾನ್ ಸ್ಟ್ರಾಚಿ, ಜಿ. ಸಿ. ಎಸ್. ಐ. ಎಂಬ ಒಬ್ಬ ಆಂಗ್ಲ ಅಧಿಕಾರಿಯು. ಹಿಂದೂದೇಶದ ಆಡಳಿತದ ವರದಿಯ ಗ್ರಂಥದಲ್ಲಿ ಆತನು ಬರೆದಿರುವುದೇನೆಂದರೆ--

Nothing could be more opposed of the policy and universal practice of our Government in India than the old maxim of divide and rule; the maintenance of peace among all classes has always been recognised as the most essential duties of our 'bellingerent civilisation', but this should not blind us to the fact that the existance side by side of these hostile creeds is one of the strong points in our political position in India, the better class of Mahomedans are a sorce of strength and not of weakness

ಡಾ. ಸೈಯದ ಹುಸೇನರು Revising India ಎಂಬ ಗ್ರಂಥದಲ್ಲಿ ಬ್ರಿಟಿಶರ ಭೇದನೀತಿಯು ೧೮೫೯ ರಿಂದಲೆ ಆಚರಣೆಯಲ್ಲಿ ಇದ್ದುದನ್ನು ಸಾಧಾರವಾಗಿ ಉಲ್ಲೇಖಿಸಿದ್ದಾರೆ.

'Lord Elphinstone said in 1859, *Divide at Imperia* is the old Roman motto and it should be ours.'

ಲಾರ್ಡ ಎಲ್‌ಫಿನ್ಸಟನ್‌ನು ಭೇದನೀತಿಯಿಂದಲೇ ತಾವು ಇಲ್ಲಿ ಆಳಬೇಕೆಂದು ನಿರ್ಧರಿಸಿದ್ದಂತೆ ಲಾರ್ಡ ಎಲ್ಗಿನ್‌ನೆಂಬ ವೈಸರಾಯನೂ ಅಭಿಪ್ರಾಯಪಟ್ಟಿದ್ದಾನೆ.

**Keep the Hindus and Muslims divided.** ಹಿಂದೂ ಮತ್ತು ಮುಸಲ್ಮಾನರು ಒಬ್ಬರೊಬ್ಬರನ್ನು ಹಗೆಗಳಂತೆ ಕಾಣುವ ಹಾಗೆ ಹಂಚಿಕೆ ಮಾಡತಕ್ಕದ್ದೆಂಬ ವಿಚಾರವನ್ನು ಎಲ್ಗಿನ್ ಪ್ರಭೃತಿಗಳು ಸ್ಪಷ್ಟವಾಗಿ ಬರೆದಿಟ್ಟಿದ್ದಾರೆ. (ಮಾಡರ್ನರಿವ್ಯೂ ೧೯೪೭, ನವಂಬರ ಸಂಚಿಕೆ).

ಇಂಗ್ರೇಜಿ ವಿದ್ಯೆಯು ಬಂದ ಬಳಿಕ ಕೆಲಕಾಲದಲ್ಲಿ ನಮ್ಮ ನಾಡಿನ ಜನಗಳಲ್ಲಿ ತಮ್ಮ ತಮ್ಮ ಜಾತಿಯ ಹೆಮ್ಮೆಗೆ ಕೊಂಬು ಮೂಡಿ ಅವರೆಲ್ಲ ಒಬ್ಬರಿಂದೊಬ್ಬರು ಸಿಡಿದು ದೂರವಾಗಲಾರಂಭಿಸಿದರು. ಇಂಗ್ರೇಜಿಯರ ವಿಶಿಷ್ಟ ಶಿಕ್ಷಣ ಪದ್ಧತಿಯಿಂದ ವಿದ್ಯಾರ್ಥಿಗಳಲ್ಲಿ ಸಾಮಾಜಿಕ ಭಾವನೆ, ರಾಷ್ಟ್ರೀಯತ್ವವು ಸ್ವಲ್ಪವೂ ಅಂಕುರಿಸದೆ ವೈಯಕ್ತಿಕ ಸ್ವಾರ್ಥಬುದ್ಧಿಯೆ ತಾನೆ ತಾನಾಗಿ ಬೆಳೆದಿತು. ಶಾಲೆ-ಕಾಲೇಜುಗಳಲ್ಲಿ ಸಾಮೂಹಿಕ, ಸಾಂಘಿಕ ರಾಷ್ಟ್ರೀಯ ಭಾವನಾಪೋಷಕ ಯಾವ ಚಟುವಟಿಕೆಗಳಿಗೂ ಇಂಬು ಇರಲಿಲ್ಲ.

ವಿದ್ಯಾರ್ಜನೆಯ ಕಾಲದಲ್ಲಿ ಇಂಗ್ರೇಜಿ ಭಾಷೆಯೊಂದು ಚೆನ್ನಾಗಿ ಬಂದರಾಯಿತು. ಆ ವಿದ್ಯಾರ್ಥಿಗೆ ಮುಗಿಲು ಮೂರೇ ಗೇಣು. ಜ್ಞಾನಶಾಖೆಗಳ ಆಳವಾದ ಅಭ್ಯಾಸವು ವಿದ್ಯಾರ್ಥಿಗಳ ಗುರಿಯಾಗಿರದೆ, ಸರಕಾರಿ ನೌಕರಿಗೆ ಬೇಕಾಗುವ ಅರ್ಹತೆಯನ್ನು ಪಡೆಯುವುದೇ ಅವರ ಶಿಕ್ಷಣದ ಧ್ಯೇಯವಾಗಿತ್ತು. ಆಗಿನ ವಿದ್ಯಾರ್ಥಿಗಳಲ್ಲಿ ಬ್ರಿಟಿಶ ಸಾಹೇಬನನ್ನು ತಾನು ಹೇಗೆ ಸಂತೋಷ ಗೊಳಿಸಲು ಸಮರ್ಥನಾದೇನೆಂಬ ಚಿಂತೆಯೆ ಚಿಂತೆ. ಶಿಕ್ಷಣವನ್ನು ಪಡೆದು ಸುಶಿಕ್ಷಿತನಾದ ತನಗೆ, ಸಾಮಾಜಿಕ ಹೊಣೆ, ರಾಷ್ಟ್ರೀಯ ಕರ್ತವ್ಯವು ಏನಾದರೂ ಉಂಟೆಂಬ ವಿಚಾರವು ಕೂಡ ಸೋಂಕುತ್ತಿದ್ದವರು ವಿರಳ. ಇಂಗ್ರೇಜಿ ಕಲಿತ ವರ ಸಂಖ್ಯೆ ಹೆಚ್ಚುತ್ತ ಹೋಗಿ, ಅವರ ಅಪೇಕ್ಷೆಗೆ ತಕ್ಕಂತಹ ಕೆಲಸಗಳು ದೊರೆಯದಾದ ಮೇಲೆ, ನಮ್ಮ ದೇಶದಲ್ಲಿ ಇಂತಹ ಕೆಲಸಗೇಡಿಗಳೊಳಗಿಂದಲೇ ಮುಂದೆ ಸಾವಿರಾರು ಸಂಖ್ಯೆಯಿಂದ ದೇಶಭಕ್ತರ ಸಂಖ್ಯೆಯು ವೃದ್ಧಿಂಗತ ವಾಗುತ್ತ ಬಂದಿತು. ಸರಕಾರಿ ನೌಕರಿಗಳಲ್ಲಿ ಇಂಗ್ರೇಜಿ ಕಲಿತವರ ಬೇಡಿಕೆಯು ವಿಶೇಷವಾಗಿದ್ದು, ನೌಕರಿಗಳು ಸುಲಭಸಾಧ್ಯವಿದ್ದಾಗ ದೇಶದ ಸೇವೆಯ

ನೆನಪಾದ ಮಹಾಮಹಿಮರು ಕ್ವಚಿತ. ಆದುದರಿಂದಲೆ ಲೋಕಮಾನ್ಯ ತಿಲಕ, ಆಗರಕರ, ಗೋಖಲೆ, ಲಾಲಾಲಜಪತರಾಯ, ಬಿಪಿನಚಂದ್ರಪಾಲ, ಮೊದಲಾದ ಆ ಪೀಳಿಗೆಯ ತ್ಯಾಗವೀರರು ಭಾರತೀಯರಿಗೆಲ್ಲ ಪರಮ ವಂದ್ಯರಾಗಿದ್ದಾರೆ.

ಬ್ರಿಟಿಶರಿಗೆ ಇಲ್ಲಿ ತಮ್ಮ ಆಡಳಿತವನ್ನು ಸುಸ್ಥಿರಗೊಳಿಸುವ ದೃಷ್ಟಿಯಿಂದ ನಮ್ಮ ನಾಡಿನ ಜಾತಿಪಂಗಡಗಳಲ್ಲಿ ಹಿಂದೂ-ಮುಸಲ್ಮಾನವೆಂಬ ಭೇದವು ಬಹಳೇ ಉಪಯುಕ್ತವಾಯಿತು. ಇದರಂತೆ ಬ್ರಾಹ್ಮಣ-ಬ್ರಾಹ್ಮಣೇತರವೆಂಬುದರ ಲಾಭವನ್ನೂ ಬ್ರಿಟಿಶರು ಪಡೆಯದೆ ಇರಲಿಲ್ಲ. ನಮ್ಮ ನಾಡಿನ ಸಾಹಿತ್ಯ ಸಂಸ್ಕೃತಿಗಳ ಅಭ್ಯಾಸಿಗಳಾದ ಪಾಶ್ಚಾತ್ಯ ಸಂಶೋಧಕರು ಕಂಡುಹಿಡಿದ ಹಲಕೆಲವು ಸಿದ್ಧಾಂತಗಳು ಇಲ್ಲಿಯ ಜಾತಿಮತಗಳ ಭಿನ್ನಭಾವಕ್ಕೆ ಪುಟಗೊಟ್ಟವು. ಹಿಂದೆ ಆಗಿ ಹೋದ ಐತಿಹಾಸಿಕ ಘಟನೆಗಳನ್ನು ರಾಷ್ಟ್ರೀಯ ಐಕ್ಯಕ್ಕೆ ಅನುಕೂಲವಾಗುವಂತೆ ವಿವರಿಸಿ ಹೇಳಬಹುದು; ಅದರಂತೆ ದೇಶದಲ್ಲಿ ಎಂದೆಂದೂ ಒಕ್ಕಟ್ಟು ತಲೆದೋರದಂತೆ ಪ್ರತಿಪಾದಿಸಬಹುದು. ಆದುದರಿಂದ ಅದನ್ನು ತಿಳಿಸಿ ಹೇಳುವ ಬಗೆಯು ಬಹಳ ಮಹತ್ವದ್ದಾಗಿರುತ್ತದೆ. ಆದರೆ ಇದರ ಕಡೆಗೆ ವಿಶೇಷಗಮನ ಕೊಡದ ಸಂಶೋಧಕರು ಬರೆದ ಹಲವು ಲೇಖನ, ಗ್ರಂಥಗಳು ನಮ್ಮೊಳಗಿನ ಅನೈಕ್ಯತೆಯು ದೃಢವಾಗುವುದಕ್ಕೆ ತುಂಬ ಸಹಕಾರಿಗಳಾಗಿವೆ. ಮ್ಯಾಕ್ಸಮುಲ್ಲರ ಮೊದಲಾದವರ ಗ್ರಂಥಗಳಿಂದ ಆರ್ಯಾಭಿಮಾನಕ್ಕೆ ಕೊಂಬು ಮೂಡಿದುವು. ಕಾಲ್ಡವೆಲ್ ಪ್ರಭೃತಿಗಳ 'ದ್ರಾವಿಡ' (?) ಸಿದ್ಧಾಂತದಿಂದ ದಕ್ಷಿಣದಲ್ಲಿ ಇನ್ನೊಂದು ಬಗೆಯ ಹೊಸ ಅಹಂಕಾರವು ಚಿಗುರಿಕೊಂಡಿತು. ದೇಶದಲ್ಲಿ ಮುಸಲ್ಮಾನ, ಬೌದ್ಧ, ಜೈನ, ಶೀಖ, ಆರ್ಯ, ದ್ರಾವಿಡ, ಮೊದಲಾದ ಪಂಥದ ಅಭಿಮಾನಿಗಳು ಹೊಚ್ಚ ಹೊಸ ಬಗೆಯ ಆವೇಶದಿಂದ ತಮ್ಮ ತಮ್ಮ ಪಂಗಡಗಳಿಗೆ ಅನುಯಾಯಿಗಳನ್ನು ಕಲೆಹಾಕಲಾರಂಭಿಸಿದರು.

ಹಿಂದುಸ್ತಾನದ ಪಾರತಂತ್ರ್ಯದ ಬಂಧನಗಳನ್ನು ಇನ್ನಿಷ್ಟು ಬಿಗಿಯಾಗಿ ಬಿಗಿಯಾಗಿಸಲು ತಮ್ಮ ಬುದ್ಧಿವಂತಿಕೆಯನ್ನು ಮಾರಿ ವಿಶೇಷ ನೆರವಾದವರು ಬ್ರಾಹ್ಮಣರು. ಮಹಮ್ಮದೀಯರ ಕಾಲದಿಂದಲೂ ಈ ವರ್ಗದವರು ಮಾಡುತ್ತ ಬಂದ ಈ ಬೌದ್ಧಿಕ ವ್ಯಭಿಚಾರದ ಪ್ರಾಯಶ್ಚಿತ್ತವೆ ಇಂದಿನ ಅವರ

ಅಧೋಗತಿ. ಅಲೆಕ್ಸಾಂಡರನು ಬಂದಾಗ ಪರಕೀಯರನ್ನು ಇಲ್ಲಿ ಅರಗ್
ಗೆಯೂ ಉಳಿಯಗೊಡದಂತೆ ತಳ್ಳಿಬಿಡಲು ಜನರನ್ನು ಹುರಿದುಂಬಿಸಿದ್ದಕ್ಕಾಗಿ ಮರಣದಂಡನೆಯನ್ನು ಆನಂದದಿಂದ ಸ್ವೀಕರಿಸಿದ ಬ್ರಾಹ್ಮಣರ ಮುಂದಿನ ಕಾಲದ ಈ ಅಧೋಗತಿಯು ಅತ್ಯಂತ ಶೋಚನೀಯವಾಗಿದೆ. ಆದರೆ ಈ ಅವನತಿಯಲ್ಲಿಯೂ ಭಾರತಸ್ವಾತಂತ್ರ್ಯದ ಕಾರ್ಯಾರಂಭವಾದುದು ಅವರಿಂದಲೆ ಮೊದಲು. ಬ್ರಿಟಿಶರ ಕುಟಿಲತಂತ್ರದ ದುಷ್ಪರಿಣಾಮಗಳನ್ನು ಅರಿತು ಕೊಂಡು ಅದಕ್ಕೆ ವಿರೋಧಿಸಲು ಮೊದಲು ತಲೆತೆಗೆದು ನಿಂತವರೂ ಇವರೇ. ಬ್ರಿಟಿಶರು ಬ್ರಾಹ್ಮಣ ವರ್ಗದವರಿಂದ ತಮ್ಮ ರಾಜ್ಯಯಂತ್ರವನ್ನು ದೃಢಪಡಿಸಿಕೊಳ್ಳಲು ಸಾಧ್ಯವಿದ್ದಷ್ಟು ದಿನ ಅವರಿಂದ ಸಹಾಯಪಡೆಯಲು ಹಿಂದೆಗೆಯಲಿಲ್ಲ. ಆದರೆ ಅವರು ಕ್ರಾಂತಿಕಾರರಾಗಿ ದೇಶದಲ್ಲಿ ತಮ್ಮ ಆಡಳಿತದ ವಿರುದ್ಧ ಅಪ್ರೀತಿ, ಅಸಮಾಧಾನ, ದ್ವೇಷಗಳನ್ನು ಉಂಟುಮಾಡಲಾರಂಭಿಸುತ್ತಲೆ, ಬ್ರಿಟಿಶರು ಬ್ರಾಹ್ಮಣರನ್ನು ನೆಲಕ್ಕೆ ಮೆಟ್ಟುವ ಹಂಚಿಕೆಯನ್ನು ಹುಡುಕಲಾರಂಭಿಸಿದರು. ಆ ಹಂಚಿಕೆಯೇ ಬ್ರಿಟಿಶ ಅಧಿಕಾರಿಗಳ ಸಹಕಾರ, ಸಹಾನುಭೂತಿ, ಸಹಾಯಗಳಿಂದ ಹುಟ್ಟಿ ಬೆಳೆದು ವಡವಾಗ್ನಿಯಂತೆ ಹಬ್ಬಲಾರಂಭಿಸಿದ್ದ ಬ್ರಾಹ್ಮಣೇತರ ಚಳವಳಿ.

ನಮ್ಮಲ್ಲಿ ಜಾತಿಭೇದ ನಿರ್ಮೂಲನಾದಿ ಸಾಮಾಜಿಕ ಸುಧಾರಣೆಗಳನ್ನು ಮಾಡಬೇಕೆಂಬ ವಿಚಾರಗಳು ಮೊದಲು ತಲೆದೋರಿದ್ದು ರಾಷ್ಟ್ರೀಯ ಭಾವನೆಯ ಮೂಲಕವಾಗಿಯಲ್ಲ. ಪರಂಗಿಗಳಾಗಬೇಕೆಂಬ ಹಂಬಲಕ್ಕಾಗಿ. ಉದಾತ್ತವಾದ ಮಾನವ್ಯಭಾವದಿಂದ ಈ ಸುಧಾರಣೆಗೆ ಪ್ರವೃತ್ತರಾದ ಒಬ್ಬಿಬ್ಬ ಮಹನೀಯರು ಇಲ್ಲದಿಲ್ಲ. ಆದರೂ ನಮ್ಮ ರಾಜ್ಯಕರ್ತರಾದ ಬ್ರಿಟಿಶರಂತೆ ನಮ್ಮ ಸಮಾಜವೂ ಆಗಬೇಕೆಂಬ ಆಕಾಂಕ್ಷೆಯೆ ಈ ವಿಚಾರದ ಮುಖ್ಯವಾದ ಹಿನ್ನೆಲೆಯಾಗಿತ್ತು.

ಜಗತ್ತಿನಲ್ಲಿ ಹಿಂದೂ ಧರ್ಮವು ಹೀನ, ಕುಂದುಕೊರತೆಗಳುಳ್ಳದು ಎಂಬ ಅಪವಾದಕ್ಕೆ ಗುರಿಯಾಗದೆ ಅದನ್ನು ಸ್ವಯಂ ಪರಿಪೂರ್ಣವಾಗಿಸಬೇಕು. ಕ್ರಿಸ್ತಿ, ಮುಸಲ್ಮಾನೀ ಧರ್ಮಗಳಲ್ಲಿರುವ ಒಳ್ಳೆಯ ಮಾತುಗಳನ್ನು (ಏಕೇಶ್ವರೀ ಪದ್ಧತಿ, ನಿರಾಕಾರನಾದ ಸರ್ವವ್ಯಾಪಿ ದೇವತಾ ಪೂಜೆ, ವರ್ಣರಹಿತ ಸಮಾಜ ಮುಂತಾದುವುಗಳನ್ನು) ಸ್ವೀಕರಿಸುವಲ್ಲಿ ಹಾನಿಯಿಲ್ಲ. ಏಕೆಂದರೆ ಇದು ಉಪನಿಷತ್ತುಗಳಲ್ಲಿ ಹೇಳಿದ ಉಚ್ಚವಿಚಾರಗಳಿಗೆ ಅನುಗುಣ

ವಾಗಿಯೆ ಇದೆ. ಸ್ತ್ರೀಯರನ್ನು ಕೀಳ್ಗೆಯುವುದು ಅನ್ಯಾಯ, ಸತೀಪದ್ಧತಿಯು ನಮ್ಮ ಧರ್ಮಕ್ಕೆ ಕಲಂಕ, ಎಂಬಿವೇ ಮೊದಲಾದ ಉದಾತ್ತ ಗಂಭೀರ ವಿಚಾರ ಗಳಿಂದ ಶ್ರೀ ರಾಜಾರಾಮ ಮೋಹನರಾಯರು ಬ್ರಹ್ಮೋ ಸಮಾಜವನ್ನು ಸ್ಥಾಪಿಸಿದರು. ಶ್ರೀ ದಯಾನಂದ ಸರಸ್ವತಿಗಳು ವೇದಗಳ ಶ್ರೇಷ್ಠತೆಯನ್ನು ಸಾರಿ ಮೂರ್ತಿ ಪೂಜೆಯನ್ನು ಖಂಡಿಸಿ ಆರ್ಯಧರ್ಮವನ್ನು ಪುನರುಜ್ಜೀವನ ಗೊಳಿಸಲು ಆರ್ಯಸಮಾಜವನ್ನು ನಿರ್ಮಿಸಿದರು. ಮುಂದೆ ಇದೇ ಮೇರೆಗೆ ಶ್ರೀ ಮಹಾದೇವ ಗೋವಿಂದ ರಾನಡೆ ಪ್ರಭೃತಿಗಳಿಂದ ಪುಣೆ ಮುಂಬಯಿ ಯಲ್ಲಿ ಪ್ರಾರ್ಥನಾ ಸಮಾಜವು ಹೊರಟಿತು. ಆದರೆ ಈ ಎಲ್ಲ ಬುದ್ಧಿವಾದ ಗಳನ್ನೂ ಮೀರಿಸಿ, ಸುಶಿಕ್ಷಿತ ಭಾರತೀಯರ ದೃಷ್ಟಿಕೋನದಲ್ಲಿ ಅಪೂರ್ವ ವಾದ ಕ್ರಾಂತಿಯನ್ನು ಮಾಡಿದವರು ಶ್ರೀ ರಾಮಕೃಷ್ಣ ಪರಮಹಂಸರು; ಮತ್ತು ಅವರ ಅದ್ವಿತೀಯ ಶಿಷ್ಯ ಶ್ರೀ ವಿವೇಕಾನಂದರು.

ಮಹಮ್ಮದೀಯರ ದಾಳಿಗಳಿಂದ ಹಿಂದೂ ಸಮಾಜವು ಮೊದಲೆ ಸಡಿ ಲಿತ್ತು. ಇಂಗ್ರೇಜಿ ವಿದ್ಯೆಯ ಸಂಪಾದನೆಯಿಂದ ಈ ಸಮಾಜದ ತರುಣರಲ್ಲಿ ನಾಸ್ತಿಕತೆ— ತಮ್ಮ ದೇಶ, ಧರ್ಮಗಳ ಬಗೆಗೆ ಅಂತರಾಳದಲ್ಲಿ ತಿರಸ್ಕಾರವು ಬೆಳೆ ಯುತ್ತ ನಡೆದಿತ್ತು. ಕ್ರಿಸ್ತೀ ಮಿಶನರಿಗಳ ಧರ್ಮೋಪದೇಶದ ಪರಿಣಾಮವಾಗಿ ಹಿಂದೂ ಸಮಾಜವು ಇನ್ನು ಬೇಗನೆ ತಲೆಕೆಳಗಾಗದೆ ಇರದೆಂಬ ಭೀತಿಯು ಬಲವಾದ ಕಾಲದಲ್ಲಿ ಮೇಲ್ಕಾಣಿಸಿದ ವಿಭೂತಿಗಳು ಮುಂದೆ ಬಂದು ಭಾರತ ವನ್ನು ಒಂದು ಧಾರ್ಮಿಕ ಸಂಕಟದಿಂದ ಮುಕ್ತಮಾಡಿದರು. ಲೋಕವಿಖ್ಯಾತರಾದ ಶ್ರೀಮತಿ ಬೆಸಂಟಮ್ಮರಿಂದ ಸಂದ ಸೇವೆಯೂ ಈ ವಿಷಯದಲ್ಲಿ ಸಾಮಾನ್ಯ ವಾದುದಲ್ಲ. ಇಂತಿದೆಲ್ಲವು ನಿಜವಿದ್ದರೂ ಸಾಮಾನ್ಯವಾಗಿ, ಸಮಾಜ ಸುಧಾರಕ ರೆಂಬವರು ಹೆಚ್ಚಾಗಿ ಆಂಗ್ಲರ ಅನುಕರಣಶೀಲರೇ ಆಗಿದ್ದರು. ಆದುದರಿಂದ ಸುಧಾರಕರ ಬಗೆಗೆ ಪೂರ್ವಪರಂಪರಾಭಿಮಾನಿಗಳಲ್ಲಿ, ಜನಸಾಮಾನ್ಯರಲ್ಲಿ ಅನಾದರ, ತಿರಸ್ಕಾರದ ಭಾವನೆಗಳೆ ಮನೆಮಾಡಿಕೊಂಡಿದ್ದುವು. 'ಸುಧಾರಕ' ನೆಂಬ ಮಾತು ಬೈಗಳಂತೆ ಉಪಯೋಗಿಸಲ್ಪಡುತ್ತಲಿದ್ದಿತು. ಇನ್ನೂ ಕೆಲರ ಬಾಯಲ್ಲಿ ಅದೊಂದು ಈ ಬಗೆಯ ಹಡೆಮಾತಾಗಿ ಉಳಿದಿದೆ!

ಆಂಗ್ಲವಿದ್ಯಾಭ್ಯಾಸದ ಪರಿಣಾಮದಿಂದಲೂ ಬ್ರಿಟಿಶರ ಹಾಗೂ ಮಿಶನರಿ ಗಳ ವ್ಯಕ್ತಾವ್ಯಕ್ತ ಬೋಧನೆ, ಸೂಚನೆಗಳ ಕಾರಣದಿಂದಲೂ ನಮ್ಮ ದೇಶ

ದಲ್ಲಿ ಸಾಮಾಜಿಕ ಮತ್ತು ಜಾತೀಯ ಅಂದೋಲನಗಳು ಆರಂಭವಾದುವು. ಅದರಂತೆ ಘಟನಾಬದ್ಧ ರಾಜಕೀಯ ಚಳವಳಿಯ ಉಗಮವೂ ಬ್ರಿಟಿಶರ ಬುದ್ಧಿವಂತಿಕೆಯ ಕೈವಾಡದಲ್ಲಿಯೆ ಇದೆ. ಧೂರ್ತಬ್ರಿಟಿಶರ ಆಡಳಿತದಲ್ಲಿ ದೇಶವು ದಿನದಿನಕ್ಕೂ ನಪುಂಸಕವಾಗುತ್ತ ನಡೆದುದೂ ಸಂಪತ್ತಿನ ಸೂರೆಯಾಗಿ ಬಡತನವು ಹೆಚ್ಚಾಗುತ್ತಿದ್ದುದೂ ರಾಷ್ಟ್ರೀಯ ದೃಷ್ಟಿಯಿಂದ ವಿಚಾರ ಮಾಡುವ ಯಾರಿಗಾಗಲಿ ಸ್ಪಷ್ಟವಾಗಿ ಕಾಣುವಂತಿತ್ತು. ಆದರೆ ಇಂತಹರ ಸಂಖ್ಯೆ ಇಪ್ಪತ್ತನೆಯ ಶತಮಾನದ ಆರಂಭದವರೆಗೂ ಬಹಳೇ ಸ್ವಲ್ಪವಿತ್ತು. ತಮ್ಮ ಜಾತಿ, ತಮ್ಮ ಕುಲ, ತಮ್ಮ ಮನೆತನ ಹದಿನಾರಾಣೆ ರಾಜ (ರಾಜ್ಯ ಅಲ್ಲ) ನಿಷ್ಕಪಟ--ಬ್ರಿಟಿಶನಿಷ್ಠೆ ತಮ್ಮ ರಕ್ತಗತವಾಗಿದೆಯೆಂದು ಅಂದಿನ ಬಿಳಿಯ ಆಡಳಿತಗಾರರಿಗೆ ತಮ್ಮ ಕೃತ್ಯ ( ಅಕೃತ್ಯ ) ಗಳಿಂದ ಸಿದ್ಧಪಡಿಸಿ ತೋರಿಸುವುದಕ್ಕೆ ನಮ್ಮ ಜನಗಳಿಗೆ ನಾಚಿಕೆಯೂ ಇದ್ದಿಲ್ಲ ! ರಾಷ್ಟ್ರಹಿತವೆಂದರೇನೆಂಬ ಅರಿವು ಇದ್ದವರು ತೀರ ಕಡಿಮೆ. ತಮ್ಮ ವೈಯಕ್ತಿಕ ಸ್ವಾರ್ಥ, ಹೆಚ್ಚಾದರೆ ತಮ್ಮ ಜಾತಿಯ ಸ್ವಾರ್ಥ, ಸೌಖ್ಯವನ್ನು ಗಮನಿಸುವವರೇ ಎಲ್ಲೆಲ್ಲೂ ತುಂಬಿದ್ದರಿಂದ ಬ್ರಿಟಿಶರಿಗೆ ಆಗ ತಮ್ಮ ಸಾಮ್ರಾಜ್ಯಕ್ಕೆ ಇಲ್ಲಿ ಏನಾದರೂ ಗಂಡಾಂತರವು ಬಂದೀತೆಂಬ ಹೆದರಿಕೆಯೆ ಇದ್ದಿಲ್ಲ. ಆದರೂ ಕಳ್ಳನ ಜೀವ ಹುಳುಹುಳುಗೆ ಎಂದು ಗಾದೆಯುಂಟಲ್ಲ. ಬ್ರಿಟಿಶರಿಗೆ ಒಳಗೊಳಗೇ ಹೆದರಿಕೆ: ದೇಶವನ್ನು ದಾಸ್ಯದಲ್ಲಿ ಇಟ್ಟಿದ್ದಕ್ಕಾಗಿ, ಆರ್ಥಿಕ ಸುಲಿಗೆಯನ್ನು ನಡಸಿದುದಕ್ಕಾಗಿ ಭಾರತೀಯರಲ್ಲಿ ಹಲಕೆಲವರಾದವರೂ ತಲೆತಿರುಕರು ತಲೆಯೆತ್ತ ಬಹುದಲ್ಲ, ಎಂದು. ಈ ಕಾರಣದಿಂದಲೆ ಸುಶಿಕ್ಷಿತ ಭಾರತೀಯ ತರುಣರು ತಲೆತಿರುಕರಾಗಿ ಒಳಸಂಚಿನ ಕ್ರಾಂತಿಕಾರರು ಆಗುವುದು ಬೇಡ; ಘಟನಾಬದ್ಧ ಬಹಿರಂಗವಾದ ಚಳವಳಿಯ ಕಡೆಗೆ ಅವರ ಮನಸ್ಸು ಒಲಿಯಲಿ ಎಂದು ದೂರದರ್ಶಿಗಳಾದ ಕೆಲವು ಬ್ರಿಟಿಶರು ಇಲ್ಲಿ ರಾಜಕೀಯ ಸಂಘ, ಸಂಸ್ಥೆಗಳನ್ನು ಸ್ಥಾಪಿಸುವಲ್ಲಿ ಹಿಂದೀ ಜನರಿಗೆ ನೆರವಾಗುವುದಕ್ಕೆ ಮುಂದೆ ಬಂದರು. ಭಾರತದ ರಾಷ್ಟ್ರೀಯ ಮಹಾಸಭೆಯ ಸಂಸ್ಥಾಪಕರಲ್ಲಿ ಹ್ಯೂಮ ಮೊದಲಾದ ನಿವೃತ್ತ ಬ್ರಿಟಿಶ ಅಧಿಕಾರಿಗಳು ಇದ್ದುದೇ ಈ ಮಾತಿಗೆ ಸಾಕ್ಷಿ.

ಆಂಗ್ಲಭಾಷೆಯ ಅಧ್ಯಯನದಿಂದ ನಮ್ಮ ದೇಶದಲ್ಲಿ ರಾಷ್ಟ್ರೀಯ ಜಾಗೃತಿಯಾಯಿತೆಂದು ಹೇಳಲಾಗುತ್ತದೆ. ಈ ವಿಧಾನವು ಸಂಪೂರ್ಣ ಸುಳ್ಳಲ್ಲ.

ಆದರೂ ಬ್ರಿಟಿಶರಾಜಕಾರಣಿಗಳು ಕೂಲಂಕಷವಾಗಿ ವಿಚಾರ ವಿಮರ್ಶೆಗಳನ್ನು ಮಾಡದೆ ಈ ದೇಶದಲ್ಲಿ ಆಂಗ್ಲಭಾಷೆಯ ಶಿಕ್ಷಣವನ್ನು ಆರಂಭಿಸಿಲ್ಲ. ನಮ್ಮಲ್ಲಿ ಸ್ವದೇಶಾಭಿಮಾನವುಂಟಾಗುವುದು ಬ್ರಿಟಿಶರ ಇಲ್ಲಿಯ ತಮ್ಮ ಸಾಮ್ರಾಜ್ಯಕ್ಕೇ ವಿಘಾತಕವಲ್ಲವೆ? ಇಂಗ್ರೇಜಿ ಕಲಿಸಿ, ಸ್ವದೇಶಾಭಿಮಾನ ಬೆಳಿಸಿ ಸಾಮ್ರಾಜ್ಯ ವೃಕ್ಷಕ್ಕೆ ತಾವೇ ಕೊಡಲಿಯ ಏಟು ಹಾಕುವ ಕೃತ್ಯವು ಬ್ರಿಟಿಶರಂತಹ ಪಾರ ದರ್ಶಿ ವಿಚಾರಿಗಳಿಂದ ಆಗುವುದು ಸಾಧ್ಯವೆ? ನಮ್ಮಲ್ಲಿ ಇಂಗ್ರೇಜಿ ಶಿಕ್ಷಣ ವನ್ನು ಆರಂಭಿಸುವಲ್ಲಿ ಬೇರೊಂದೇ ಬ್ರಿಟಿಶರ ಉದ್ದೇಶವಿದ್ದಿತು.

ಮೊಗಲರ ಆಳಿಕೆಯು ಕೊನೆಗೊಂಡಿತು. ಬ್ರಿಟಿಶರು ಹಿಂದೂ ದೇಶದ ಚಕ್ರಾಧಿಪತ್ಯವನ್ನು ಸ್ವೀಕರಿಸಿದರು. ಆದರೆ ಅಖಿಲಭಾರತದ ಆಡಳಿತದ ಭಾಷೆಯು ಆವುದಿರಬೇಕೆಂಬ ಬಗೆಗೆ ಅವರು ಇನ್ನೂ ನಿಶ್ಚಿತಮತಿಗಳಾಗಿರಲಿಲ್ಲ. ಆಡಳಿತವನ್ನು ನಡಸಲು ಬೇಕಾಗುವ ಕಾರಕೂನರು, ಅಧಿಕಾರಿಗಳ—ಯಾವ ಭಾಷೆಯಲ್ಲಿ ರಾಯಸಗಳನ್ನು ಬರೆಯಬೇಕು ? ಈ ಜನಗಳಿಗೆ ಯಾವ ಭಾಷೆಯ ಮೂಲಕ ಶಿಕ್ಷಣವನ್ನು ಕೊಟ್ಟು ತಕ್ಕವರನ್ನಾಗಿ ಮಾಡಿಕೊಳ್ಳಬೇಕು? ಎಂಬೀ ಪ್ರಶ್ನೆಗಳು ಇಲ್ಲಿಯ ಆಗಿನ ಬ್ರಿಟಿಶ ಅಧಿಕಾರಿಗಳ ತಲೆತಿನ್ನಲಾರಂಭಿಸಿದುವು.

ಕ್ರಿ. ಶ. ೧೮೩೩ರಲ್ಲಿ ಲಾರ್ಡ ಉಯಿಲಿಯಂ ಬೆಂಟಿಂಕನು ಹಿಂದೂ ದೇಶದ ಗವ್ಹರ್ನರ ಜನರಲ್ಲನಾಗಿದ್ದಾಗ, ಆತನ ಕಾರ್ಯನಿರ್ವಾಹಕ ಮಂಡಲ ದಲ್ಲಿ ಮೆಕಾಲೆಯೆಂಬ ಮೇಧಾವಿಯು ಇದ್ದನು. ಈ ದೇಶದಲ್ಲಿ ಇಂಗ್ರೇಜಿ ಶಿಕ್ಷಣವನ್ನು ಆರಂಭಿಸಬೇಕೆಂದು ನಿರ್ಧರಿಸಿದವನು ಈತನೇ. ಈ ದೇಶೀ ಯರಿಗೆ ಇಂಗ್ರೇಜಿ ಕಲಿಸಬೇಕೆ? ಬೇಡವೆ? ಅದರಿಂದ ಯಾವ ಬಗೆಯ ಪರಿಣಾಮಗಳಾಗಬಹುದು? ಎಂಬ ಎಲ್ಲ ಸಂಗತಿಗಳನ್ನೂ ಈತನು ಎಷ್ಟೊಂದು ಕೂಲಂಕಷವಾಗಿ ಚರ್ಚಿಸಿದ್ದನೆಂಬುದು, ಮೆಕಾಲೆಯ ಆಗಿನ ಹಲವು ಕಾಗದ ಪತ್ರಗಳಿಂದ ಎಲ್ಲವೂ ಬೆಳಕಿಗೆ ಬಂದಿದೆ. ಲಾಲಾ ಹರದಯಾಳನೆಂಬ ಧೀಮಂತನಾದ ಕ್ರಾಂತಿವೀರನು Problems of Education ಎಂಬ ಪುಸ್ತಕದಲ್ಲಿ ಮೆಕಾಲೆಯ ಕೆಲವು ಪತ್ರವ್ಯವಹಾರವನ್ನು ಹೊರಗೆ ಹಾಕಿದ್ದಾನೆ.

ಅಂದು ಮೆಕಾಲೆಯ ಎದುರಿಗಿದ್ದ ತೊಡಕು ಇದು: ಹಿಂದುಸ್ತಾನದಲ್ಲಿ ಅಖಿಲಭಾರತೀಯ ಭಾಷೆಯಾಗಲು ಅರ್ಹತೆಯುಳ್ಳ ಭಾಷೆಗಳು ಎರಡು ಇದ್ದುವು. ಒಂದು ಸಂಸ್ಕೃತ. ಇನ್ನೊಂದು ಪರ್ಶಿಯನ್. ಒಂದು ಹಿಂದೂ

ಜನರ ಪವಿತ್ರಭಾಷೆ. ಇನ್ನೊಂದು ಮುಸಲ್ಮಾನರ ಶ್ರೇಷ್ಠಸಾಹಿತ್ಯದ ಭಾಷೆ. ಬ್ರಿಟಿಶರು ಆರಂಭದಲ್ಲಿ ಸಂಸ್ಕೃತ ಹಾಗೂ ಪರ್ಶಿಯನ್ ಭಾಷೆಗಳ ಮುಖಾಂತರ ಉಚ್ಚಶಿಕ್ಷಣಕೊಡುವ ವಿದ್ಯಾಲಯಗಳನ್ನೂ ಸ್ಥಾಪಿಸುವುದಕ್ಕೆ ಆರಂಭಿಸಿದ್ದರು. ಪುಣೆಯಲ್ಲಿ ಡೆಕ್ಕನ್ ಕಾಲೇಜಿನ ಮೊದಲು ಸಂಸ್ಕೃತ ಕಾಲೇಜನ್ನೆ ತೆರೆದರು.

ಆದರೆ ಮೆಕಾಲೆ ಸಾಹೇಬರಿಗೆ ಒಂದು ಹೆದರಿಕೆ: ಈ ಸಂಸ್ಕೃತ ಮತ್ತು ಪರ್ಶಿಯನ್ ಮೂಲಕ ಅಧ್ಯಯನದಿಂದ ಈ ದೇಶದ ಜನಗಳಲ್ಲಿ ತಮ್ಮ ಪೂರ್ವಜರು ಮತ್ತು ಅವರ ಸಂಸ್ಕೃತಿಯ ವಿಷಯಕ್ಕೆ ನಿರತಿಶಯವಾದ ಆದರ ಮತ್ತು ಅಭಿಮಾನಗಳು ಹೆಚ್ಚಿ ಪರಕೀಯರಾದ ಆಂಗ್ಲರ ಬಗೆಗೆ ತಿರಸ್ಕಾರ, ದ್ವೇಷವು ತಲೆದೋರುವುದು, ಧೂರ್ತರಾದ ಮೆಕಾಲೆ ಸಾಹೇಬರಿಗೆ, ನಿಶ್ಚಿತ ವೆಂದು ಮನವರಿಕೆಯಾಯಿತು. ಧಾರ್ಮಿಕ ಭಾವನೆಗಳು ಪ್ರಬಲವಾದಂತೆ ಅದರ ರಕ್ಷಣೆ, ಪೋಷಣೆಗಾಗಿ ಮನುಷ್ಯನೊಳಗಿನ ಉದ್ವೇಗ ಆವೇಶಗಳು ತೀವ್ರತರವಾಗುವುವು. ತನ್ನ ಮತ, ಧರ್ಮದ ಹೆಸರಿನಲ್ಲಿ ಆವೇಶಗೊಂಡ ಮನುಷ್ಯನು ಎಂತಹ ತ್ಯಾಗಕ್ಕೂ ಸಿದ್ಧನಾಗುವನು. ಅದಕ್ಕಾಗಿ ತನ್ನ ಪ್ರಾಣ ಗಳನ್ನು ನೀಡುವುದರಲ್ಲಿ ಧನ್ಯತೆಯನ್ನು ತಾಳುವನು. ತಮ್ಮ ಧರ್ಮ ಸಂಸ್ಕೃತಿ ಗಳ ಬಗೆಗೆ ತೀವ್ರತರವಾದ ಅಭಿಮಾನ ಆವೇಶಗಳು ಬೇರೂರಲು ನಿಶ್ಚಿತ ವಾಗಿಯೂ ಕಾರಣವಾಗುವ ಸಂಸ್ಕೃತ ಮತ್ತು ಪರ್ಶಿಯನ್ ಭಾಷೆಗಳ ಮೂಲಕ ಭಾರತೀಯರಿಗೆ ಶಿಕ್ಷಣ ಕೊಟ್ಟು, ನಾಳಿನ ಈ ಬಗೆಯ ಗಂಡಾಂತ ರಕ್ಕೆ ಇಂದೇ ಔತಣವನ್ನೀಯುವುದು ಜಾಣ್ಮೆಯೆ? ಎಂಬುದು ಒಂದು ಪ್ರಶ್ನೆ ಮೆಕಾಲೆಸಾಹೇಬರ ಎದುರು.

ಯಾವ ಜನವನ್ನು ಆಳಬೇಕಾಗಿದೆಯೊ ಅವರು ಹೃದಯಾಂತರಾಳ ಲ್ಲಿದ ತಮ್ಮನ್ನು ದ್ವೇಷಿಸುತ್ತಿರಬಾರದು. ಮನದಲ್ಲಿ ಸಂದೇಹ, ತಿರಸ್ಕಾರದ ಭಾವನೆಗಳು ಒಡಮೂಡಿದ ಜನರನ್ನು ಆಳುವುದು ವ್ಯರ್ಥ ಪರಿಶ್ರಮ; ಅದು ಇಬ್ಬರ ಹಾನಿಗೂ ಕಾರಣವೆಂಬುದು ಬ್ರಿಟಿಶ ರಾಜ್ಯತಂತ್ರಜ್ಞರ ಒಂದು ಮುಖ್ಯ ಸೂತ್ರ. ಆದಕಾರಣ ಬ್ರಿಟಿಶ ಜನ, ಅವರ ರೀತಿ, ನೀತಿ, ಧರ್ಮ, ಸಾಹಿತ್ಯ, ಸಂಸ್ಕೃತಿ, ಮೊದಲಾದವನ್ನು ಕುರಿತು ಈ ನಾಡಿಗರಲ್ಲಿ ಸಹಾನು- ಭೂತಿ, ಪ್ರೀತಿ, ಆದರವನ್ನುಂಟುಮಾಡದೆ ಈ ದೇಶವನ್ನಾಳುವುದು ದುಸ್ತರ.

ಹಿಂದುಸ್ತಾನದವರಲ್ಲಿ ಇಂಗ್ಲೆಂಡಿನ ಬಗೆಗೆ ಸದ್ಭಾವನೆಯು ತಲೆದೋರಲು ಹಿಂದೀಯರಿಗೆ ತಮ್ಮ ವಿಚಾರಗಳು ತಿಳಿಯುವುದು ಅವಶ್ಯಕವೆಂದು ಮೆಕಾಲೆ ಸಾಹೇಬರು ಮುಂಗಂಡು ನಿರ್ಧರಿಸಿದರು. ಇಂಗ್ರೇಜಿಯನ್ನು ಅಭ್ಯಾಸಮಾಡಿ ತಮ್ಮ ಸಾಹಿತ್ಯ-ಶಾಸ್ತ್ರಗಳನ್ನು ಅರಿತುಕೊಂಡಹಾಗೆ ಹಿಂದೀಯರಲ್ಲಿ ಆಂಗ್ಲರ ಉಚ್ಚಸಂಸ್ಕೃತಿಯ ಅರಿವು ಉಂಟಾಗುವುದು. ಆಂಗ್ಲರ ಶಾಸ್ತ್ರ ಸಾಹಿತ್ಯಗಳ ಅಧ್ಯಯನವು ಹೆಚ್ಚಿದಂತೆ ಇಲ್ಲಿಯವರಿಗೆ ತಮ್ಮ ಕುಂದುಕೊರತೆಗಳು ಚೆನ್ನಾಗಿ ಎದ್ದುಕಾಣುವುವು. ಅದರಿಂದ ತಮ್ಮ ದೇಶ, ಧರ್ಮ, ಸಂಸ್ಕೃತಿಗಳ ವಿಷಯಕ್ಕೆ ಸಹಜವಾಗಿ ಹುಟ್ಟಿನಿಂದ ಬರುವಂತಹ ಮೊದಲಿನ ದುರ್ದಮ್ಯವಾದ ಅಭಿಮಾನವು ಅದೆಷ್ಟೋ ಸಡಿಲುವುದು. ಆಂಗ್ಲಜನ ಅವರ ಸಂಸ್ಕೃತಿಗಳ ಅನುಕರಣದಲ್ಲಿ ಆಸ್ಥೆಯುಂಟಾಗುವುದು. ಹೀಗೆ ಅಂತರಾಳದಲ್ಲಿ ತಮ್ಮ ಬಗೆಗೆ ಸದ್ಭಾವನೆಯು ನೆಲಸಿರುವ ಜನರನ್ನು ಆಳುವುದು ಸುಲಭ. ಇಲ್ಲವಾದರೆ, ಸಾವಿರಾರು ಮೈಲು ದೂರದಿಂದ ಬಂದ ಸ್ವಲ್ಪ ಜನರು, ತಾವು ಅಸಂಖ್ಯಾತ ಬಹುಸಂಖ್ಯಾಕರಾದ ಈ ದೇಶೀಯರ ಮೇಲೆ ಶಾಸನ ನಡಸುವುದೇ ಸಾಧ್ಯವಿಲ್ಲವೆಂದು ಮೆಕಾಲೆಯು ಮನಗಂಡರು. ಇಂಗ್ರೇಜಿಯನ್ನೆ ಇಲ್ಲಿ ಕಲಿಸತಕ್ಕದ್ದೆಂದು ಗೊತ್ತುಪಡಿಸಿದರು.

ಆದರೂ ಇನ್ನೊಂದು ಬಗೆಯ ಅಂಜಿಕೆಯು ಅವರನ್ನು ಸೋಂಕದೆ ಇರಲಿಲ್ಲ. ಇಂಗ್ರೇಜಿ ಭಾಷೆಯ ಅಧ್ಯಯನದಿಂದ ಈ ಜನರಿಗೆ ಇಂಗ್ಲಂಡಿನ ರಾಜಕೀಯ ಸ್ವಾತಂತ್ರ್ಯದ ಇತಿಹಾಸವು ಗೊತ್ತಾಗುವುದು. ಪಾರ್ಲಮೆಂಟಿನ ಬೆಳವಣಿಗೆ, ಪ್ರಜಗಳು ರಾಜನಿಂದ ಅಧಿಕಾರಗಳನ್ನು ಕಿತ್ತುಕೊಂಡ ಬಗೆಗಳು ತಿಳಿಯುವುವು. ಗ್ರೀಕ್, ರೋಮನ್ನರ ಉಜ್ವಲವಾದ ಸ್ವತಂತ್ರ ವಿಚಾರಗಳು ಗೊತ್ತಾಗಿ ಇವರ ತಲೆಯಲ್ಲೂ ಆ ತೆರನಾದ ವಿಚಾರಗಳು ಸುಳಿಯಲಾರಂಭಿಸುವುವು. ಬ್ರಿಟಿಶ ಜನರಂತೆ ತಾವೂ ರಾಜನ ಏಕತಂತ್ರಾಧಿಕಾರವನ್ನು ವಿರೋಧಿಸಿ ಪ್ರಜಾಪ್ರಭುತ್ವವನ್ನು ಪಡೆಯಬೇಕೆಂಬ ಹಂಬಲವು ಇವರಲ್ಲಿ ತಲೆಯೆತ್ತುವುದು. ಇದು ಬ್ರಿಟಿಶರ ಇಲ್ಲಿಯ ಸಾಮ್ರಾಜ್ಯನಾಶಕ್ಕೆ ಕಾರಣವಾಗದೆ ಇರದು; ಆದುದರಿಂದ ಈ ಜನರಿಗೆ ಇಂಗ್ರೇಜಿ ವಿದ್ಯೆ ಕಲಿಯುವುದು ಯುಕ್ತವೆ? ಎಂಬ ಇನ್ನೊಂದು ವಿಚಾರವೂ ಮೆಕಾಲೆಯವರಿಗೆ ಹೊಳೆಯದೆ ಹೋಗಲಿಲ್ಲ.

ತಮಗೆ ರುಚಿಸುವ ಮಾತನ್ನಷ್ಟೆ ಗಮನಿಸುವುದು ಬ್ರಿಟಿಶರ ಸ್ವಭಾವ

ವಲ್ಲ. ರುಚಿಸದ ಮಾತನ್ನೂ ಎಣಿಕೆಗೆ ಹಿಡಿದು ತಮ್ಮ ಯೋಜನೆಗಳನ್ನು ಸಿದ್ಧಪಡಿಸುವ ಚತುರ ರಾಜಕಾರಣಿಗಳು ಅವರು. ಸತ್ಯದ ಪ್ರಿಯವಾದ ಸಿಹಿಯಾದ ಅಂಗವನ್ನಷ್ಟೇ ಪೂಜಿಸುವ ಜನ ರಸಿಕರೆಂದೆನಿಸಿದರೂ ಅವರಲ್ಲಿ ಬೇಗನೆ ಪುಕ್ಕು, ಹೇಡಿತನಗಳು ಮೆಲ್ಲನೆ ಸೇರಿಕೊಳ್ಳುವುವು. ಬ್ರಿಟಿಶರ ಮಾನಸಿಕ ಧೈರ್ಯ ಅಪೂರ್ವವಾದುದು. ವಾಸ್ತವ ಸತ್ಯದ ಅಪ್ರಿಯ ಕಟುವಾದ ಅಂಶವನ್ನು ಕಡೆಗಣಿಸದೆ ಅದನ್ನು ಮೊದಲು ಲೆಕ್ಕಿಸುವ ಎದೆಗಾರಿಕೆ ಅವರಲ್ಲಿದೆ. ಇದೊಂದು ಅಸಾಧಾರಣವಾದ ಶಕ್ತಿ. ಪ್ರಶಾಂತವಾದ ಮನಸು, ದೃಢವಾದ ಬುದ್ಧಿ, ಅದಿರದ ಎದೆಯವರೆ ಸತ್ಯದ ಈ ಅಂಶವನ್ನೂ ಲೆಕ್ಕಿಸಬಲ್ಲರು. ಮೆಕಾಲೆಯು ಅಂದು ಸತ್ಯದ ಈ ಅಂಶವನ್ನೂ ಎಣಿಕೆಗೆ ಹಿಡಿದು ಲೆಕ್ಕಮಾಡಿ ನಮ್ಮ ಶಿಕ್ಷಣ ಪದ್ಧತಿಯನ್ನು ಯೋಜಿಸಿದನು. ಆತನ ಧೂರ್ತದೂರದರ್ಶಿತ್ವದ ಅಂದಿನ ವಿಚಾರಗಳನ್ನು ಓದಿ ಈಗ ಯಾರಿಗಾಗಲಿ ಕೌತುಕ ಆಶ್ಚರ್ಯವೆನಿಸದೆ ಇರದು.

ಹುಟ್ಟಿದುದಕ್ಕೆ ಸಾವು ತಪ್ಪದು. ಹಿಂದೂ ದೇಶದಲ್ಲಿ ಸ್ಥಾಪಿತವಾದ ತಮ್ಮ ಸಾಮ್ರಾಜ್ಯಕ್ಕೂ ಒಂದು ದಿನ ಅಳಿವು ತಪ್ಪಿದ್ದಲ್ಲ. ಆದರೆ ಆ ಕೊನೆಯ ದಿನವನ್ನು ಆದಷ್ಟು ಮುಂದೂಡುತ್ತ ಹೋಗುವುದರಲ್ಲಿಯೇ ಕೌಶಲವಿದೆ. ಬ್ರಿಟಿಶ ಸಾಮ್ರಾಜ್ಯವು ಇಲ್ಲಿ ಅಮರವಾಗಿ ಉಳಿಯುವುದೆಂಬ ಭ್ರಾಂತಿಯಲ್ಲಿ ಇದ್ದುಕೊಂಡು ಆಡಳಿತದ ಯೋಜನೆಗಳನ್ನು ಮಾಡುವುದು ಮೂರ್ಖತನದ ಪರಮಾವಧಿ. ಅಳಿಗಾಲವನ್ನು ತಪ್ಪಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಆದರೆ ಬರಲಿರುವ ಆ ಅಳಿಗಾಲವು ಸಂಸ್ಕೃತ, ಪರ್ಶಿಯನ್‌ಗಳ ಅಧ್ಯಯನದಿಂದ ಉಂಟಾಗುವ ಮನೋವೃತ್ತಿಯಿಂದ ಬೇಗ ಬಂದೀತೆ? ಅಥವಾ ಇಂಗ್ರೇಜಿ ಕಲಿಸುವುದರಿಂದ ಆಗುವ ಪರಿಣಾಮದಿಂದಲೆ ತಮ್ಮ ಸಾಮ್ರಾಜ್ಯದ ಅಂತ್ಯವು ಬೇಗ ಸಮೀಪಿಸಬಹುದೆ? ಇವೆರಡರಲ್ಲಿ ಮೊದಲನೆಯದೆ ಹೆಚ್ಚು ಭಯಾವಹವೂ ವಿನಾಶಕಾರಿಯೂ ಆಗಿದೆಯೆಂದು ಮೆಕಾಲೆಯು ನಿರ್ಧರಿಸಿದನು.

ಮೆಕಾಲೆಯ ಯೋಜನೆಯಂತೆ ಹಿಂದೂ ದೇಶದಲ್ಲಿ ಇಂಗ್ರೇಜಿ ಶಿಕ್ಷಣ ಕ್ರಮವು ಆರಂಭವಾಯಿತು. ಇಂಗ್ರೇಜಿ ಭಾಷೆಯ ಪ್ರಸಾರದಿಂದ ಬ್ರಿಟಿಶರ ಆಡಳಿತಕ್ಕೆ ಧಾರ್ಮಿಕ ಕಾರಣಕ್ಕಾಗಿ ರಾಜ್ಯಕ್ರಾಂತಿಯಾಗುವ ಭೀತಿಯೇ ದೂರವಾಯಿತು. ಆದರೂ ತಮ್ಮ ರಾಜ್ಯಗಳನ್ನು ಕಳೆದುಕೊಂಡು ಅಸಂತುಷ್ಟರಾದ

ಹಲವು ರಾಜರು ೧೮೫೭ರಲ್ಲಿ ಬ್ರಿಟಿಶರ ವಿರುದ್ಧ ಯುದ್ಧವನ್ನು ಹೂಡಿದರು. ಬ್ರಿಟಿಶರ ಹಲವು ಕೃತಿಗಳಿಂದ—ಅವರ ಆಡಳಿತದಿಂದ ಧರ್ಮದ ಮೇಲೆ ಗಂಡಾಂತರವು ಒದಗಿದೆ ಎಂಬ—ಸಂದೇಹವು ಆವರಿಸಿದ ಸೈನಿಕರನ್ನೂ, ಪೂರ್ವ ಪರಂಪರಾಭಿಮಾನಿಗಳನ್ನೂ ಈ ರಾಜರು ತಮ್ಮ ಕಾರ್ಯ ಸಾಧಿಸಲು ಉಪ ಯೋಗಿಸಿಕೊಂಡರು. ಧಾರ್ಮಿಕ ಆವೇಶದಿಂದ ವೈಮರೆತ ಜನವು, ತಮ್ಮ ಆಡಳಿತದ ವಿರುದ್ಧವಾಗಿ ಬಂಡು ಏಳಬಾರದೆಂದು ಇಂಗ್ರೇಜಿ ಶಿಕ್ಷಣವನ್ನು ಪ್ರಾರಂಭಿಸುವಲ್ಲಿ ಮೆಕಾಲೆಯು ದೂರದರ್ಶಿತ್ವವು ಚೆನ್ನಾಗಿಯೆ ವ್ಯಕ್ತವಾಗುತ್ತದೆ. ಮೆಕಾಲೆಯು ಆರಂಭಿಸಿದ ಶಿಕ್ಷಣ ಪದ್ಧತಿಯ ಪರಿಣಾಮಗಳು ಕಾಣಿಸಿಕೊಳ್ಳು ವುದರೊಳಗಾಗಿಯೆ ೧೮೫೭ರ ಯುದ್ಧವು ಆಯಿತು. ಬ್ರಿಟಿಶರು ಇನ್ನಿಷ್ಟು ಜಾಗೃತರಾಗಿ, ಈ ದೇಶದ ಧರ್ಮ, ಮತಗಳಿಗೆ ತಾವು ಯಾವ ಬಗೆಯಿಂದಲೂ ವಿರೋಧಿಸುವುದಿಲ್ಲವೆಂದು, ಜನರಿಗೆ ರಾಣಿಯ ಜಾಹೀರನಾಮೆಯ ಮೂಲಕ ಆಶ್ವಾಸನವನ್ನಿತ್ತರು. ಬ್ರಿಟಿಶರು ಹಿಂದೂ-ಮುಸಲ್ಮಾನ, ಬ್ರಾಹ್ಮಣ-ಬ್ರಾಹ್ಮ ಣೇತರ, ಸ್ಪೃಶ್ಯ-ಅಸ್ಪೃಶ್ಯ ಮೊದಲಾದ ಜಾತಿಭೇದಗಳ ಸಂರಕ್ಷಕರಾಗಿ ದಕ್ಷತೆ ಯಿಂದ ತಮ್ಮ ಕರ್ತವ್ಯವನ್ನು ಪರಿಪಾಲಿಸುತ್ತಲಿದ್ದ ನೋಟವೆ ಇನ್ನು ೧೮೫೭ರ ನಂತರದ ಇತಿಹಾಸದಲ್ಲಿ ಕಣ್ಣಿಗೆ ಬೀಳುತ್ತದೆ. ಇದಕ್ಕೆ ಪ್ರತಿಯಾಗಿ ಆಧುನಿಕ ವಿದ್ಯಾವಿಭೂಷಿತರಾದ ರಾಷ್ಟ್ರೀಯ ವೃತ್ತಿಯ ಮುಂದಾಳುಗಳಲ್ಲಿ ನಮ್ಮೊಳಗಿನ ಜಾತಿಭೇದಗಳನ್ನು ಇಲ್ಲದಂತೆ ಮಾಡಬೇಕೆಂಬ ಹಂಬಲವು ದಿವಸದಿನಕ್ಕೂ ಬಲ ಗೊಳ್ಳುತ್ತಿದ್ದುದು ಗೋಚರವಾಗುತ್ತದೆ!

ಇಂಗ್ರೇಜಿ ವಿದ್ಯೆಯಲ್ಲಿ ಸ್ವಾತಂತ್ರ್ಯಪ್ರೇಮದ ಬೀಜಮಂತ್ರವಿದೆ. ಇಂಗ್ರೇಜಿ ಕಲಿಸುವುದೂ ಬ್ರಿಟಿಶ ಸಾಮ್ರಾಜ್ಯಕ್ಕೆ ಮರಣವನ್ನು ಕೋರುವುದೂ ಒಂದೇ. ಆದುದರಿಂದ ಈ ಜನರಿಗೆ ಇಂಗ್ರೇಜಿ ಕಲಿಸುವುದೇ ಬೇಡ, ಎಂಬ ವಿಚಾರದ ಕೆಲವು ಬ್ರಿಟಿಶರೂ ಇದ್ದರು. ಮೆಕಾಲೆಯು ಅವರ ವಿರೋಧಕ್ಕೂ ಉತ್ತರ ಕೊಟ್ಟನು. ಹಿಂದೀಯರು ಇಂಗ್ರೇಜಿ ಕಲಿತರೂ ಅವರಲ್ಲಿ ರಾಷ್ಟ್ರಾಭಿ ಮಾನವು ಜಾಗೃತವಾಗದಂತೆ, ಜಾಗೃತವಾದರೂ ಅದು ತೀರ ಸೌಮ್ಯಸ್ವರೂಪ ದಲ್ಲಿರುವಂತೆ ಶಿಕ್ಷಣ ಪದ್ಧತಿಯಲ್ಲಿಯೆ ಹಂಚಿಕೆಗಳನ್ನು ಮಾಡಬೇಕೆ ಹೊರತು, ಇಂಗ್ರೇಜಿಯನ್ನೇ ಕಲಿಸದೆ ಇರುವುದು ಬ್ರಿಟಿಶರ ಹಿತದ ದೃಷ್ಟಿಯಿಂದ ಜಾಣತನದ್ದಾಗಲಾರದೆಂದು ಮೆಕಾಲೆಯ ಸ್ಪಷ್ಟವಾದ ಅಭಿಪ್ರಾಯವಾಗಿತ್ತು.

ಸಮಾಜ ಸುಧಾರಣೆಯ ಚಳವಳಿಯು ಈಗಲೇ ನಡೆಯಬೇಕೆಂದು ಪ್ರತಿಪಾದಿಸುವ ಒಂದು ಪಕ್ಷವು ಸುಮಾರಾಗಿ ರಾಷ್ಟ್ರೀಯ ಸಭೆಯಷ್ಟೇ ಹಳೆಯದಾಗಿದೆ. ರಾಜಕೀಯ ಸುಧಾರಣೆಗಳೇ ಮೊದಲು ಅವಶ್ಯಕ. 'ರಾಜಾ ಕಾಲಸ್ಯ ಕಾರಣಂ' ರಾಜಕೀಯ ಪರಿವರ್ತನಗಳಾದೊಡನೆ ಸಾಮಾಜಿಕ ಬದಲಾವಣೆಗಳು ತನ್ನಷ್ಟಕ್ಕೆ ತಾನೇ ಆಗುವುವು ಎಂಬುದು ಇನ್ನೊಂದು ಪಕ್ಷದ ವಿಚಾರ. ಈ ವಾಗ್ವಾದವು ಆಗ ಕೆಲಕಾಲ ಒಂದು ದೊಡ್ಡ ರಗಳೆಗೇ ಇಟ್ಟಿತು. ಮಹಾರಾಷ್ಟ್ರದಲ್ಲಿ ಆಗರಕರ ಮತ್ತು ತಿಲಕರು ಒಂದೊಂದು ಪಕ್ಷದ ಪುರಸ್ಕರ್ತರಾಗಿದ್ದರು. ಇವೆರಡರಲ್ಲಿ ರಾಜಕೀಯ ಪಕ್ಷಕ್ಕೇ ಜನರು ಹೆಚ್ಚು ಬೆಂಬಲ ಕೊಟ್ಟರು.

• ಇದಕ್ಕೆ ಕೆಲವೊಂದು ಕಾರಣಗಳುಂಟು. ಸಾಮಾಜಿಕ ಚಳವಳಿಗೆ ಮೊದಲನೆಯ ಆತಂಕ, ಜನಸಾಮಾನ್ಯರ ಪರಂಪರಾಪ್ರಿಯತೆ, ಧಾರ್ಮಿಕ ಅಂಧಶ್ರದ್ಧೆ; ಇದಲ್ಲದೆ ಅಂದಿನ ಇನ್ನೊಂದು ಮಹತ್ವದ ಕಾರಣವೆಂದರೆ ಆಗಿನ ಸಮಾಜಸುಧಾರಕರೆಂದು ಮುಂದೆ ಬಂದ ಹಲವರ ನಡೆನುಡಿಗಳು. ಈ ಜನರಲ್ಲಿ ತಮ್ಮ ನಾಡು, ನುಡಿ, ಧರ್ಮದ ಬಗೆಗೆ ಸದಭಿಮಾನವೆ ಇರಲಿಲ್ಲ. ಎಲ್ಲವನ್ನೂ ಹೀಯಾಳಿಸುತ್ತಿದ್ದರು. ಆದುದರಿಂದ ಇಂತಹರ ಮಾತಿಗೆ ಸಮಾಜದಲ್ಲಿ ಬೆಲೆ ಬರಲಿಲ್ಲ. ಇವರು ತಮ್ಮ ಸ್ವೈರವರ್ತನ, ಜಿಹ್ವಾಲೌಲ್ಯಕ್ಕಾಗಿ ಹಿಂದಿನ ಸಾಮಾಜಿಕ ಎಲ್ಲ ವಿಧಿ ನಿಷೇಧಗಳನ್ನೂ ಬೇಡವೆಂದು ಪ್ರತಿಪಾದಿಸುತ್ತಾರೆಂಬ ಜನಸಾಮಾನ್ಯರ ಆರೋಪಕ್ಕೆ ಇಂಬು ದೊರೆವಂತೆ ಅಂದಿನ ಎಷ್ಟೋ ಸಮಾಜಸುಧಾರಕರ ನಡತೆಯಿದ್ದಿತು.

ಆಗ ಸಮಾಜಸುಧಾರಕರೆಂದು ಪ್ರಾಮುಖ್ಯವಾಗಿ ಮುಂದೆ ಬಂದ ಮಹನೀಯರು ರಾಜಕೀಯ ರಂಗದಲ್ಲಿ ತಲೆಮರೆಯಿಸಿಕೊಂಡವರೂ ಪುಕ್ಕರೂ ಅಥವಾ ಮಂದಪಕ್ಷದವರೂ (ಎಂದರೆ ಬ್ರಿಟಿಶ ಆಡಳಿತಗಾರರೊಡನೆ ಮೆತ್ತಗೆ ಇದ್ದು ಅವರ ಅನುಕೂಲವರ್ತಿಗಳಾಗಿ ನಡೆವವರು) ಆಗಿದ್ದರು ಆದಕಾರಣ ಜನರಲ್ಲಿ ಸುಧಾರಕರ ವಿಷಯಕ್ಕೆ ವ್ಯಕ್ತಿಶಃ ಸಾಕಷ್ಟು ಆದರವು ಇದ್ದಿಲ್ಲ. ಅದರಿಂದ ಅವರು ಹೇಳುವ, ಸುಧಾರಣೆ ಮಾಡಬೇಕೆಂಬ ಉಪದೇಶವೆಲ್ಲವೂ ಬೋರ್ಗಲ್ಲ ಮೇಲೆ ಮಳೆಗರೆದಂತೆ ಆಯಿತು.

ಅಲ್ಲದೆ ಯಾವುದೊಂದು ಮಾತಿನ ಅವಶ್ಯಕತೆಯು ಅಥವಾ ಮಹತ್ವವು ತಿಳಿಯದೆ ಜನರು ಅದನ್ನು ಮಾಡಲು ಎಂದೂ ಮುಂದೆ ಬರಲಾರರು.

ಇಂಗ್ರೇಜಿ ಓದಿದ ಮೊದಲನೆಯ ತಲೆಮಾರಿನ ಹಿಂದೀಯರಲ್ಲಿ ತಮ್ಮ ದೇಶ, ಧರ್ಮಗಳ ವಿಷಯಕ್ಕೆ ಸಾಮಾನ್ಯವಾಗಿ ಅಸಡ್ಡೆ, ಅನಾದರವೆ ಹೆಚ್ಚಾಗುತ್ತಿದ್ದುದು ಕಂಡುಬರುತ್ತದೆ. ಇಂಗ್ರೇಜಿ ಎ, ಬಿ, ಸಿ, ಯೊಡನೆ ಬೂಟು, ಪಾಟ್ಲೋನು ಬಂತೇ. ಬೂಟು ಪಾಟ್ಲೋನು ಧರಿಸಿ ದೇಶಭಾಷೆ ಮಾತನಾಡುವುದಕ್ಕೆ ನಾಚಿಕೆಯೆನಿಸಲಾರಂಭಿಸಿತು. ಬ್ರಿಟಿಶ ಸಾಹೇಬರನ್ನು ಹೋಲುವಂತೆ ಉಡುಪು ತೊಡಪು ಮಾಡುವ ಹುಮ್ಮಸ ಹೆಚ್ಚಿತು. ಎಷ್ಟೇ ಚೆನ್ನಾಗಿ ಸಾಹೇಬರಂತೆ ವೇಷ ಕಟ್ಟಿದರೂ, ಗಿಳಿಯ ಹಾಗೆ ಇಂಗ್ರೇಜಿ ಒಡನುಡಿದರೂ ಪೂರ್ಣ ಸಾಹೇಬರಂತಾಗಲು ಮೈಬಣ್ಣವೊಂದು ಅಡ್ಡ ಬರುವುದಲ್ಲ, ಎಂದು ಮಮ್ಮಲನೆ ಮರುಗಿ ತಮ್ಮ ಮೈಬಣ್ಣಕ್ಕಾಗಿ ಮಮ್ಮಲನೆ ಮಿಡುಕಾಡಿದ ಪಿಳ್ಳೆಗಳೂ ಇದ್ದಾರೆ. ಅನೇಕ ಸುಶಿಕ್ಷಿತರೆನಿಸಿದ ಜನಗಳು ಅಂದು ಕ್ರಿಸ್ತಿಮತಕ್ಕೆ ಸೇರಿ 'ಹಿಂದೂ' ಎಂಬ ತಮ್ಮ ಕಲಂಕವನ್ನು ತೊಳೆದುಕೊಳ್ಳಲು ಆತುರಪಟ್ಟರು. ಅಡಿಯಿಂದ ಮುಡಿಯ ವರೆಗೆ, ಒಳಹೊರಗೆಲ್ಲ ಸಾಹೇಬರಾಗುವ ಅರ್ಹತೆಯುಂಟಾಗಲೆಂದು ಹಸುಳೆಗಳನ್ನೆ ಇಂಗ್ಲೆಂಡಿಗೆ ಅಟ್ಟಿದ ಮಹನೀಯರುಂಟು. ತಮ್ಮ ಮಕ್ಕಳು ಹಿಂದುಸ್ತಾನದಲ್ಲಿ ಹುಟ್ಟುವುದು ಬೇಡ; ವಿಲಾಯತಿಯಲ್ಲಿ, ಕೊನೆಗೆ ಕಡಲಲ್ಲಿ ಹಡಗದ ಮೇಲಾದರೂ ಅಡ್ಡಿಯಿಲ್ಲವೆಂದು ಹೆರಲು ತಮ್ಮ ಹೆಂಡಂದಿರನ್ನೂ ಅತ್ತ ಕಳುಹಿದ ಗಂಡಂದಿರೂ ಆದರು !

ಆದರೆ ಇದರೊಡನೆ, ಮೆಲ್ಲನೆ ದೇಶಾಭಿಮಾನವೂ ಸ್ವಲ್ಪವುಟ್ಟಿಗೆ ಅಲ್ಲಿ ಇಲ್ಲಿ ಒಡಮೂಡಲಾರಂಭಿಸಿದುದರ ಸಂದೇಹವೂ ಬ್ರಿಟಿಶರಿಗೆ ಬರಲಾರಂಭಿಸಿತು. ಮೆಕಾಲೆ ಇಂಗ್ರೇಜಿ ವಿದ್ಯೆ ಕಲಿಸುವುದಕ್ಕಾರಂಭಿಸಿ ಕೆಲಸವನ್ನು ಹದಗೆಡಿಸಿದನೆಂಬ ಟೀಕೆಯು ಕೇಳಬರಹತ್ತಿತು. ಈ ಸಂಬಂಧದಲ್ಲಿ ಬ್ರಿಟಿಶರೊಳಗೆ ಗುಪ್ತವಾದ ಪರ್ಯಾಲೋಚನೆಗಳು ನಡೆದುವು; ಮೆಕಾಲೆಯು ಮಾಡಿದ್ದು ಸರಿಯಾದುದೇ ಆಗಿದೆಯೆಂದು ಕೊನೆಗೆ ನಿರ್ಣಯವಾಯಿತು. ಹಿಂದೀ ಜನರಲ್ಲಿ ಅಲ್ಪ ಸ್ವಲ್ಪ ದೇಶಾಭಿಮಾನದ ಗಾಳಿಯು ಸುಳಿಯುತ್ತಿದ್ದರೆ ಅದು ಕೇವಲ ಇಂಗ್ರೇಜಿ ವಿದ್ಯೆಯಿಂದ ಆದ ಪರಿಣಾಮದಿಂದಲೇ ಎಂದು ಗ್ರಹಿಸುವುದರಲ್ಲಿ ಹುರುಳಿಲ್ಲ. ಹಿಂದುಸ್ತಾನದ ಇತಿಹಾಸವೂ ಓಜಸ್ವಿಯಾಗಿದೆ; ತೇಜಸ್ವಿಯಾಗಿದೆ. ಅದನ್ನು ಒಂದು ವಿಶಿಷ್ಟ ಪಠ್ಯಪುಸ್ತಕಗಳ ಮುಖಾಂತರವೆ ತೀರ ಸಪ್ಪಗೆ ಮಾಡಿ ಕಲಿಸುವ ಏರ್ಪಾಟ ಮಾಡಿದೆ. ಇಂಗ್ರೇಜಿ ವಿದ್ಯೆಯನ್ನು ಕಲಿಸದೆ

ಇದ್ದರೆ ಇದಕ್ಕೂ ವಿಪರೀತ ಪರಿಣಾಮಗಳು ಆಗುತ್ತಿದ್ದುವು. ಈಗ ಆದುದು ಅನಿವಾರ್ಯ. ಈ ಅನಿವಾರ್ಯವಾದ ಕನಿಷ್ಟ ಪರಿಣಾಮಗಳೂ ಅನಿಷ್ಟವಾಗಿ ಪರಿಣಮಿಸದಂತೆ ಕಾಲಕಾಲಕ್ಕೆ ಏನಾದರೂ ಯೋಜನೆಗಳನ್ನು ಕೈಕೊಳ್ಳುತ್ತ ಹೋಗುವುದೊಂದೇ ಹಾದಿ, ಎಂಬ ತೀರ್ಪು ಆಯಿತು.

ಇಂಗ್ರೇಜಿ ತೀರ ನಿಲ್ಲಿಸಿಯೆ ಬಿಟ್ಟಿದ್ದರೆ ತಮ್ಮ ಹಾಗೂ ಹಿಂದೀಯರ ನಡುವಿನ ಬಿಚ್ಚುಮನಸಿನ ಮಾತುಕತೆಗೆ ಬ್ರಿಟಿಶರಿಗೆ ತಮ್ಮದಲ್ಲದ ಬೇರೊಂದು ಭಾಷೆಯನ್ನು ಬಳಸುವ ಹೊತ್ತು ಬರುತ್ತಿತ್ತು. ಇದು ಬ್ರಿಟಿಶರಿಗೇ ತೊಂದರೆಗೆ ಕಾರಣ. ಅಲ್ಲದೆ ಮುಖ್ಯವಾಗಿ ಸಂಸ್ಕೃತ ಮತ್ತು ಪರ್ಶಿಯನ್‌ವನ್ನೇ ಅಧ್ಯಯನ ಮಾಡಿದವರು ಏಕಾಂಗಿಯಾದ ಧಾರ್ಮಿಕ ಅತಿವಾದಿಗಳಾಗುವ ಸಂಭವವಿದ್ದು, ಅಂತಹ ತಲೆತಿರುಕ ಧರ್ಮಾಂಧರು ದೇಶದಲ್ಲಿ ಹೆಚ್ಚಾದರೆ ಪರಿಸ್ಥಿತಿಯು ಕೈಮೀರುವುದೆಂದು ಬ್ರಿಟಿಶರು ಚೆನ್ನಾಗಿ ಅರಿತಿದ್ದರು. ಹಿಂದೀಯರು ಸಂಸ್ಕೃತ, ಪರ್ಶಿಯನ್ ಅಥವಾ ಯಾವುದಾದರೊಂದು ದೇಶಭಾಷೆಯ ಮೂಲಕವಾಗಿಯೆ ತಮ್ಮ ವಿಚಾರಗಳನ್ನೆಲ್ಲ ಮುಖ್ಯವಾಗಿ ವ್ಯಕ್ತಪಡಿಸಲಾರಂಭಿಸಿದರೆ ಇಂಗ್ರೇಜಿ ಯಲ್ಲಿ ಭಾಷಾಂತರವಾಗುವ ವರೆಗೆ ಬ್ರಿಟಿಶರಿಗೆ ಅದರ ಗಂಧವೂ ಹತ್ತುವಂತಿಲ್ಲ. ದೇಶದೊಳಗಿನ ವಿಚಾರದ ದಿಕ್ಕು ತಿಳಿಯದೆ ಆಡಳಿತಗಾರರಿಗೆ ಅದನ್ನು ಹಿಡಿತ ದಲ್ಲಿ ಇಟ್ಟುಕೊಳ್ಳಲು, ಅಥವಾ ಪ್ರತಿ ಉಪಾಯಗಳನ್ನು ಯೋಚಿಸಲು ಸಾಧ್ಯವಿಲ್ಲ. ಆದುದರಿಂದ ಹಿಂದೀಯರು ಇಂಗ್ರೇಜಿಯ ಮುಖಾಂತರವಾಗಿಯೆ ತಮ್ಮ ಅಂತರಂಗವನ್ನು ವ್ಯಕ್ತಪಡಿಸುವಂತೆ ಮಾಡಿದರೆ ಅವರ ಹೃದಯಾಂತ ರಾಳದಲ್ಲಿ ಏನು ನಡೆದಿದೆಯೆಂಬುದನ್ನು ತಾವು ಅರಿತುಕೊಳ್ಳಲು ಸುಲಭವಾಗು ವುದೆಂದು ಬ್ರಿಟಿಶರು ಮನಗಂಡರು. ಇಂಗ್ರೇಜಿಯನ್ನು ಬಿಟ್ಟರೆ ತಮ್ಮ ಹೃದ್ಗತವನ್ನು ವ್ಯಕ್ತಪಡಿಸುವುದೇ ತಮಗೆ ಅಸಾಧ್ಯವೆನ್ನುವ ಪರಿಸ್ಥಿತಿಯು ಬ್ರಿಟಿಶರ ಶಿಕ್ಷಣದಿಂದ ಇಂದು ಉಂಟಾಗಿದೆ!

ದೇಶದೊಳಗಿನ ಸಾಮಾಜಿಕ ರಾಜಕೀಯ ಚಳವಳಿಗಳಲ್ಲಿ ಆಡಳಿತಗಾರ ರಾದ ಬ್ರಿಟಿಶರು ತಾವು ಪ್ರತ್ಯಕ್ಷವಾಗಿ ಕೈಹಾಕದಿದ್ದರೂ ಅವನ್ನು ವಿಶಿಷ್ಟ ರೀತಿಯಲ್ಲಿ ರೂಪಿಸುವುದರಲ್ಲಿ ಅವರು ಬಹಳ ದಕ್ಷತೆಯನ್ನು ವಹಿಸಿದರು. ಜನರು ತಮ್ಮ ರಾಜಕೀಯ ಆಕಾಂಕ್ಷೆಗಳನ್ನು ಬಹಿರಂಗವಾಗಿ ವ್ಯಕ್ತಪಡಿಸಲು ರಾಷ್ಟ್ರೀಯ ಮಹಾಸಭೆಯ ಸಾಧನವನ್ನು ಕಲ್ಪಿಸಿಕೊಟ್ಟರು. ತಮ್ಮ ಆಡಳಿತದ

ವಿಷಯಕ್ಕೆ ಸುಶಿಕ್ಷಿತ ಹಿಂದೀಯರಲ್ಲಿ ಯಾವ ಬಗೆಯ ಭಾವನೆಗಳು ಪುಟ
ಗೊಳ್ಳುತ್ತಲಿವೆಯೆಂಬುದನ್ನು ಅರಿತುಕೊಳ್ಳಲು ಬ್ರಿಟಿಶರಿಗೆ ಹಿಂದೀಯರ
ಭಾವನಾ-ಮಾಪಕ ಯಂತ್ರವೆ ಕೈಗೆ ದೊರೆತಂತಾಯಿತು. ವರ್ಷಕ್ಕೊಂದು
ಬಾರಿ ಸೇರಿ ರಾಷ್ಟ್ರೀಯ ಸಭೆಯು ತನ್ನ ದುಃಖಗಳನ್ನು ಬ್ರಿಟಿಶ ಆಡಳಿತಗಾರರ
ಎದುರು ತೋಡಿಕೊಳ್ಳುವ ವಾಡಿಕೆಯು ನಿರ್ಮಾಣವಾಯಿತು.

ಆಡಳಿತದ ಕೇಂದ್ರಸ್ಥಾನಗಳಲ್ಲಿ ಒಬ್ಬ ಹಿಂದೀಯನನ್ನೂ ತಕ್ಕೊಳ್ಳ
ಕೂಡದೆಂದು ಬ್ರಿಟಿಶ ಸಾಮ್ರಾಜ್ಯವಾದಿಗಳ ಆತ್ಯಂತಿಕ ಹಟ. ಆದರೆ ಲಾರ್ಡ
ಕ್ಯಾನಿಂಗ್, ಲಾರ್ಡ ರಿಪನ್‌ರಂತಹ ಕೆಲವು ಸಜ್ಜನ ಹೃದಯದ ಆಡಳಿತಗಾರ
ರಿಗೆ ಇದು ತೀರ ಅನ್ಯಾಯವೆನಿಸಿ ಭಾರತೀಯರೊಡನೆ ಅವರು ಸ್ವಲ್ಪ ಒಳ್ಳಿದ
ರಾಗಿ ನಡೆದುಕೊಂಡೊಡನೆ ಆಂಗ್ಲರು ಅವರ ವಿರುದ್ಧ ಹುಯಿಲೆಬ್ಬಿಸಿ ಅವರನ್ನು
ಅಧಿಕಾರದಿಂದ ತಳ್ಳಲು ಹವಣಿಸಿದರು. ಬ್ರಿಟಿಶ ಯುವಕರಿಗೆ ಆಗದ ತೀರ
ಕ್ಷುಲ್ಲಕ ನೌಕರಿಗಳನ್ನಷ್ಟು ಹಿಂದೀಯರಿಗೆ ಅನಿವಾರ್ಯವಾಗಿ ಕೊಡುತ್ತಿದ್ದರು.
ಹಿಂದೀ ಕಲೆಕ್ಟರರು ಸುಮಾರಾಗಿ ೧೯೧೪ರ ಮುಂದೆಯೇ. ಮೊದಲನೆಯ
ಮಹಾಯುದ್ಧಕ್ಕಾಗಿ ಆಂಗ್ಲರು ವಿಲಾಯತಿಗೆ ಹೋಗಬೇಕಾದುದರಿಂದ
ಎಷ್ಟೋ ಮಹತ್ವದ ಸ್ಥಳಗಳಿಗೆ ಹಿಂದೀಯರನ್ನು ನೇಮಿಸದೆ ಗತಿಯಿರಲಿಲ್ಲ.
ರಾಷ್ಟ್ರೀಯ ಸಭೆಯು ೧೮೮೫ರಿಂದ ಕಂಠಶೋಷ ಮಾಡಿಕೊಂಡರೂ ಬ್ರಿಟಿಶರು
ಅದನ್ನು ವಂಚಿಸುವ ಹಲವು ಹಂಚಿಕೆಗಳನ್ನು ಹೂಡಿದರು. ಆಂಗ್ಲೋ
ಇಂಡಿಯನ್, ಹಿಂದೀ ಕ್ರಿಶ್ಚಿಯನ್ ವರ್ಗಗಳನ್ನು ನಿರ್ಮಾಣ ಮಾಡಿ
ಅವರನ್ನು ತಮ್ಮ ಹತ್ತಿರದವರಂತೆ ನಡಸಿಕೊಂಡರು. ನವಕರಿಯ ಆಮಿಷ
ಕ್ಕಾಗಿ, ವರಿಷ್ಠ ಅಧಿಕಾರಿಗಳಾದ ಬ್ರಿಟಿಶರ ಕೃಪಾಪ್ರಸಾದವನ್ನು ಸಂಪಾದಿಸು
ವುದಕ್ಕಾಗಿ ಕ್ರಿಸ್ತಿಗಳಾದ ಸುಶಿಕ್ಷಿತ ಹಿಂದುಗಳುಂಟು. ಅಲ್ಪಸ್ವಲ್ಪ ದೇಶಾಭಿ
ಮಾನದ ಗಾಳಿ ಸೇರಿ ಕಾಂಗ್ರೆಸ್ಸಿನಲ್ಲಿ ಹೊಕ್ಕು ಬ್ರಿಟಿಶ ಆಡಳಿತವನ್ನೂ ಅವರು
ನಡಸಿದ ದೇಶದ ಸುಲಿಗೆಯನ್ನೂ ಕಟುವಾಗಿ ಯಾರಾದರೂ ಟೀಕಿಸುವುದು
ಕಂಡುಬಂದೊಡನೆ ಬ್ರಿಟಿಶರು ಅವರನ್ನು ತಮ್ಮ ಜೇಬಿಗೆ ಹಾಕಿಕೊಳ್ಳಲು
ಹಲವು ಆಮಿಷಗಳನ್ನು ಮುಂದೆ ಒಡ್ಡುತ್ತಿದ್ದರು. ಕನ್ನದ ಕಾಲದಲ್ಲಿ
ನಾಯಿಯು ಬೊಗಳಬಾರದೆಂದು ಅದಕ್ಕೊಂದು ರೊಟ್ಟಿಯ ತುಣುಕನ್ನು ಚೆಲ್ಲಿ
ಅದರಕೂಗನ್ನು ನಿಲ್ಲಿಸುವಂತೆ, ಕಾಂಗ್ರೆಸ್‌ವ್ಯಾಸಪೀಠದಿಂದ ಬ್ರಿಟಿಶರ ಅಪಹಾರ

ವನ್ನು ಟೀಕಿಸಿ ಗರ್ಜಿಸುತ್ತಿರುವವರನ್ನು ದೊಡ್ಡ ದೊಡ್ಡ ಅಧಿಕಾರಸ್ಥಾನ ಪದವಿಗಳನ್ನು ಕೊಟ್ಟು ಅಂದಿನ ಆಡಳಿತಗಾರರು ಅವರನ್ನು ಗೆದ್ದು ತಮ್ಮ ದಾಸರನ್ನಾಗಿ ಮಾಡಿಕೊಂಡಿದ್ದಾರೆ. ಹೈಕೋರ್ಟ ಜಡ್ಜಿ, ಎಗ್ಜಿಕ್ಯುಟಿವ್ಹ ಕೌನ್ಸಿಲರ, ಮೊದಲಾದ ಪದವಿಗಳನ್ನು ಆಶಿಸುವ ಮಹತ್ವಾಕಾಂಕ್ಷಿಗಳು ಕಾಂಗ್ರೆಸ್ ವ್ಯಾಸಪೀಠವನ್ನು ಈ ತೆರನಾದ ಸ್ವಾರ್ಥಸಾಧನೆಗೆ ಉಪಯೋಗಿಸಿ ಕೊಂಡಿದ್ದಾರೆ! ಅಧಿಕಾರ, ಸಂಪತ್ತುಗಳ ಲಾಲಸೆಯು ಆ ಸ್ವಾರ್ಥಬುದ್ಧಿಯು ಇಂದಿಗೂ ಅಳಿದಿದೆಯೆಂದು ತಿಳಿಯಲಾಗದು. ಬೇರೊಂದು ರೂಪತಾಳಿ ಲೋಕಸೇವೆಯ ಸೋಗಿನಲ್ಲಿ ಅದು ತನ್ನ ಕಾರ್ಯವನ್ನು ನಡಿಸಿಯೆ ಇದೆ.

ಸರಕಾರಿ ನೌಕರಿ ಕೊಟ್ಟು ಊಳಿಗದವರನ್ನಾಗಿ ಮಾಡಿ ಕೆಲವರನ್ನು ತಮ್ಮ ಬಲೆಯಲ್ಲಿ ಹಿಡಿದರು; ಸರ್, ರಾವಸಾಹೇಬರೆಂದು ಬಿರುದು ಬಾವುಲಿ ಕಟ್ಟಿ ಕೆಲವರನ್ನು ತೊಗಲಬಾವುಲಿಗಳನ್ನು ಮಾಡಿದರು. ಕೌನ್ಸಿಲರ, ಕಮಿಶನರ, ಆನರರಿ ಮ್ಯಾಜಿಸ್ಟ್ರೇಟ ಮೊದಲಾದ ಅಲ್ಪಸ್ವಲ್ಪ ಅಧಿಕಾರದ ಗಾಳಕ್ಕೆ ಕೆಲವ ರನ್ನು ಸಿಕ್ಕಿಸಿದರು. ಇಷ್ಟರಿಂದಲೂ ಬ್ರಿಟಿಶರಿಗೆ ತಮ್ಮ ಗಂಡಾಂತರವು ತಪ್ಪೀ ತೆಂದು ತೋರಲಿಲ್ಲ. ನಮ್ಮ ದೇಶದ ಜಾತಿಮತಗಳ ಸೂಕ್ಷ್ಮವಾದ ಅಭ್ಯಾಸ ಮಾಡಿ ಅದರಿಂದಲೂ ಲಾಭಪಡೆದುಕೊಂಡರು. ಸುಮಾರು ೧೮೭೭ರಿಂದ ಹಿಂದೂ ಮುಸಲ್ಮಾನರೆಂಬ ಭೇದನೀತಿಗೆ ಸ್ಪಷ್ಟವಾಗಿ ಆರಂಭವಾಯಿತು. ಅದನ್ನು ಬಹಳ ಯಶಸ್ವಿಯಾಗಿ ನಡಸಿಕೊಂಡು ಬಂದರು. ಲೋ.ಮಾ. ಟಿಳಕ ಮಹಾತ್ಮಾ ಗಾಂಧಿಯವರನ್ನು ಕೂಡ ತಮ್ಮ ಇಷ್ಟವಾದ ರೀತಿಯಲ್ಲಿ (ಎಂದರೆ ಮುಸಲ್ಮಾನರ ಮಹತ್ವಾಕಾಂಕ್ಷೆಗಳು ಹೆಚ್ಚಿ, ಅವರು ಹಿಂದುಗಳಿಂದ ಹೆಚ್ಚು ಹೆಚ್ಚಿಗೆ ದೂರ ಸಿಡಿಯುವಂತೆ) ಅವರಾಗಿಯೆ ವರ್ತಿಸುವಂತೆ ತಂತ್ರವನ್ನು ಮಾಡಿದರು. ಲೋಕಮಾನ್ಯರ ಲಖನೌ ಒಪ್ಪಂದ, ಮಹಾತ್ಮಾಜೀಯವರ ಮುಸಲ್ಮಾನರನ್ನು ಸಂತೈಸುವ ಪ್ರಯತ್ನಗಳು (ಗಾಂಧೀ-ಜಿನ್ನಾ ಮಾತುಕಥೆ) ಇವು ಹಿಂದೂ ಜನರಿಂದಾದ ಅನಿವಾರ್ಯವಾದ ಮಹಾಪರಾಧಗಳೆ ಸರಿ. ಕಂಡೂ ಕಂಡೂ ಬ್ರಿಟಿಶರು ತೋಡಿಟ್ಟ ತಗ್ಗಿನಲ್ಲಿ ನಾವಾಗಿಯೆ ಹೋಗಿ ಬಿದ್ದಂತಾಯ್ತು. ಅಥವಾ ಪ್ರವಾಹಪತಿತರಾಗಿ ಅವರಿಗೆ ಅವನ್ನು ಮಾಡಲೇಬೇಕಾಯಿತು. ಬ್ರಿಟಿಶ ರಾಜತಂತ್ರಪ್ರವೀಣರು ಮುಸಲ್ಮಾನರ ಪಕ್ಷಪಾತಿಗಳಾಗಿ ಇದೆಲ್ಲವನ್ನೂ ಕಂಡು ಕಾಣದಂತೆ ಮಾಡಿ ಮಾಡಿಸುತ್ತಿದ್ದರು. ಇದೆಲ್ಲದರ ಫಲವೆ ಇಂದಿನ ಪಾಕಿಸ್ತಾನ.

೧೯೨೦ರಲ್ಲಿ ಲೋಕಮಾನ್ಯ ಟಿಳಕರು ತೆರಳಿ ಮಹಾತ್ಮಾಜೀಯವರು ನಾಡಿನ ಮುಂದಾಳ್ತನವನ್ನು ಸ್ವೀಕರಿಸದೆ ಇದ್ದರೆ, ದಕ್ಷಿಣ ಭಾರತದಲ್ಲಿ 'ದ್ರವಿಡಿಸ್ತಾನ'ವೂ ಒಂದು ಇಷ್ಟು ಹೊತ್ತಿಗೆ ಭೋಂಕನೆ ಮೇಲೇಳದೆ ಇರುತ್ತಿದ್ದಿಲ್ಲ. ಲೋಕಮಾನ್ಯರು ಭಾರತದ ರಾಜಕೀಯ ಧುರೀಣರಾಗಿದ್ದಾಗ ಅವರ ಪ್ರಭಾವವು ವೃದ್ಧಿಂಗತವಾಗಿ ರಾಜಕೀಯ ಆಂದೋಲನವು ತೀವ್ರ ಸ್ವರೂಪವನ್ನು ತಾಳಬಾರದೆಂದು ಬ್ರಿಟಿಶರು ಬಗೆಬಗೆಯಿಂದ ಹೆಣಗಿದರು. ತಿಲಕರನ್ನು ಹಲವು ಬಾರಿ ಸೆರೆಮನೆಯಲ್ಲಿ ಕೊಳೆ ಹಾಕಿದರು. ಅಖಿಲ ಭಾರತ ದಲ್ಲಿ ಸ್ವರಾಜ್ಯ ಸಂಪಾದನೆಗಾಗಿ ಹೋರಾಡಿ ಸೆರೆಮನೆಯನ್ನು ಸೇರಿದ ಮೊದಲ ನೆಯ ಮಹಾ ವೀರರೆಂದರೆ ಲೋಕಮಾನ್ಯರೇ. ಸೆರೆಮನೆಯು ಸ್ವರಾಜ್ಯದ ಸೋಪಾನ; ಭಾರತ ಸ್ವಾತಂತ್ರ್ಯದ ಮಾರ್ಗವು ಕಾರಾಗೃಹದೊಳಗಿಂದಲೇ ಹಾಯುತ್ತದೆ. ಆದುದರಿಂದ ದೇಶಸೇವೆಗಾಗಿ ಆನಂದದಿಂದ ಕಾರಾಗೃಹವನ್ನು ಸೇರುವುದು ಅವಶ್ಯವಾದ ಕರ್ತವ್ಯವೆಂದು ತಮ್ಮ ಸ್ವಂತದ ಆಚರಣದಿಂದ ತೋರಿಸಿ ಕೊಟ್ಟ ಸ್ವಾತಂತ್ರ್ಯಮಂತ್ರ ದ್ರಷ್ಟಾರರು ಲೋಕಮಾನ್ಯ ಟಿಳಕರು. ಸೆರೆಮನೆಯ ಗುಮ್ಮನಿಂದ ಲೋಕಮಾನ್ಯರನ್ನು ಹೆದರಿಸಲು ಸಾಧ್ಯವಾಗಲಿಲ್ಲ. ಆಗ ಬ್ರಿಟಿಶರು ಲೋಕಮಾನ್ಯರನ್ನು ಅನುಸರಿಸದಂತೆ ಜನರಿಗೆ ಬೆದರಿಸಿದರು. ತಿಲಕರ ಹೆಸರನ್ನೂ ಎತ್ತದಂತೆ, ಚಿತ್ರ, ಚರಿತ್ರಗಳನ್ನು ಹತ್ತಿರ ಇಡದಂತೆ ಆಜ್ಞಾಪಿಸಿದರು. ಇದಕ್ಕೆ ವಿಪರೀತವಾಗಿ ವರ್ತಿಸಿದ ವಿದ್ಯಾರ್ಥಿಗಳನ್ನು ಶಾಲೆ ಯಿಂದ ತಳ್ಳಿದರು. ಜನರನ್ನು ಗುಪ್ತಚಾರರು ನಾನಾಬಗೆಯಿಂದ ಪೀಡಿಸಿದರು. ಹೀಗೆ ಗೋಳಾಡಿಸಿದಷ್ಟೂ ತಿಲಕರ ಕೀರ್ತಿ, ಲೋಕಪ್ರಿಯತೆ ಚಕ್ರಬಡ್ಡಿಯಿಂದ ಅಭಿವರ್ಧಿಸಿತು. ಇನ್ನು ಬೇರೆ ಉಪಾಯಗಾಣದೆ ಬ್ರಿಟಿಶರು ಭೇದೋಪಾಯ ವನ್ನು ಯೋಜಿಸಿದರು. ತಿಲಕರು ಬ್ರಾಹ್ಮಣರು. ಬ್ರಾಹ್ಮಣರು ವಂಚಕರು. ಮಂತ್ರಿಗಳಾಗಿ ಇರಬೇಕಾದ ಪೇಶ್ವೆಗಳು ರಾಜನನ್ನು ಮೂಲೆಗಿರಿಸಿ ತಾವೇ ಅರಸರಂತೆ ನಡೆದುಕೊಳ್ಳಲಿಲ್ಲವೆ? ಆದಕಾರಣ, ಈಗ ಸ್ವರಾಜ್ಯವನ್ನು ಬೇಡು ತ್ತಿರುವ ಹಾರುವ ತಿಲಕನೂ, ಅವನ ಜಾತಿಯವರೂ—ಬ್ರಾಹ್ಮಣರು, ಬ್ರಿಟಿಶರು ಹೋದೊಡನೆ ಬ್ರಾಹ್ಮಣೇತರರನ್ನು ಹಿಂದೆ ದೂಡಿ ತಾವೇ ರಾಜ್ಯ ಸೂತ್ರಗಳನ್ನು ಕೈವಶ ಮಾಡಿಕೊಳ್ಳದೆ ಬಿಡಲಾರರೆಂಬ ಮಂತ್ರೋಪದೇಶವು ದೊರೆತ ಹಲವು ಬ್ರಾಹ್ಮಣೇತರ ಮುಂದಾಳುಗಳೂ, ಅಂದಿನ ಕೊಲ್ಲಾಪುರ

ಮಹಾರಾಜನೂ, ಮೊದಲಾದವರು ಆಗಿನ ಸ್ವರಾಜ್ಯದ ಚಳವಳಿಯನ್ನು ಬಗ್ಗು ಬಡಿಯಲು ಬ್ರಿಟಿಶರಿಗೆ ತುಂಬ ನೆರವಾದರು. ಮದರಾಸ ಇಲಾಖೆಯಲ್ಲಿ (ತಮಿಳನಾಡಿನಲ್ಲಿ) ಜಸ್ಟಿಸ್ ಪಕ್ಷವು ತಲೆಯೆತ್ತಿ ಬ್ರಾಹ್ಮಣದ್ವೇಷದ ಪ್ರಚಾರಕ್ಕೆ ಪ್ರೋತ್ಸಾಹವು ದೊರೆಕಿತು. ಆರ್ಯ-ದ್ರಾವಿಡವೆಂಬ ವಾಗ್ಯುದ್ಧಗಳು ಭೀಕರ ರೂಪ ತಾಳಹತ್ತಿದುವು. ದ್ರಾವಿಡಸ್ಥಾನದ ಬೇಡಿಕೆಯು ಮುಂದೆ ಬಂದಿತು!

ಈ ಹೊತ್ತಿಗೆ ಸರಿಯಾಗಿ ಮಹಾತ್ಮಾಜೀಯವರ ಕೈಗೆ ಭಾರತದ ರಾಜಕೀಯ ಸೂತ್ರಗಳು ಬಂದುವು. ಲೋಕಮಾನ್ಯರ ನಿರ್ಯಾಣಕಾಲದಲ್ಲಿ ಆದ ಅಪಾರ ದುಃಖದಿಂದ ಹಿಂದೂ ದೇಶವೆಲ್ಲವೂ ಕಂಗೆಟ್ಟಿತು. ಲೋಕ ಮಾನ್ಯರು ಇನ್ನೂ ನಾಲ್ವೊಪ್ಪತ್ತು ಬಾಳಬೇಕಿತ್ತು, ಎಂದು ಶೋಕಿಸಿತು. ಶೋಕಭರದಲ್ಲಿ ಲೋಕಮಾನ್ಯರ ಅವತಾರಕಾರ್ಯವು ನಿಜವಾಗಿಯೂ ಕೊನೆ ಗಂಡಿತ್ತೆಂಬ ವಿಚಾರವು ಹೊಳೆಯಲಿಲ್ಲ.

ಆಗಿನ ಆಡಳಿತದಿಂದ ಲಾಭಹೊಂದಿದ ಸರ್, ದಿವಾಣಬಹದ್ದೂರಗಳೂ, ನಿವೃತ್ತ ಸರಕಾರಿ ಹಿರಿ ನೌಕರರೂ, ಇವರ ಪರಿವಾರದ ಕೈಗೊಂಬೆಗಳೂ ಬ್ರಿಟಿಶ ರಾಳಿಕೆಯಿಂದ ಕೊಬ್ಬಿ 'ಬ್ರಿಟಿಶರೇ ತಮ್ಮನ್ನು ಚಿರಕಾಲವೂ ಆಳಲಿ, ಬ್ರಿಟಿಶ ಸಾಮ್ರಾಜ್ಯವು ಅಮರವಾಗಲಿ' ಎಂದು ದೇವರಿಗೆ ಸಾರ್ವಜನಿಕವಾಗಿ ಪ್ರಾರ್ಥನೆ ಸಲ್ಲಿಸುವದಕ್ಕೂ ಹೇಸಲಿಲ್ಲ! ಇಂತಹ ಕುಲಕಂಟಕರೂ, ಭಾರತ್ರ ಕಲಂಕರೂ, ದೇಶದ್ರೋಹಿಗಳೂ 'ರಾಜನಿಷ್ಠ'ರೆಂದು ಆಡಳಿತಗಾರರಿಂದ ಸನ್ಮಾನಿಸಲ್ಪಡುತ್ತಿದ್ದರು. ಸರಕಾರದ ಕಚೇರಿಕಟ್ಟೆಗಳೊಳಗಿನ ತಮ್ಮ ಕೆಲಸ ಗಳು ಸುಲಭವಾಗಿ ಇವರಿಂದ ಕೈಗೂಡಬಲ್ಲವೆಂದು ಜನಸಾಮಾನ್ಯರು ಇವರಿಗೆ ಬೆಲೆ ಕೊಡಬೇಕಾಗಿತ್ತು. ಇದರಿಂದ ಎಲ್ಲಿ ನೋಡಿದಲ್ಲಿ ಬ್ರಿಟಿಶರ ವಿಷಯಕ್ಕೆ ನಿಷ್ಠೆಯವರೇ ಮೇಲುಗೈಯವರಾಗಿದ್ದರು. ಬ್ರಿಟಿಶರ ಆಡಳಿತದಲ್ಲಿ ಹಿಂದಿನ ಮುಸಲ್ಮಾನರ ಕಾಲದಂತೆ ಕೊಲೆ ಸುಲಿಗೆಗಳಿಲ್ಲದೆ ದೇಶವು ಶಾಂತಿ ಸೌಖ್ಯಗಳ ತವರೂರಾಗಿದೆಯೆಂದು ಈ ರಾಜನಿಷ್ಠ ಸ್ತುತಿಪಾಠಕರು ಬ್ರಿಟಿಶರ ಹೊಗಳ ಭಟ್ಟರಾಗಿ (ಸ್ವಾರ್ಥಸಾಧಿಸುವ) ತಮ್ಮ ಕಾಯಕವನ್ನು ನಡಸಿದ್ದರು. ಕಾಶಿ ಯಿಂದ ರಾಮೇಶ್ವರದ ವರೆಗೆ ಬಂಗಾರದ ಗಟ್ಟಿಯನ್ನು ಅಂಗೈಯಲ್ಲಿ ಹಿಡಿದು ಕೊಂಡು ಬೇಕಾದ ಹಾಗೆ ಅಲೆದಾಡಬಹುದು. ಮೊದಲಿನ ಕಾಲದಂತೆ ಈಗ ಜೀವಿತ, ವಿತ್ತದ ಹೆದರಿಕೆಯಿಲ್ಲವೆಂದು ಜಂಭ ಕೊಚ್ಚಿಕೊಳ್ಳುವುದು ಅಂದಿನ

ವಾಡಿಕೆಯಾಗಿತ್ತು. 'ಆದರೆ ಈಗ ಅಂಗೈಯಲ್ಲಿ ಹಿಡಿದುಕೊಂಡು ಹೋಗಲು ಬಂಗಾರವೇ ಉಳಿದಿಲ್ಲವಲ್ಲ! ಬ್ರಿಟಿಶರು ಎಲ್ಲವನ್ನೂ ಕಾಯಿದೆಶೀರ ರೀತಿಯಿಂದ ಸುಲಿಗೆ ನಡಸಿ ನಮ್ಮ ದೇಶವನ್ನು ಬರಿದುಮಾಡಿದ್ದಾರೆ!' ಎಂದು ಲೋಕಮಾನ್ಯ ತಿಲಕರು ಧೈರ್ಯದಿಂದ ಎದುರಿಸಿ ಮೇಲಣ ಜಂಭದ ಮಾತು ಎಷ್ಟು ನಿರರ್ಥಕವಾದುದೆಂಬುದನ್ನು ಸಿದ್ಧಪಡಿಸಿ ತೋರಿಸಿದರು.

ಮುಸಲ್ಮಾನರ ಕಾಲದಲ್ಲಿ ಅಶಾಂತಿಯಿರಬಹುದು. ಆದರೆ ಇಂದಿನ ಶ್ಮಶಾನಶಾಂತಿಗಿಂತಲೂ ಅಂದಿನ ಅಶಾಂತಿಯೇ ಲೇಸು. ಆ ಅಶಾಂತಿಯು ಹುಕ್ಕಬುಕ್ಕ, ಶಿವಾಜಿಗಳಂತಹ ಸ್ವಾಭಿಮಾನಿಗಳಾದ ನರವೀರರನ್ನು ನಿರ್ಮಿಸಬಲ್ಲದು ಇಂದಿನ ಶ್ಮಶಾನಶಾಂತಿ ನಮ್ಮ ತರುಣರನ್ನು ಗಂಡುಗೇಡಿಗಳನ್ನಾಗಿ ಮಾಡಿದೆ. ನಾಜೋಕಾದ ಜಂಟ್ಲಮೆನ್ ಆಗುವುದರಲ್ಲಿ ನಮ್ಮ ತರುಣರಲ್ಲಿ ಈರ್ಷೆನಡೆದಿದೆ. ಇದೇನು ರಾಷ್ಟ್ರದ ಪೌರುಷದ ಲಕ್ಷಣವೆ? ಕೈಯಲ್ಲಿ ಶಸ್ತ್ರವನ್ನು ಹಿಡಿಯುವುದಕ್ಕೆ ಹೆದರಿಕೆಯಾಗುವ ಇಂದಿನ 'ಗಂಡಸ'ರನ್ನು ನಿರ್ಮಾಣಮಾಡುತ್ತಿರುವ ಬ್ರಿಟಿಶರ ಆಡಳಿತವು ಭಾರತದ ನಾಶಕ್ಕೆ ಕಾರಣವಾದೀತಲ್ಲದೆ ಉದ್ಧಾರಕ್ಕಲ್ಲ ಎಂದು ಮುಂತಾದ ರೀತಿಯಲ್ಲಿ ಲೋಕಮಾನ್ಯರು ಗರ್ಜಿಸಿ ಸುಖಸ್ವಪ್ನದ ಭ್ರಾಂತಿಯಲ್ಲಿದ್ದ ಭಾರತವನ್ನು ಎಚ್ಚರಿಸಿದರು. 'ಸ್ವರಾಜ್ಯವು ನಮ್ಮ ಜನ್ಮಸಿದ್ಧಹಕ್ಕು' ಎಂಬ ತಾರಕ ಮಂತ್ರವನ್ನು ಘೋಷಿಸಿದರು. ಬ್ರಿಟಿಶರ ಆಡಳಿತದ ಬಗೆಗೆ ಸಂತೋಷಪಟ್ಟುಕೊಂಡು ಆತ್ಮವಂಚನೆ ಆತ್ಮಘಾತಮಾಡಿಕೊಳ್ಳುತ್ತಿದ್ದ ಜನದಲ್ಲಿ ಬ್ರಿಟಿಶ ಆಡಳಿತದ ವಿಷಯಕ್ಕೆ ಅಸಂತೋಷದ ಬೀಜವನ್ನು ಬಿತ್ತಿದರು. ಬ್ರಿಟನ್ನಿನ ಆಡಳಿತದಿಂದ ಆಗುತ್ತಿರುವ ಘೋರ ದುಷ್ಪರಿಣಾಮಗಳನ್ನು ನಿರ್ಭಯವಾಗಿ ಜನರಿಗೆ ವಿವರಿಸಿ ಹೇಳಿದರು. ಅದಕ್ಕಾಗಿ ತಮ್ಮ ಸರ್ವಸ್ವವನ್ನೆಲ್ಲಸೂರೆಗೈದು ಸ್ವಾರ್ಥತ್ಯಾಗದಿಂದ ಹೋರಾಡಿ ಹಲವುಬಾರಿ ಕಾರಾಗ್ರಹವಾಸವನ್ನು ಅನುಭವಿಸಿ ದೇಶದಲ್ಲಿ ಎಲ್ಲೆಲ್ಲೂ ಬ್ರಿಟಿಶರ ಆಡಳಿತದ ಬಗೆಗೆ ತಿರಸ್ಕಾರಭಾವವು ನೆಲೆಗೊಳ್ಳುವಂತೆ ಮಾಡಿದರು. ಇದೇ ಲೋಕಮಾನ್ಯರ ಅವತಾರ ಕಾರ್ಯ

ಸಾಮಾಜಿಕ ಸುಧಾರಣೆಗಳು ಆಗದೆ ರಾಜಕೀಯ ಸುಧಾರಣೆಗಳಿಗೆ ನಾವು ಅರ್ಹರಾಗುವುದಿಲ್ಲ. ಆದಕಾರಣ ನಮ್ಮ ಸಾಮಾಜಿಕ ನಡೆವಳಿಯಲ್ಲಿ ಕಾಲಕ್ಕೆ ತಕ್ಕ ಮಾರ್ಪಾಟಗಳನ್ನು ಮಾಡಿಕೊಳ್ಳುವುದು ಕರ್ತವ್ಯ. ಆದುದರಿಂದ

'ನಮ್ಮ ದೇಶದ ಸಂಪತ್ತನ್ನು ಲೂಟಿ ಮಾಡಿ, ನಮ್ಮನ್ನು ದಾಸರನ್ನಾಗಿ ಮಾಡಿಕೊಂಡಿರುವ ಬ್ರಿಟಿಶರನ್ನು ಓಡಿಸುವುದು ಪ್ರತಿಯೊಬ್ಬ ಭಾರತೀಯನ ಆದ್ಯ ಕರ್ತವ್ಯ'; ಎಂಬ ರಣಗರ್ಜನೆಯು ಜನಹೃದಯದಲ್ಲಿ ಎಷ್ಟು ಬೇಗನೆ ಇಂಬುಗೊಂಡಿತೊ ಅಷ್ಟು ವೇಗದಿಂದ 'ಜಾತಿಭೇದವನ್ನು ಅಳಿಸುವ', 'ಹರಿಜನೋದ್ಧಾರ ಮಾಡುವ' ಎಂಬ ಆತ್ಮಸುಧಾರಣೆಯ ವಿಚಾರವು ಜನರ ಮನಸು ಹಿಡಿಯಲಿಲ್ಲ. ರಾಜಕೀಯ ದಾಸ್ಯದ ದುಷ್ಪರಿಣಾಮಗಳು ಸಾಮಾಜಿಕ ಕುಂದುಕೊರತೆಗಳಿಗಿಂತ ಸಾಮಾನ್ಯ ಜನರಿಗೆ ಬೇಗನೆ ತಿಳಿಯಬಲ್ಲವು.

ಹೆರವರೊಡನೆ ಹೋರಾಡುವುದರಲ್ಲಿ ಮನುಷ್ಯನಿಗೆ ಇರುವ ಹುಮ್ಮಸವು ಆತ್ಮಸುಧಾರಣೆಗಾಗಿ ತನ್ನೊಡನೆಯೆ ಕಾದುವಾಗ ಇರುವುದಿಲ್ಲ. ಏಕೆಂದರೆ ತನ್ನ ದೋಷಗಳನ್ನು ದೋಷಗಳೆಂದು ಒಪ್ಪಿಕೊಳ್ಳುವುದಕ್ಕೇ ಆತನು ಮೊದಲು ಸಿದ್ಧನಿರುವುದಿಲ್ಲ. ಹೆರವರ ದೋಷಗಳನ್ನು ಕಡ್ಡಿಯಿದ್ದರೂ ಗುಡ್ಡವಾಗಿಸುವವನೇ ತನ್ನ ಕುಂದುಕೊರತೆಗಳು ಗುಡ್ಡವಿದ್ದರೂ ಅವನ್ನು ಕಡ್ಡಿಯಂತೆ ಭಾವಿಸುವನು! ರಾಜಕೀಯ ಚಳವಳಿಯಲ್ಲಿ ತೋರುವ ಸ್ಫೂರ್ತಿ ಉತ್ಸಾಹಗಳು ಸಾಮಾಜಿಕ ಆಂದೋಲನದಲ್ಲಿ ಕಾಣಬರದೆ ಇರುವುದಕ್ಕೆ ಇದೇ ಮುಖ್ಯ ಕಾರಣವು.

ಆದರೂ ಸ್ವಾತಂತ್ರ್ಯಸಂಪಾದನೆಗೆ ರಾಜಕೀಯದೊಡನೆಯೆ ಸಾಮಾಜಿಕ ಸುಧಾರಣೆಗಳ ಚಳವಳಿಯೂ ಅತ್ಯವಶ್ಯಕವೆಂಬುದು ಎಳ್ಳಷ್ಟೂ ಸುಳ್ಳಲ್ಲ. ಹರಿಜನ ಹಾಗೂ ಹಿಂದುಳಿದ ವರ್ಗದವರನ್ನು ಕಡೆಗಣಿಸಿದುದರಿಂದ ಹಿಂದೂ ಸಮಾಜವು ದಿನದಿನಕ್ಕೂ ಕ್ಷೀಣವಾಯಿತು. ಕ್ರಿಸ್ತೀ ಹಾಗೂ ಮುಸಲ್ಮಾನ ಮತಪ್ರಚಾರಕರಿಗೆ ತಮ್ಮ ಕಾಯಕ ನಡಸಲು ಅನುವು ದೊರೆತಿತು. ತೀವ್ರ ಜಾತಿಭೇದಗಳ ಮೂಲಕ ಹಿಂದೂ ಸಮಾಜದಲ್ಲಿ ಒಕ್ಕಟ್ಟು ಇದ್ದಿಲ್ಲ. ಹಿಂದೂ ಮುಸಲ್ಮಾನನೆಂಬ ಭೇದವಲ್ಲದೆ ಬ್ರಾಹ್ಮಣ-ಬ್ರಾಹ್ಮಣೇತರ ಭೇದವು ಇನ್ನೊಂದು; ಬ್ರಾಹ್ಮಣೇತರವೆಂದುಕೊಂಡ ಪಕ್ಷವೂ ತೋರಿಕೆಯಲ್ಲಿ ಮಾತ್ರ ಒಂದು. ಒಳಗೆ ನಾನಾ ಬಗೆಗಳು! ಬ್ರಾಹ್ಮಣೇತರವೆಂಬ ಹೆಸರಿನ ಒಂದು ದೊಡ್ಡ ಗುಂಪು ನಿರ್ಮಾಣ ಮಾಡಿ, ಅದರ ಮುಂದಾಳುಗಳೆಂದು ಮುಂದೆ ಬಂದು ಕೇವಲ ತಮ್ಮ ಸ್ವಾರ್ಥ ಸಾಧಿಸಿದ ಜಾತಿಯವರುಂಟು. ಅದರಿಂದ ಮತ್ತೆ ಒಳಬಣಗಳು ಹಲವು ತಲೆಯೆತ್ತಿದುವು. ಹೀಗೆ ದೇಶದಲ್ಲಿ ಅಸಂಖ್ಯ

ಪಂಗಡಗಳು ಆದುವು. ಅವು ತಮ್ಮ ಸ್ವಾರ್ಥಸಾಧನೆಗಾಗಿ ಬ್ರಿಟಿಶ ಆಡಳಿತ ಗಾರರ ಅಡಿಯಲ್ಲಿ ಹೊರಳಾಡಿ ಲಾಂಗೂಲಚಾಲನ ನಡಸಿದ ಆ ಕಾಲದ ಭಾರತದ ದೈನ್ಯಸ್ಥಿತಿಯ ಚಿತ್ರವು ಅತ್ಯಂತ ಕರುಣಾಸ್ಪದವಾಗಿದೆ. ಯಾವ ರಾಷ್ಟ್ರೀಯ ಸ್ವಾಭಿಮಾನಿಗೂ ನಾಚಿಕೆಯಿಂದ ತಲೆತಗ್ಗಿಸಹಚ್ಚುತ್ತದೆ. ಬ್ರಿಟಿಶರು ತಾವು ಈ ಪಕ್ಷಪಂಪಡಗಳ ಸಂರಕ್ಷಕರಂತೆ ನಟಿಸಿ, ಅವುಗಳು ತಮ್ಮೆಡೆಗೆ ಎಡೆಬಿಡದೆ ದೂರುಗಳನ್ನು ತರುವಂತೆ ಪ್ರೋತ್ಸಾಹಿಸುತ್ತಿದ್ದರು. ಪ್ರತಿಯೊಂದು ಜಾತಿಯೂ ತನಗೆ ವಿಶಿಷ್ಟ ಹಕ್ಕುಬಾಧ್ಯತೆಗಳು ಇರಬೇಕೆಂಬ ಬೇಡಿಕೆಗಳನ್ನು ಮುಂದೊಡ್ಡಲಾರಂಭಿಸಿತು.

ಜನ್ಮದಿಂದಿರುವ ಜಾತಿಭೇದಗಳನ್ನು ಮುರಿದು ಬಿಡಲು ರಾಜಾರಾಮ ಮೋಹನರ ಕಾಲದಿಂದಲೇ ಆರಂಭವಾಗಿದ್ದರೆ ಅದೆಷ್ಟು ಚೆನ್ನಾಗುತ್ತಿತ್ತು! ಬ್ರಿಟಿಶರಿಗೆ ಒಂದು ಜಾತಿಯನ್ನು ಇನ್ನೊಂದರ ವಿರುದ್ಧ ಕುಣಿಸುವುದಕ್ಕೆ ಇಂಬು ದೊರೆಯುತ್ತಿದ್ದಿಲ್ಲ. ಪಾಕಿಸ್ತಾನವಾಗಿ ಭಾರತವು ತುಂಡಾಗುವ ಹೊತ್ತು ಬರುತ್ತಿದ್ದಿಲ್ಲ. ಆದರೆ ಜಾತಿಭೇದ ನಿರ್ಮೂಲನದ ಮಹತ್ವ ಮತ್ತು ಅವಶ್ಯ ಕತೆಯು ತಿಳಿಯುವಷ್ಟು ಲೋಕಸ್ಥಿತಿಯ ಅರಿವು ಉಂಟಾದ ಜನ ಈ ಕ್ಷಣಕ್ಕೂ ಸಾಕಷ್ಟಿಲ್ಲದೆ ಇರುವಾಗ ಹಿಂದಿನ ಮಾತು ಏತಕ್ಕೆ ?

ಲೋಕಮಾನ್ಯ ತಿಲಕರು ಆರಂಭಿಸಿದ ಹೋಮ್‌ರೂಲ ಲೀಗಿನ ಉಗ್ರ ವಾದ ಆಂದೋಲನವನ್ನು ತಗ್ಗಿಸಲಿಕ್ಕೆ ಬ್ರಿಟಿಶರು ಒಂದು ಹಂಚಿಕೆ ಹುಡುಕಿ ದರು. ತಿಲಕರು ಬ್ರಾಹ್ಮಣರೆಂಬ ಮಾತಿನ ಲಾಭ ಪಡೆದು ಬ್ರಾಹ್ಮಣೇತರರ ಹಿತರಕ್ಷಣೆಯ ಕೂಗು ಎಬ್ಬಿಸಿದರು. ದೇವರ ದಯದಿಂದ ಲೋಕಮಾನ್ಯರು ಸಕಾಲದಲ್ಲಿಯೆ ತಮ್ಮ ಅವತಾರ ಕಾರ್ಯವನ್ನು ಮುಗಿಸಿ ರಂಗಭೂಮಿಯಿಂದ ತೆರೆಯ ಮರೆಯಾದರು. ಮಹಾತ್ಮಾಜೀಯವರು ಆ ಸ್ಥಳದಲ್ಲಿ ಪ್ರವೇಶಿಸಿದರು. ಬ್ರಿಟಿಶರ ದುರ್ದೈವದಿಂದ ಇವರು ಬ್ರಾಹ್ಮಣರಾಗಿರಲಿಲ್ಲ. ಮಹಾತ್ಮಾಜಿಯವರು ಬ್ರಾಹ್ಮಣರಾಗಿದ್ದರೆ ದಕ್ಷಿಣ ಭಾರತದ ಬ್ರಾಹ್ಮಣೇತರ ಚಳವಳಿ, ಜಸ್ಟಿಸ್ ಪಕ್ಷದ ಉಲ್ಬಣವು ಕಾಳ್ಗಿಚ್ಚಿನಂತೆ ಎಲ್ಲೆಡೆಗೂ ಹಬ್ಬಿ ಇಲ್ಲಿ ದ್ರವಿಡಿಸ್ತಾನದ ಬೇಡಿಕೆಯು ಪುಟಗೊಳ್ಳುವುದಕ್ಕೆ ಅವಶ್ಯಕವಾದ ವಾತಾವರಣವು ಬ್ರಿಟಿಶರ ಕೃಪೆಯಿಂದ ಚೆನ್ನಾಗಿಯೆ ಸಿದ್ಧವಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ವಿಚಾರಿಸಿ ದರೆ ಇಷ್ಟುವುಟ್ಟಿಗಾದರೂ ಭಾರತವು ಅಖಂಡವಾಗಿ ಉಳಿದ ಶ್ರೇಯಸ್ಸು

ಸಂಪೂರ್ಣವಾಗಿ ಮಹಾತ್ಮಾಜಿಯವರಿಗೇ ಸಲ್ಲುತ್ತದೆ. ಈ ಕಾರಣದಿಂದಲೆ ಗಾಂಧೀಜಿ ಭಾರತದ ತಂದೆ, ಭಾರತೋದ್ಧಾರಕ ಮಹಾತ್ಮರೆಂಬ ವಿಶೇಷಣ ಗಳು ಸಾರ್ಥಕವಾಗಿವೆ. ಭಾರತೀಯರು ಗಾಂಧಿಜೀಯವರಿಗೆ ಚಿರಋಣಿಗಳು. ಅವರ ಉಪಕಾರಗಳನ್ನು ಎಷ್ಟು ನೆನೆದರೂ ಕಡಿಮೆಯೆ. ಜಾತ್ಯಭಿಮಾನ, ಪ್ರಾಂತಾಭಿಮಾನಗಳಿಂದ ಭಾರತವು ಇನ್ನೂ ತುಂಡುತುಂಡಾಗುವ ವ್ಯತ್ಯ ಯೋಗದಿಂದ ಪಾರಾದುದು ಈ ಪುಣ್ಯಾತ್ಮನ ಮಹಿಮೆಯಿಂದಲೇ. ಇತಿಹಾಸ ಪೂರ್ವದಲ್ಲಿ ಇಂತಹ ಬೇರೆ ಕುತ್ತಗಳಿಂದ ನಮ್ಮ ರಾಷ್ಟ್ರವನ್ನುಳಿಸಿಕೊಂಡು ಬಂದ ಶ್ರೀರಾಮ ಮತ್ತು ಶ್ರೀಕೃಷ್ಣರಂತೆ ಗಾಂಧೀಜಿಯೂ ನಮಗೆ ಪರಮ ವಂದ್ಯ ಅಮರದಿವ್ಯಜ್ಯೋತಿ. ಮಹಾ ಆತ್ಮನಲ್ಲದೆ, ಪರಮ ಆತ್ಮನೂ ಅಹುದು.

ರಾಜಕೀಯ ಚಳವಳಿಯ ಅಂಗವಾಗಿಯೆ ಸಾಮಾಜಿಕ ಸುಧಾರಣೆಗಳ ಅಂದೋಲನವನ್ನು ನಡಸಿಕೊಂಡು ಬರುವ ಅವಶ್ಯಕತೆಯು ತಿಲಕರ ಕಾಲ ದಲ್ಲಿಯೆ ಕೊನೆಕೊನೆಗೆ ತೀರ ಅನುಭವಕ್ಕೆ ಬಂದಿತು. ತಿಲಕರು ಸ್ವತಃ ಸಾಮಾಜಿಕ ವಿಚಾರದಲ್ಲಿ ಮುಂದುವರಿದವರಾಗಿದ್ದರೂ ಅವರ ಅನುಯಾಯಿ ಗಳಲ್ಲಿ ಬಹುಸಂಖ್ಯಾಕರು ಭಟ್ಟವೃತ್ತಿಯ ಸನಾತನೀಗಳೇ ಇದ್ದರು. ಬ್ರಾಹ್ಮಣ ಬಾಹ್ಮಣೇತರ ವಾದವು ತಲೆಯೆತ್ತಿದ ಕಾಲದಲ್ಲಿ ಕೆಲವು ಬ್ರಾಹ್ಮಣ ಪ್ರಮುಖರು ಬ್ರಾಹ್ಮಣರ ಹಕ್ಕುಬಾಧ್ಯತೆಗಳ ಸಂರಕ್ಷಣೆಗಾಗಿ ಪ್ರತ್ಯೇಕ ಒಂದು ಬ್ರಾಹ್ಮಣ ಸಂಘವನ್ನು ಸ್ಥಾಪಿಸುವ ತಮ್ಮ ವಿಚಾರಕ್ಕೆ ಬೆಂಬಲವನ್ನು ಕೊಡಲು ಲೋಕಮಾನ್ಯರನ್ನು ಕೇಳಿಕೊಂಡರು. ಆಗ ತಿಲಕರು ಬ್ರಾಹ್ಮಣರ ಜಾತೀಯ ಸಂಘಸ್ಥಾಪನೆಗೆ ಬಲವಾಗಿ ವಿರೋಧಿಸಿ, ತಮ್ಮ ಅಸಮ್ಮತಿಯನ್ನು ವ್ಯಕ್ತ ಪಡಿಸಿದರು. ತಾವು ಹಾರಯಿಸುವ ಸ್ವರಾಜ್ಯವು ಬಹುಸಂಖ್ಯಾಕರ ಸಹಾನು ಭೂತಿ, ಸಹಕಾರದಿಂದ ಅವರ ಹಿತಕ್ಕಾಗಿಯೆ ಸ್ಥಾಪಿತವಾಗಬೇಕಾದುದು. ಬ್ರಾಹ್ಮಣರು ಬಹುಜನ ಸಮಾಜದಿಂದ ದೂರವಾಗಿ ಉಳಿದು ಬಾಳಬೇಕೆನ್ನು ತ್ತಿದ್ದರೆ ಆ ಬಾಳು ಬಾಳಲ್ಲ. ದೇಶಕ್ಕೂ ಹಿತಕರವಲ್ಲ. ನಾವು ಈ ಮಣ್ಣಿ ನಲ್ಲಿಯೆ ಹುಟ್ಟಿ ಬೆಳೆದವರು. ಆದುದರಿಂದ ಈ ಭೂಮಿತಾಯಿಯ ಮಕ್ಕ ಳೊಡಗೂಡಿ ಪ್ರೀತಿ ವಿಶ್ವಾಸಗಳಿಂದ ಒಂದು ತಾಯಿಮಕ್ಕಂತೆ ಬಾಳುವುದೇ ನ್ಯಾಯವಾದ ಕರ್ತವ್ಯವಾಗಿದೆ, ಎಂಬುದಿದು ಲೋಕಮಾನ್ಯರ ವಿಚಾರಸರಣಿ. ಅದನ್ನು ಅವರು ಹಲವೆಡೆಗೆ ಮುಕ್ತಕಂಠದಿಂದ ಸ್ವತಃ ಕಲಿಸಿದ್ದೂ ಉಂಟು.

ಆದರೂ ಅವರ ಅನುಯಾಯಿಗಳೆಂದು ಮುಂದೆ ಬಂದವರಲ್ಲಿ, ಪ್ರೊಫೆಸರರಾದ ವಾಮನ ಮಲ್ಹಾರ ಜೋಶಿಗಳಂತಹ ಕೆಲವರನ್ನುಳಿದರೆ ಜಾತೀಯ ಹೆಮ್ಮೆಯುಳ್ಳವರೇ ಹೆಚ್ಚಾಗಿದ್ದರು. ಈ ಕಾರಣದಿಂದಲೇ ಆಗ ಬ್ರಾಹ್ಮಣೇತರ ಚಳವಳಿಗೆ ಆಸ್ಪದವು ದೊರೆಕಿತು. ಕೊನೆಗೆ ಲೋಕಮಾನ್ಯರಿಗೂ ಸ್ವಲ್ಪ ಅದರ ಬಳತಾಗದೆ ಹೋಗಲಿಲ್ಲ. ಲೋಕಮಾನ್ಯರ ಸ್ವರಾಜ್ಯದ ಬೇಡಿಕೆಗೆ ಬ್ರಾಹ್ಮಣೇತರ ಪಕ್ಷವು ವಿರೋಧಿಸಿ ಮಾಂಟೆಗ್ಯು ಚೆಲ್ಮ್ಸಫರ್ಡರ ಕಡೆಗೆ ಹಲವಾರು ಸಂಘಗಳ ಮೂಲಕ ತಮಗೆ ಸ್ವರಾಜ್ಯದ ಅವಶ್ಯಕತೆಯಿಲ್ಲವೆಂದು ತಂತಿಗಳ ಸುರಿಮಳೆಯನ್ನೆ ನಡಸಿತು! ಮುರಾಠಾ, ಶೀಖ, ಅಸ್ಪೃಶ್ಯ, ವೀರಶೈವ, ಮೊದಲಾದ ಸಂಘಗಳು ತಮ್ಮತಮ್ಮ ಜಾತಿಯವರಿಗಾಗಿ ಸ್ವತಂತ್ರ ಸ್ಥಾನಮಾನಗಳನ್ನು ಕಾಯ್ದಿಡಬೇಕೆಂದು ಬ್ರಿಟಿಶರ ಮಂತ್ರಿಗಳಿಗೂ ವೈಸರಾಯರಿಗೂ ಮನವಿಗಳನ್ನು ಅರ್ಪಿಸಿ ಪ್ರಾರ್ಥಿಸಿಕೊಂಡರು.

'ಸ್ವರಾಜ್ಯವನ್ನು ಕೊಡುವುದೇ ಬ್ರಿಟಿಶರ ಆಡಳಿತದ ಗುರಿಯಾಗಿದೆ. ಆದರೆ ನೀವು ಎಲ್ಲರೂ ಒಂದುಗೂಡಿ ನಿಮ್ಮ ಬೇಡಿಕೆಯನ್ನು ಮುಂದೆ ಇಡಿರಿ. ಮುಸಲ್ಮಾನ, ಅಲ್ಪಸಂಖ್ಯಾಕರ, ಹಾಗೂ ಹಿಂದುಳಿದವರ ರಕ್ಷಣಮಾಡುವುದು ನಮ್ಮ ಕರ್ತವ್ಯವಾಗಿದೆ. ಸ್ವರಾಜ್ಯವು ಸುಶಿಕ್ಷಿತರಾದ ಕೆಲವು ವಿಶಿಷ್ಟ ಜನರಿಗೆ ಮಾತ್ರ ಬೇಕಾಗಿದೆ. ಆದಕಾರಣ ಈಗಲೇ ನಿಮಗೆ ಸ್ವರಾಜ್ಯ ಸಿಕ್ಕಲಾರದು.' ಎಂದು ಬ್ರಿಟಿಶರು ಕಾಲಹರಣದ ಆಟಹೂಡಲು ನಮ್ಮ ನಾಡಿನೊಳಗಿನ ಜಾತಿಭೇದವೇ ಮುಖ್ಯವಾದ ಕಾರಣವಾಯಿತು. ಇಂತಹ ಪರಿಸ್ಥಿತಿಯಲ್ಲಿ ಜಾತ್ಯೈಕ್ಯವು ಅತ್ಯಾವಶ್ಯಕವೆನಿಸಿತು. ಇದರೆ ಇದು ಅಪೇಕ್ಷಿಸಿದೊಡನೆ ಫಲಕಾರಿಯಾಗುವ ವಿಷಯವಲ್ಲ. ಸಮಾಜದಲ್ಲಿ ಹಲವು ವರುಷಗಳಿಂದ ಪ್ರೈಯುಂಡ ರೂಢಿ ಸಂಪ್ರದಾಯಗಳನ್ನು ಬೋಧನೆಯಿಂದ ಒಂದೆರಡು ವರುಷಗಳಲ್ಲಿ ಬದಲಿಸಿಕೊಳ್ಳುವುದು ಅಸಾಧ್ಯ. ಸವರ್ಣ ಹಿಂದುಗಳು ಹರಿಜನರನ್ನು ತ್ಯಾಜ್ಯರೆಂಬಂತೆ ನಡಸಿಕೊಳ್ಳುತ್ತಿರುವುದರ ಪ್ರತಿಕ್ರಿಯೆಯಾಗಿ, ಅವರು ಹಿಂದೂ ಸಮಾಜದಿಂದ ದೂರ ಸಿಡಿದು ಮುಸಲ್ಮಾನರೊಡನೆ ಸಹಕರಿಸಿ ಸ್ವರಾಜ್ಯದ ಬೇಡಿಕೆಗೆ ವಿರೋಧಿಸುವ ಲಕ್ಷಣಗಳು ಕಾಣಹತ್ತಿದುವು. ಹರಿಜನೋದ್ಧಾರದ ಮಹತ್ವವನ್ನು ಹಿಂದೂ ಸಮಾಜವು ಆಗ ಅರಿತುಕೊಂಡು ಕಣ್ತೆರೆದಿತು! ಅಸ್ಪೃಶ್ಯತಾ ನಿವಾರಣದ ಚಳವಳಿಯು ಆರಂಭವಾಯಿತು.

ಮುಸಲ್ಮಾನರನ್ನು ಒಡೆದು ಹಿಂದುಗಳಿಂದ ಪ್ರತ್ಯೇಕಿಸಲು, ಬ್ರಿಟಿಶರು, ಅವರಿಗೆ ಯಾವ ಹೇಸಿಕೆ ನಾಚಿಕೆ ಇಲ್ಲದೆ ಅನ್ಯಾಯವಾಗಿ ಕೊಡುತ್ತಿದ್ದ ಸವಲತ್ತುಗಳನ್ನು ವಿರೋಧಿಸಲು ಹಿಂದುಗಳ ಸಂಘಟನೆಯು ಅಗತ್ಯವೆನಿಸಿತು. ಇದೇ ಹಿಂದೂ ಮಹಾಸಭೆಯಾಗಿ ಮುಂದೆ ಬಂದಿತು. ಹಿಂದೂಗಳೆಲ್ಲ ಒಂದುಗೂಡದಿದ್ದರೆ ಬ್ರಿಟಿಶರ ಬೆಂಬಲದಿಂದ ಮಹಮ್ಮದೀಯರ ಕುಚೋದ್ಯವು ಮಿತಿಮೀರಿ ಬೆಳೆದು ಉತ್ತರ ಹಿಂದುಸ್ತಾನವೆಲ್ಲವೂ ಮುಸಲಸ್ತಾನ (=ಪಾಕಿಸ್ತಾನ) ವಾಗದೆ ಉಳಿಯು ಲಿಕ್ಕಿಲ್ಲನೆಂಬ ಪರಿಸ್ಥಿತಿಯು ತೋರಿಬಂದೊಡನೆ ಪಂಡಿತ ಮಾಲವೀಯರು ಶೀಖ, ಜೈನ, ಬೌದ್ಧ ಮೊದಲಾದ ಎಲ್ಲ ಭಾರತೀಯ ಮತಸ್ಥರನ್ನೂ ಹಿಂದೂ ಮಹಾಸಭೆಯಲ್ಲಿ ಅಳವಡಿಸಿಕೊಂಡು ಹಿಂದುವೆಂಬ ವ್ಯಾಖ್ಯೆಯನ್ನು ಹಿಗ್ಗಿಸಿ ದರು. ಕೇಳಕರ, ಸಾವರಕರರು ಒಳಭೇದಗಳನ್ನು ನಾಶಮಾಡಿ ಒಂದೇ ಜಾತಿನಿರ್ಮಾಣಕ್ಕಾಗಿ ಸಾರ್ವಜನಿಕ ಸಹಭೋಜನಾದಿ ಕೆಲವು ಕಾರ್ಯಕ್ರಮ ಗಳನ್ನು ಕೈಕೊಂಡು ಹಿಂದುಗಳಲ್ಲಿ ಒಕ್ಕಟ್ಟು ಬೆಳಸುವ ಎತ್ತುಗಡೆ ನಡಸಿದರು.

ಅವಸರದಲ್ಲಿ ತೋಡಿದ ಒರ್ತಿಗೆ ನೀರು ಬಂದೀತೇನು? ಊರಿಗೆ ಬಿದ್ದ ಬೆಂಕಿ ಆರೀತೇನು? ಸ್ವರಾಜ್ಯಕ್ಕಾಗಿ ನಡೆದ ಪ್ರಯತ್ನಗಳಿಗೆ ಬೇರೆ ಬೇರೆ ಜಾತಿಗಳು—ಜಾತಿಭೇದವು ಅಡ್ಡಬರುವುದನ್ನು ಕಂಡು 'ನಾವೆಲ್ಲ ಒಂದು ಗೂಡುವಾ ಬನ್ನಿ' ಎಂಬ ಗಡಿಬಿಡಿಗೆ ಆರಂಭವಾಯಿತು. ಅದು ಕೂಡ ಮೇಲು ಮೇಲಿನ ಪ್ರಯತ್ನ. 'ಬ್ರಿಟಿಶರಲ್ಲಿ ಸ್ವರಾಜ್ಯದ ಬಿಕ್ಕೆ ಬೇಡಲು, ನಾವು ಹಿಂದೂ ಧರ್ಮದ ವೈಶಿಷ್ಟ್ಯವಾದ ಸನಾತನ ವರ್ಣಾಶ್ರಮವನ್ನು ನಾಶ ಮಾಡಬೇಕೆ?' ಎಂದು ಅಭಿಮಾನಧನರ ವಿರೋಧವು ಬೇರೆ! ಹರಿಜನರೊಡನೆ ಬೆರೆಯಲಿಕ್ಕೆ, ಜಾತಿಭೇದಗಳನ್ನು ಮುರಿಯಲಿಕ್ಕೆ ಬ್ರಿಟಿಶರು ಸ್ವರಾಜ್ಯದ ಆಶೆ ಹಚ್ಚಿ ಪರ್ಯಾಯದಿಂದ ಒತ್ತಾಯಪಡಿಸುತ್ತಿರುವರೆಂದು ಹಲವರ ಗ್ರಹಿಕೆ ಯಾಯಿತು. ಸಮಾಜದ ಸುಪ್ತಸ್ವಾಭಿಮಾನವು ಸಮಾಜ ಸುಧಾರಣೆಗೆ ಅಡ್ಡ ಬಂದಿತು. ಸ್ವಾಭಿಮಾನಕ್ಕೆ ಧಕ್ಕೆ ಹಚ್ಚಿ ಜಾತಿಬಿಡಲು ಕೇಳಿದರೆ ಅದಕ್ಕೆ ಹೇಡಿಗಳ ಹೊರತು ಯಾರೂ ಒಪ್ಪರು.

ಇಂತಹ ಸಂಧಿಕಾಲದಲ್ಲಿ ಹಿಂದೂದೇಶದ ಜಾತಿಮತಗಳ ಐಕ್ಯವೇ

ವ್ಯವೆತ್ತಂತೆ ಮಹಾತ್ಮಾಜೀಯವರ ಅವತಾರವಾಯಿತು (೧೯೨೦). ಗೋಖಲೆ ಯವರನ್ನು ತಮ್ಮ ಗುರುಗಳೆಂದು ಸಾರಿದ್ದರಿಂದ ದೇಶದೊಳಗಿನ ಮಂದಗಾಮಿ ಧೀಮಂತರ ವಿರೋಧವು ಬಗೆಹರಿದಿತು. ಗೋಖಲೆಯವರು ಗುರುಗಳೆಂದು ಬಾಯಿಂದ ಹೇಳಿದರೂ ಕೃತಿಯಲ್ಲಿ ಉಗ್ರವಾದಿಗಳಿಗೆ ಮೆಚ್ಚಿಕೆಯಾಗುವಂತಹ ಕಾರ್ಯವನ್ನೇ ಇಟ್ಟುಕೊಂಡುದರಿಂದ ಅಸಹಕಾರದಿಂದ ಬ್ರಿಟಿಶರ ಆಡಳಿತವನ್ನು ನೆಲಕ್ಕುರುಳಿಸಬೇಕೆಂಬ ಆಂದೋಲನಕ್ಕೆ ತರುಣ ಕ್ರಾಂತಿಕಾರರೂ, ತಿಲಕ ಪಕ್ಷದ ತೀವ್ರಗಾಮಿಗಳೂ ಗಾಂಧೀಜಿಯವರ ಧ್ವಜದಡಿಯಲ್ಲಿ ಕೆಲಸ ಮಾಡಲು ಅಣಿಯಾದರು. ಗಾಂಧೀಯವರು ಬ್ರಾಹ್ಮಣರಲ್ಲನುದರಿಂದ, ಬ್ರಿಟಿಶರ ಆಡಳಿತ ವನ್ನು ನಾಶಮಾಡಿ ಸ್ವರಾಜ್ಯ ಸಂಪಾದಿಸಬೇಕೆಂಬ ಚಳವಳಿಯು, ಬ್ರಾಹ್ಮಣರ ಒಂದು ಸ್ವಾರ್ಥದ ಕುತಂತ್ರವೆಂಬ ಸಂದೇಹಕ್ಕೆ ಎಡೆಯೆ ಇದ್ದಿಲ್ಲ. ಆದುದರಿಂದ ಈ ಮೊದಲು ರಾಜಕೀಯ ಆಂದೋಲನಗಳಿಂದ ಸರಿದು ದೂರವಿದ್ದು ತಾವು ಕೇವಲ ರಾಜನಿಷ್ಠರೆಂದು ತೋರಿಸಿಕೊಂಡು ಬ್ರಿಟಿಶರ ಕೃಪಾಯಾಚನೆಗಾಗಿ ಅಂಗಲಾಚಿ ಬಾಯ್ಬಿಟ್ಟು ನಿಂತುಕೊಂಡಿದ್ದ ಅನೇಕ ಜಾತಿಮತಗಳ ಪಂಗಡಗಳು ಒಂದೊಂದಾಗಿ ಬಂದು ಗಾಂಧೀಜಿಯವರ ಚಳವಳಿಯಲ್ಲಿ ಧುಮುಕಲಾರಂಭಿಸಿ ದುವು. ಹರಿಜನರ ಮಗುವನ್ನೊಂದು ತಮ್ಮ ಮಗಳೆಂದು ಸಾಕಿ ಜೋಪಾನ ಮಾಡಿದ್ದರು. ತಮ್ಮನ್ನು ಹರಿಜನನೆಂದೇ ಕರೆದುಕೊಳ್ಳುತ್ತಿದ್ದು ಅವರಿಗಾಗಿ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನಗಳು ದೊರೆಯುವಂತೆ ಅವಿಶ್ರಾಂತ ಪರಿಶ್ರಮಪಡುತ್ತಿದ್ದುದರಿಂದ ಆ ವರ್ಗದ ನಿಷ್ಪಕ್ಷಪಾತಿ ಜನರಿಗೆ ಗಾಂಧೀಜಿ ಯವರಲ್ಲಿ ವಿಶ್ವಾಸವು ಹೆಚ್ಚಿತು. ರೈತರು ಮತ್ತು ಕೂಲಿಕಾರರ ಕಲ್ಯಾಣಕ್ಕಾಗಿ ಖೇಡಾ, ಚಂಪಾರಣ್ಯ ಮುಂತಾದ ಕಡೆಗಳಲ್ಲಿ ಈ ಮೊದಲೆ ಸತ್ಯಾಗ್ರಹ ಹೂಡಿ ಕಾರ್ಯಮಾಡಿದ್ದರಿಂದ ಬಡವರ ಪಕ್ಷಪಾತಿಯೆಂಬ ಬಗೆಗೆ ಯಾರಿಗೂ ಸಂದೇಹವೇ ಇದ್ದಿಲ್ಲ. ಸ್ತ್ರೀಯರ ವಿಷಯದಲ್ಲಿ 'ಉದಾರ ವಿಚಾರಗಳುಳ್ಳವರಾಗಿದ್ದರಲ್ಲದೆ ದೇಶಸೇವೆಯ ಆಂದೋಲನಗಳಲ್ಲಿ ಭಾಗ ವಹಿಸಲು ಇಂಬುಗೊಟ್ಟು ಸಮಾಜ ದಲ್ಲಿ ಅವರಿಗೆ ಗೌರವವನ್ನು ತಂದುಕೊಟ್ಟರು.

ದೇಶಭಕ್ತಿ, ಗೀತಾಪಠಣ, ಉಪವಾಸ, ಬ್ರಹ್ಮಚರ್ಯ, ಆಶ್ರಮವಾಸ ಮೊದಲಾದ ಇವರ ನಡೆವಳಿಯಿಂದ ಭಾವಿಕ ಹಿಂದುಗಳಿಗೆ ಗಾಂಧೀಜಿಯವರ ರೂಪದಲ್ಲಿ ಒಬ್ಬ ಮಹಾಯೋಗಿ, ತಪಸ್ವಿ, ಮಹಾತ್ಮನೆ ತಮ್ಮ ಉದ್ಧಾರಕ್ಕಾಗಿ

ಹುಟ್ಟಿರುವನೆಂಬ ಶ್ರದ್ಧೆಯುಂಟಾಯಿತು. ಇವರು ಗುಜರಾತಿಗಳಾದುದರಿಂದ ಫಾರ್ಸಿಗಳಿಗೆ ಇವರು ಅಪರಿಚಿತ ದೂರದ ಮನುಷ್ಯರೆನಿಸಲಿಲ್ಲ. ಅಲ್ಲದೆ ದಕ್ಷಿಣ ಆಫ್ರಿಕೆಯ ಆಂದೋಲನಗಳಲ್ಲಿ ಹಲವು ಫಾರ್ಸಿಗಳು ಇವರ ಪರವು ಮಿತ್ರರಾಗಿದ್ದರು. ಮುಂಬೈಯಲ್ಲಿಯೂ ಅಂತಹ ಗೆಳೆಯರು ದೊರೆತರು. ಅಹಿಂಸಾ ತತ್ವದ ಪ್ರಚಾರ, ಅಸ್ತೇಯ, ಅಪರಿಗ್ರಹಾದಿ ವ್ರತಗಳ ಆಚರಣೆಯು ಜೈನ, ಬೌದ್ಧ ಸಮಾಜವನ್ನು ಗಾಂಧೀಜಿಯವರತ್ತ ಆಕರ್ಷಿಸಿತು. ಅಹಿಂಸಾ ವ್ರತ, ಬೈಬಲ್ಲಿನ ಪಾರಾಯಣ ಮತ್ತು ಪತಿತೋದ್ಧಾರಕ್ಕಾಗಿ ಆತ್ಮದಂಡನೆಯನ್ನು ಮಾಡಿಕೊಳ್ಳುವ ವಿಧಾನದಿಂದ ಅನೇಕರು ಅಭಿನವ ಕ್ರಿಸ್ತನೆಂದೇ ಗಾಂಧೀಜಿಯನ್ನು ಕಂಡರು.

ಗಾಂಧೀಜಿಯವರ ನಿಸ್ಪೃಹವೃತ್ತಿ, ಸ್ಪಷ್ಟವಾದಿತ್ವ, ಅಭಯಸಿದ್ಧಿ, ತಮಗೆ ಸರಿದೋರಿದ್ದನ್ನು ಯಾರ ಹಂಗು, ಅಳಕು ಇಲ್ಲದೆ ಆಡಿ ತೋರಿಸುವ ಮನೋಧೈರ್ಯ, ನುಡಿದಂತೆ ನಡೆಯಲು ಮಾಡುವ ಪ್ರಾಮಾಣಿಕ ಪ್ರಯತ್ನಗಳನ್ನು ಕಂಡು ಪ್ರಪಂಚದೊಳಗಿನ ಸ್ವತಂತ್ರ ವಿಚಾರಿಗಳೆಲ್ಲರೂ ಸೋಜಿಗ, ಕೌತುಕಗಳಿಂದ ಇವರನ್ನು ಆದರಿಸಿದರು.

ಮಹಾತ್ಮಾಜಿಯವರ ಇಂಗ್ರೇಜಿಯ ಮೇಲಣ ಪ್ರಭುತ್ವವೂ ಇವರ ಕಾರ್ಯಸಾಧನೆಗೆ, ಇವರ ತ್ರಿಖಂಡ ಕೀರ್ತಿಗೆ ಒಂದು ಮುಖ್ಯ ಕಾರಣವಾಗಿದೆ. ಬರಿ ಭಾಷಾಪ್ರಭುತ್ವವು ಏನು ಮಾಡೀತು? ಸುಂದರವಾದ ಆ ಭಾಷೆಯಿಂದ ಅವರು ಉದಾತ್ತವಾದ ವಿಚಾರಗಳನ್ನು ಮಂಡಿಸುತ್ತಿದ್ದ ಆ ರೀತಿಯೂ ಅಷ್ಟೇ ಮನೋಹರವಾಗಿರುತ್ತಿತ್ತು. ಅಲ್ಲಿ ಆ ಭಾಷೆ ಹೆಚ್ಚು ರಮ್ಯವೊ, ವಿಚಾರದ ರೀತಿ ವಿಶೇಷರಮ್ಯವೊ ಎಂಬುದನ್ನು ಬಗೆದು ಭಾವಿಸಿದಷ್ಟೂ ಅದರ ಮಾಧುರ್ಯವು ಹೆಚ್ಚುಹೆಚ್ಚಾಗಿಯೆ ಮನಸ್ಸನ್ನು ಸೂರೆಗೊಳ್ಳುತ್ತಲಿತ್ತು. ಬರೆವಣಿಗೆಯಂತೆಯೆ ಇವರ ವಾದಸಾಮರ್ಥ್ಯವೂ ಅಸಾಧಾರಣವಾಗಿದ್ದಿತು. ಇವರೊಡನೆ ವಾದಕ್ಕೆಂದು ಬಂದವರು ಗಾಂಧೀಜಿಯವರ ಮಾತಿಗೇ ಕಟ್ಟುಬಿದ್ದು ಮರಳಿದ್ದುಂಟು. ಇವರ ಭೂಮಿಕೆಯು ಯಾವಾಗಲೂ ಅತ್ಯಂತ ಸೂಕ್ಷ್ಮ ಮತ್ತು ಗಹನವಾದುದಾಗಿರುತ್ತಿತ್ತು. ಎದುರಾಳಿಗೆ ಅದು ಬಹಳ ತೊಂದರೆಗೆ ಈಡು ಮಾಡುತ್ತಿತ್ತು. ವಿರೋಧಿಯನ್ನು ನಿರ್ಬಲ, ಮೂಕನನ್ನಾಗಿ ಮಾಡುವ ವಿಚಿತ್ರ ವಿಚಾರ ಬಿಂದುವನ್ನು ಇವರು ಎತ್ತುತ್ತಿದ್ದರು. ಇದು ಅಣುಬಿಂಬಿ

ಗಿಂತಲೂ ಹೆಚ್ಚು ಪರಿಣಾಮಕಾರಿಯಾದುದು. ಇಂತಹ ಅಮೋಘವಾದ ವಾಕ್‌ಶಕ್ತಿಯು ಇವರದು.

ಲೋಕಮಾನ್ಯ ತಿಲಕರಂತಹ ಕುಶಾಗ್ರಬುದ್ಧಿಯವರೂ ಇವರ ಮಾತಿನ ಮೊನೆಗೆ ಸಿಕ್ಕು ಹಣ್ಣಾದರು. ತಿಲಕರು ಅತುಲಧೀಮಂತರಾದರೂ ಅವರ ಮಾತಿನಲ್ಲಿ ಗಾಂಧೀಜಿಯು ನಯನಾಜೋಕು ಇದ್ದಿಲ್ಲ. ಗಾಂಧೀಜಿಮಾತಿನ ಹದನವೇ ಬೇರೆ. ಮೋತೀಲಾಲ ನೇಹರು, ದಾಸ, ಲಜಪತರಾಯ ಮೊದಲಾದವರು ಅನುಯಾಯಿಗಳಂತೆ ಹಿಂಬಾಲಿಸಬೇಕಾಯ್ತು. ಲಾರ್ಡ ರೀಡಿಂಗ, ಅಯರ್ವಿನ, ಕ್ರಿಪ್ಸ ಮೊದಲಾದ ಮಹಾಮಹಾ ರಾಜಕಾರಣಿಗಳು ಮಣಿದು ಹೋದರು. ಲಾರ್ಡ ವಿಲಿಂಗ್ಡನನು ಇವರ ಮಾತಿನ ಜಾಲದಲ್ಲಿ ಸಿಕ್ಕು ಬೀಳುವೆನೆಂಬ ಹೆದರಿಕೆಯಿಂದ ಗಾಂಧಿಜೀಯವರನ್ನು ಬೆಟ್ಟಿಗೇ ಬರಗೊಡಲಿಲ್ಲ. ಮೊದಲು ವಿರೋಧಿಸಿದ ಶ್ರೀನಿವಾಸ ಶಾಸ್ತ್ರಿ ಮುಂದೆ ಗಾಂಧಿಜೀ ಸ್ತುತಿಪಾಠಕರಾದರು; ಭಿನ್ನಾಭಿಪ್ರಾಯದ ಶ್ರೀನಿವಾಸ ಆಯ್ಯಂಗಾರ, ಎಂ. ಎಸ್. ರಾಯ ಪ್ರಭೃತಿಗಳು ಮೂಲೆಗುಂಪಾದರು; ಉಗ್ರವಾಗಿ ತೆಗಳಿದ ನ. ಚಿ. ಕೇಳಕರ ಪ್ರಭೃತಿಗಳು ಸ್ವಯಂದಗ್ಧರಂತೆ ಹತಪ್ರಭರಾದರು. ಉಜ್ವಲ ತರುಣ ಸುಭಾಸಚಂದ್ರನಿಗೆ, ಗಾಂಧಿಜೀಯವರ ಅವಕೃಪೆಯ ಮೂಲಕ ಭಾರತದಲ್ಲಿಯೆ ಕಾರ್ಯರಂಗವು ಇಲ್ಲದಾಯಿತು. ದೇಶಾಂತರ ವಾಸವು ಪಾಲಿಗೆ ಬಂತು. ದಿವ್ಯಜ್ಞಾನಿಯೆಂದು ಅವರ ಭಕ್ತರು ನಂಬಿರುವ ಅರವಿಂದ ಬಾಬುಗಳಿಗೂ ಒಳಗೊಳಗೇ ಪೀಕಲಾಡಬೇಕಾಯಿತು. ಗಾಂಧಿಜೀ, ಕೆಲವರನ್ನು ಮಾತಿನ ಸೂಕ್ಷ್ಮತೊಡಕಿನಲ್ಲಿ ಸಿಲುಕಿಸಿ ಮೆತ್ತಗೆಮಾಡಿದರು. ಕೆಲವರನ್ನು ದರ್ಶನಮಾತ್ರದಿಂದ ಗೆದ್ದರು; ಕೆಲವರನ್ನು ಒಮ್ಮೆಯೂ ಸಾರ್ವಜನಿಕವಾಗಿ ಉಲ್ಲೇಖಿಸದೆ ಅವರ ಬೆಲೆಯನ್ನು ಕಡಿಮೆ ಮಾಡಿದರು.

ಇಂತಹ ಈ ಅದ್ಭುತ ನೈತಿಕ ಪ್ರಭಾವದ ಮಹಾವ್ಯಕ್ತಿಯು ೨೫ ವರ್ಷಕ್ಕಿಂತ ಹೆಚ್ಚುಕಾಲ ಭಾರತವನ್ನು ಆಖಂಡವಾಗಿ ತೊಳಗಿ ಬೆಳಗಿತು. ಇದು ನಮ್ಮ ನಾಡಿನ ಮಹದ್ಭಾಗ್ಯ. ಅಪೂರ್ವ ಪೂರ್ವಪುಣ್ಯ. ಇವರ ಪುಣ್ಯದ ಬಲದಿಂದಲೆ ನೂರು ವರುಷಗಳಲ್ಲಿ ಆಗುವ ಕೆಲಸ ಇಪ್ಪತ್ತೈದು ವರುಷಗಳಲ್ಲಿ ನೆರವೇರಿತು. ಜಗತ್ತಿನ ಇತಿಹಾಸದಲ್ಲಿಯೆ ಅತ್ಯದ್ಭುತವಾದ, ಎಂದೂ ಕಂಡು

ಕೇಳದ ರಕ್ತಪಾತರಹಿತ ರಾಜ್ಯಕ್ರಾಂತಿಯಾಯಿತು. ಯುದ್ಧವಿಲ್ಲದೆ ಭಾರತವು ಸ್ವಾತಂತ್ರ್ಯವನ್ನು ಸಂಪಾದಿಸಿತು !

ಭಾರತಕ್ಕೆ ಸ್ವರಾಜ್ಯವನ್ನು ಸಂಪಾದಿಸುವಲ್ಲಿ ಗಾಂಧಿಜೀಯವರು ಗೆದ್ದಿದ್ದರೂ ಪಾಕಿಸ್ತಾನವನ್ನು ನಿರ್ಮಿಸುವುದರಲ್ಲಿ ಬ್ರಿಟಿಶರ ಕುಟಿಲ ತಂತ್ರದ ವಿಜಯವಾಗಿದೆ. ಮಹಾತ್ಮಾಜೀಯವರು ಭಾರತದ ಐಕ್ಯದ ಮೂರ್ತಿಮಂತ ಪ್ರತೀಕವಾಗಿದ್ದರೂ ಮುಸಲ್ಮಾನರ ಧರ್ಮಾಂಧತೆ ಸ್ವಜಾತಿಯ ಮಿತಿಮೀರಿದ ಸ್ವಾರ್ಥವು ಗಾಂಧಿಯವರ ಮಹತ್ವನ್ನು ಸರಿಯಾಗಿ ಅರಿತುಕೊಳ್ಳಲು ಅಡ್ಡ ಬಂದಿತು. ಮುಸಲ್ಮಾನರು ೧೯೨೦-೨೧ರ ಅಸಹಕಾರದಲ್ಲಿ ಖಿಲಫತ ಚಳವಳಿಯ ನಿಮಿತ್ತದಿಂದ ಹಿಂದೂ ಜನರೊಡನೆ ಕೆಲಕಾಲ ಒಂದುಗೂಡಿ ಕೆಲಸ ಮಾಡಿದುದೇನೊ ನಿಜ. ಆದರೆ ಮುಂದೆ ಬೇಗನೆ ಗಾಂಧಿಜಿಯವರಿಂದ ಸಿಡಿದು ದೂರಸರಿದವರು ದಿನ ದಿನಕ್ಕೂ ದೂರ ದೂರವೆ ಹೋದರು. ಭರತ ಖಂಡವನ್ನು ತುಂಡರಿಸುವ ಹಟಹಿಡಿದು ಅದರಲ್ಲಿ ಯಶಸ್ವಿಯಾದರು. ಪಾಕಿಸ್ತಾನವನ್ನು ಸಂಪಾದಿಸಿದರು.

ಬಹುಸಂಖ್ಯಾಕ ಮುಸಲ್ಮಾನರು ಪಾಕಿಸ್ಥಾನದಲ್ಲಿ ಒಳಗೊಂಡುದರಿಂದಲೂ ಪಾಕಿಸ್ಥಾನವು ಒಂದು ಸ್ವತಂತ್ರದೇಶವೆಂದು ಪರಿಗಣಿಸಲ್ಪಟ್ಟುದರಿಂದಲೂ, ಇತ್ತ ಹಿಂದುಸ್ತಾನದಲ್ಲಿ ಉಳಿದ ಮುಸಲ್ಮಾನರು ಬಹುಮಟ್ಟಿಗೆ ಅನಾಥರಾದರು. ಪಾಕಿಸ್ತಾನದಲ್ಲಿ ಮುಸಲ್ಮಾನ ತಲೆತಿರುಕರು ಹಿಂದುಗಳ ಮೇಲೆ ನಡಸುವ ಅತ್ಯಾಚಾರಗಳ ಸೇಡು ಇಲ್ಲಿಯ ಮುಸಲ್ಮಾನರ ಮೇಲೆ ತೀರುವ ಲಕ್ಷಣಗಳು ತೋರಲಾರಂಭಿಸಿದುವು. ಆದರೆ ಮುಯ್ಯಕ್ಕೆ ಮುಯ್ಯಿ ತೀರಿಸಲಾಗದು. ಇದು ಹೀನಮಾರ್ಗವೆಂದು ಮಹಾತ್ಮಾಜೀಯವರು ಮುಸಲ್ಮಾನರ ಸಂಕ್ಷಣೆಗಾಗಿ ತಮ್ಮ ಜೀವವನ್ನೆ ಪಣಕ್ಕೆ ಹಚ್ಚಿದರು. ಅದಕ್ಕಾಗಿ ಉಪವಾಸವನ್ನು ಕೈಕೊಂಡರು. ಉಪವಾಸದಲ್ಲಿಯೇ ಎಲ್ಲಿ ಅವರ ಕೊನೆಯಾಗುವುದೆಂದು ಉಂಟಾಗಿದ್ದ ಹೆದರಿಕೆಯು ದೂರವಾದರೂ ಉಪವಾ-ಸದ ತರುವಾಯ ಸ್ವಲ್ಪದಿನಗಳಲ್ಲಿಯೆ ಓರ್ವ ಅತ್ಯಾಚಾರಿ ದುರಾತ್ಮ ಹಿಂದುವೆ ಮಹಾತ್ಮರ ಕೊಲೆಮಾಡಿದನು. ಮುಸಲ್ಮಾನರ ಮೇಲಣ ರೊಚ್ಚನ್ನು ಗಾಂಧಿಜೀಯವರ ಮೇಲೆ ತೀರಿಸಿದನು ! ಮುಸಲ್ಮಾನರಿಗಾಗಿ ಗಾಂಧಿಜೀ ತಮ್ಮ ಆತ್ಮಾಹುತಿಯನ್ನಿತ್ತರು. ಆಗ ಮುಸಲ್ಮಾನರ ಬುದ್ಧಿಗೆ ಹಿಡಿದಮಂಕ.

ಸ್ವಲ್ಪ ತಿಳಿದಿತು. ಗಾಂಧಿಜೀಯವರೇ ತಮ್ಮ ನಿಜವಾದ ಹಿತಕರ್ತರೆಂದೂ ಜಿನ್ನಾರ ಮಾತುಕೇಳಿ ತಾವು ಪಾಕಿಸ್ತಾನಕ್ಕಾಗಿ ಕೂಗಾಟದೊಂಬಿಗಳಲ್ಲಿ ಸೇರಿ ತುಂಬ ಹಾನಿಮಾಡಿಕೊಂಡುದಾಗಿಯೂ ಬಾಯ್ಬಿಟ್ಟು ಆಡತೊಡಗಿದರು.

ಮಹಾತ್ಮಾಜೀಯವರು ರಾಜಕೀಯ ರಂಗದಲ್ಲಿ ದೃಢವಾಗಿ ನಿಂತಿರುವ ವರೆಗೂ ಹಿಂದೂಸಮಾಜದ ಐಕ್ಯದ ವಿಷಯಕ್ಕೆ ಯಾರಿಗೂ ಎಳ್ಳಷ್ಟು ಸಂದೇಹವೆ ಉಂಟಾಗಲಿಲ್ಲ. ಹಿಂದೂಸಮಾಜ ಸಂಘಟನೆಯೆ ಮಗ್ಗುರಿ ಯಾಗಿದ್ದ ಹಿಂದೂಮಹಾಸಭೆಯು ಕೂಡ ಗಾಂಧಿಯವರ ಪ್ರಭಾವದ ಮುಂದೆ ನಿಸ್ತೇಜವಾಯಿತು. ಹಲವು ಠರಾವು ಮಾಡಿ ಸಾಧಿಲಾರದ ಜಾತೀಯ ಐಕ್ಯವನ್ನು ಮಹಾತ್ಮರು ಆ ವಿಷಯಕ್ಕೆ ಹೆಚ್ಚೇನೂ ಆಡದೆಯೆ ಮಾಡ ಬಿಟ್ಟರು! ರಾಷ್ಟ್ರೀಯ ಮಹಾಸಭೆಗಳು ಜರುಗಿದಲ್ಲೆಲ್ಲ ಸಹಪಂಕ್ತಿಗಳು ಜಾತಿಭೇದವಿಲ್ಲದೆ ನಡೆದುವು. ಮಹಾತ್ಮಾಜೀಯವರ ಆಶ್ರಮವೆಂದರೆ ಜಾತೀಯ ಐಕ್ಯದ ಪ್ರಯೋಗಶಾಲೆಯೆ ಆಗಿದ್ದಿತು. ಮಹಾತ್ಮರ ಆಶೀರ್ವಾದ ಪಡೆದು ಹಲವು ಅಂತರ್ಜಾತೀಯ ವಿವಾಹಗಳು ಆದುವು. ಪಶ್ಚಿಮ ಪಂಜಾಬ ಪೂರ್ವ ಬಂಗಾಲಗಳಲ್ಲಿ ಮುಸಲ್ಮಾನರ ಒತ್ತಾಯಕ್ಕೆ ಒಳಗಾದ ಲಕ್ಷಾವಧಿ ಸ್ತ್ರೀಪುರುಷರನ್ನು ಮರಳಿ ಹಿಂದೂ ಧರ್ಮಕ್ಕೆ ಬರಮಾಡಿಕೊಂಡರು. ಅಸ್ಪೃಶ್ಯ ರಿಗೆ ಸಮಾಜದಲ್ಲಿ ಸ್ಪೃಶ್ಯರೊಡನೆ ಸಮಾನಸ್ಥಾನವನ್ನು ಕೊಡಿಸಿದರು. ಹಿಂದುತ್ವರಕ್ಷಣೆಯೆ ತಮ್ಮ ಏಕಮೇವ ಆದ್ಯಕರ್ತವ್ಯವೆಂದು ಬಢಾಯಿ ಹೇಳುವ ಸಾವರಕರ ಪ್ರಭೃತಿಗಳು, ನವಕಾಲಿಯ ಹಿಂದುಗಳ ಹತ್ಯಾಕಾಂಡ ವನ್ನು ಮುಸಲ್ಮಾನರ ವಿಷಯಕ್ಕೆ ಇನ್ನಷ್ಟು ದ್ವೇಷವನ್ನು ಹೆಚ್ಚಿಸುವ ವಿಘಟನಾತ್ಮಕ ಕೆಲಸಕ್ಕೇ ಬಳಸಿಕೊಂಡರಲ್ಲದೆ, ಅಲ್ಲಿ ಗೋಳಾಡುವ ಜನರನ್ನು ಸಂತಯಿಸಿ, ಅವರಿಗೆ ಆಪತ್ತಿನಿಂದ ಹೊರಬೀಳುವ ದಾರಿಯನ್ನು ತೋರಲು ಒಬ್ಬರೂ ಮುಂದೆ ಬರಲಿಲ್ಲ! ಆದರೆ ಮಹಾತ್ಮಾಜೀಯವರು ತಮ್ಮ ಬೇರೆ ಮಹತ್ವದ ಕೆಲಸಗಳಿದ್ದರೂ ಅವನ್ನೆಲ್ಲ ಬದಿಗಿರಿಸಿದರು. ನವಕಾಲಿಯ ಆರ್ತರ ದುಃಖಗಳನ್ನು ಪ್ರತ್ಯಕ್ಷವಾಗಿ ಅರಿತುಕೊಂಡು ಅವರಿಗೆ ನೆರವಾಗುವು ದಕ್ಕಾಗಿ ಅತ್ತಕಡೆಗೆ ಧಾವಿಸಿದರು. ಆ ಹಣ್ಣು ಮುಪ್ಪಿನಲ್ಲಿಯೂ ಹರೆಯದವ ರನ್ನು ನಾಚಿಸುವ ಉತ್ಸಾಹದಿಂದ ಕೊಳ್ಳೆಹೋದ ಆ ಪ್ರದೇಶವನ್ನು ಕಾಲು ನಡಿಗೆಯಿಂದ ಸುತ್ತಿದರು! ಹಿಂದೂಗಳು ಒಳಭೇದಗಳನ್ನು ಮರೆತು ಒಂದೇ

ಕುಲದವರಂತೆ ಕೂಡಿ ಬಾಳುವ ಅವಶ್ಯಕತೆಯನ್ನು ಜನರಿಗೆ ಮನಗಾಣಿಸಿ ಕೊಟ್ಟರಲ್ಲದೆ ಹಿಂದೂ-ಮುಸಲ್ಮಾನರ ಐಕ್ಯದ ಹೊಸತೊಂದು ಮಂತ್ರವನ್ನು ಕಂಡುಹಿಡಿದು ಅದರಲ್ಲಿ ಅದೆಷ್ಟೊ ಸಿದ್ಧಿಯನ್ನೂ ಪಡೆದರು.

ಅಲ್ಲಾ, ಹರಿ-ಹರಾದಿ ಹೆಸರುಗಳು ಬೇರೆಯಾದರೂ ಮೂಲ ವಸ್ತುವು ಒಂದೇ; ದೇವರು ಒಬ್ಬನೇ, ಎಂಬ ತತ್ವವು ಗಾಂಧೀಜಿಯವರು ಅನುದಿನವೂ ನಡೆಸುತ್ತಿದ್ದ ಸಾರ್ವಜನಿಕ ಪ್ರಾರ್ಥನೆಗಳಿಂದ ಎಲ್ಲೆಡೆಗೂ ಪ್ರಚಾರಗೊಂಡಿತು. ಉಪನಿಷತ್ತು, ಗೀತೆ ಮೊದಲಾದ ಪುರಾತನ ಶ್ರೇಷ್ಠ ಗ್ರಂಥಗಳ ಬಗೆಗೆ ಶ್ರದ್ಧೆಯು ನೆಲೆಗೊಂಡಿತು. ಹಿಂದೂ ಎನಿಸಿಕೊಳ್ಳಲು, ಬ್ರಿಟಿಶರ ಆಳಿಕೆಯ ಆರಂಭಕಾಲದಲ್ಲಿ ನಾಚಿಕೆಯಿಂದ ಸಣ್ಣಾಗುತ್ತಿದ್ದ ಜನಾಂಗದವರೆ, ಗಾಂಧೀಜಿ ಯವರ ಮಹಿಮೆಯ ಪ್ರಭಾವದಿಂದ ಉಂಟಾದ ವಾತಾವರಣದಲ್ಲಿ, ಬ್ರಿಟಿಶರ ಆಳಿಕೆಯ ಕೊನೆಗಾಲದಲ್ಲಿ, ಹಿಂದುವೆಂದು ಹೇಳುವಲ್ಲಿ ಹೆಮ್ಮೆಯಿಂದ ಹಿಗ್ಗು ತ್ತಿದ್ದರು. ಮಹಾತ್ಮಾಜಿಯವರು ಹಿಂದೂಧರ್ಮದ ತಿರುಳೆನಿಸಿರುವ ಅಭಯ, ಸತ್ಯ, ಅಹಿಂಸಾ, ತಪ ಮೊದಲಾದ ಗುಣಗಳನ್ನು ತಮ್ಮಲ್ಲಿ ಸಂಪೂರ್ಣವಾಗಿ ಅಳವಡಿಸಿಕೊಂಡು ಈ ಧರ್ಮವು ಮಾನವ ಕುಲದ ಉದ್ಧಾರಕ್ಕೆ ಹೇಗೆ ಸಹಾಯಕ ವಾಗಬಲ್ಲದೆಂಬುದನ್ನು ತಮ್ಮ ಆಚರಣೆಯಿಂದ ಲೋಕಕ್ಕೆ ಮನಗಾಣಿಸಿ ಕೊಟ್ಟರು. ಜಗತ್ತಿನಲ್ಲಿ ಹಿಂದೂಧರ್ಮಕ್ಕೆ, ಹಿಂದೂದೇಶಕ್ಕೆ ಮರ್ಯಾದೆಯನ್ನು ತಂದುಕೊಟ್ಟರು. ಆದರೇನು ?

ಆದರೇನು ? ಇದೆಲ್ಲವೂ ಆ ಯುಗಪುರುಷನು ಸಂಪಾದಿಸಿದ ಯಶಸ್ಸು. ತಾನು ಸಂಪಾದಿಸಿದ ಯಶಸ್ಸನ್ನು ತನ್ನ ದೇಶಬಾಂಧವರಿಗೂ ಹಂಚಿ ಅವರ ಬೆಲೆಯನ್ನೂ ಹೆಚ್ಚಿಸಿದ್ದು ನಿಜ. ಆದರೆ ಅದರಿಂದ ಈ ಜನಗಳ ನಿಜವಾದ ಬೆಲೆ ಹೆಚ್ಚಿದಂತಾಗಲಿಲ್ಲ. ಅಯಸ್ಕಾಂತದ ಸಂಪರ್ಕದಿಂದ ಕಬ್ಬಿಣದಲ್ಲೂ ಕೆಲಮಟ್ಟಿಗೆ ಆ ಶಕ್ತಿ ಬಂದಂತಾಗುವುದು. ಸಂಪೂರ್ಣ ಅಯಸ್ಕಾಂತವೇ ಆಗಬೇಕಾದರೆ ಕಬ್ಬಿಣವು ಇನ್ನೂ ಹೆಚ್ಚಿನ ಸಂಸ್ಕಾರ ಪಡೆಯಬೇಕು. ಮಹಾತಾಜಿಯವರು ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದಾರೆ. ನಾವು ಅದನ್ನು ಅರ್ಥವರಿತು ಆಚರಿಸಿ ಅಳವಡಿಸಿಕೊಳ್ಳುವ ಕೆಲಸವು ಇನ್ನೂ ಆಗಬೇಕಾಗಿದೆ. ಇದಕ್ಕೆ ನಾವು ಸಿದ್ಧರಿರುವೆವೊ ?

ಜಾತೀಯ ಒಕ್ಕಟ್ಟು ಮಹಾತ್ಮಾಜಿಯವರ ನೇತೃತ್ವದಲ್ಲಿ ಕೈಗೂಡಿದಂತೆ ಭಾಸವಾಗಿತ್ತು. ಸ್ವರಾಜ್ಯ ಗಳಿಸಲು ಜಾತಿಯ ಐಕ್ಯವು ಎಷ್ಟು ಆವಶ್ಯಕ ವಾಗಿದ್ದಿತೊ ಅದಕ್ಕಿಂತಲೂ, ಅದನ್ನು (ಸ್ವರಾಜ್ಯವನ್ನು) ಉಳಿಸಿ ವೃದ್ಧಿಗೊಳಿಸಿ ಕೊಳ್ಳಲು ಜಾತಿಯ ಸಮನ್ವಯವು ಹೆಚ್ಚಾಗಿ ಬೇಕಾಗಿದೆ. ಜಾತಿಯ ತೊಡಕು ಬಿಡಿಸದೆ ಈಗ ಬಂದ ಸ್ವಾತಂತ್ರ್ಯವು ನಮಗೆ ಉಳಿಯಲಾರದು.

---

## ಸ್ವತಂತ್ರಭಾರತದ ರಕ್ಷಣೆಗೆ ಅಗತ್ಯವಾದ ರಾಷ್ಟ್ರೀಯ ಸೈನ್ಯವನ್ನು ನಾವು ನಿರ್ಮಾಣಮಾಡಬಲ್ಲೆವೆ ?

ಭಾರತವು ಬೇಗನೆ ಸ್ವತಂತ್ರವಾಗಲಿದೆಯೆಂಬುದರಲ್ಲಿ ಏನೂ ಸಂದೇಹವೆ ಇಲ್ಲ. ಆದರೆ ಕೆಲವು ಅಧಿಕಾರಿಗಳೂ ದೇಶಭಕ್ತರೂ ' ನಾವು ಸ್ವತಂತ್ರರಾಗಿದ್ದೇವೆ; ನಮ್ಮನ್ನು ತಡೆಗಟ್ಟುವವರಾರು ? ' ಎಂಬ ಆರ್ಭಟೆಯನ್ನು ಮಾಡುವುದುಂಟು. ಇದು ಸುಮ್ಮನೆ ಜನಸಾಮಾನ್ಯರನ್ನು ಹುರಿದುಂಬಿಸಲು ಎಬ್ಬಿಸಿದ ಹುಯಿಲು ಆಗಿದ್ದರೆ, ಅದರ ಬಗೆಗೆ ವಿಶೇಷ ಆಕ್ಷೇಪಣೆಯಿಲ್ಲ. ಹೀಗಲ್ಲದೆ ಇದು ನಿಜವಾದ ಸಂಗತಿಯೆಂದು ಯಾರಾದರೂ ಗ್ರಹಿಸಿದ್ದರೆ ಅದು ಸಂಪೂರ್ಣ ಸಂಭ್ರಮದ ಮಾತು; ಆನಂದದ ವಿಷಯವಲ್ಲವೆಂದು ಎಚ್ಚರಿಸದೆ ಗತಿಯಿಲ್ಲ. ಏಕೆಂದರೆ,

ಸ್ವತಂತ್ರರಾಷ್ಟ್ರವೆಂದೊಡನೆ, ಅದಕ್ಕೊಂದು ಸ್ವಂತದ ಸೈನ್ಯವು ಬೇಕು. ಪರಕೀಯರ ದಂಡನ್ನಿಟ್ಟುಕೊಂಡು ಯಾವ ರಾಷ್ಟ್ರವು ತಾನೆ ಸ್ವತಂತ್ರವೆನಿಸೀತು? ಅಥವಾ ಸ್ವತಂತ್ರವಾದೀತು ? ಆದುದರಿಂದ ಭಾರತವು ತನ್ನ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಲು 'ತನ್ನದೇ ಆದ ಒಂದು ದಂಡು ಬೇಕೆಂಬುದು ನಿಶ್ಚಿತವಾಯ್ತು. ಆ ದಂಡು ಈಗ ಎಲ್ಲಿದೆ ?

ಈಗಿರುವುದು ಬ್ರಿಟಿಷ್ ದಂಡು; ಮತ್ತು ಬ್ರಿಟಿಷರ ದಂಡು. ಬ್ರಿಟಿಷ್ ದಂಡು ಎಂದರೆ ಬ್ರಿಟನ್‌ರಿಂದಲೇ ಕೇವಲ ಆದುದು. ಇದನ್ನು ಬ್ರಿಟಿಷರು ಹಿಂತೆಗೆದೊಯ್ಯಲು ಒಪ್ಪಿದ್ದಾರೆ. ಬ್ರಿಟಿಷರ ದಂಡು ಎಂಬುದನ್ನು ರಾಷ್ಟ್ರೀಯ

ಸರಕಾರವು ತನ್ನ ಅಧಿಕಾರದಲ್ಲಿ ಭಾರತದ ದಂಡನ್ನಾಗಿ ಮಾರ್ಪಡಿಸಿಕೊಳ್ಳಬಹು ದೆಂದು ಈಗ ಎಣಿಸಲಾಗಿದೆ. ಈ ಬಗೆಯಾಗಿ ಮಾರ್ಪಟ್ಟ, ಮುಂಚಿನ ಬ್ರಿಟಿಷರ ದಂಡೇ, ನಮ್ಮ ಮೊದಲನೆಯ ರಾಷ್ಟ್ರೀಯ ಸೇನೆಯಾಗತಕ್ಕುದಿದೆ. ಆದರೆ,

ಇದು ನಿಜವಾಗಿಯೂ ನಮ್ಮ ರಾಷ್ಟ್ರೀಯ ಸೈನ್ಯವಾಗಿ ಮಾರ್ಪಡ ಬಹುದೆ? ಎಂಬ ಬಗೆಗೆ ಎರಡು ದೊಡ್ಡ ತೊಂದರೆಗಳು ನಮ್ಮ ಎದುರಿಗಿವೆ: ತಜ್ಞರ ಕೊರತೆಯು ಅಷ್ಟು ಮಹತ್ವದಲ್ಲ, ಸದ್ಯಕ್ಕೆ. ಏಕೆಂದರೆ ಇದು ಯುದ್ಧಕಾಲವಲ್ಲ. ಬೇರೆ ಬೇರೆ ದೇಶದ ಸಮರತಂತ್ರ ವಿಶಾರದರನ್ನು ಕೆಲಸಕ್ಕೆ ತಂದು ಅವರಿಂದ ನಮ್ಮ ನಾಡಿನ ದಂಡನ್ನು ಸಜ್ಜುಗೊಳಿಸಬಹು ದಾಗಿದೆ. ಈಗಲೆ ಬ್ರಿಟಿಷರ ಕೈಯಲ್ಲಿ ಯುದ್ಧ ಶಿಕ್ಷಣ ಪಡೆದು ಇರುವ ಸೈನ್ಯವು ಅನಾಯಾಸವಾಗಿ ನಮ್ಮ ರಾಷ್ಟ್ರೀಯ ಸರಕಾರಕ್ಕೆ ದೊರೆಯಬಹು ದಾದರೂ ಅದು ನಿಜವಾಗಿ ರಾಷ್ಟ್ರೀಯವಾಗುವುದಕ್ಕೆ ಒಂದು ತೊಡಕು ಇದೆ. ಈಗಿನ ಸೈನಿಕರಿಗೆ ಬ್ರಿಟಿಷ ಅಧಿಕಾರಿಗಳ ಕೈಕೆಳಗೆ ಕೆಲಸಮಾಡಿ ಅವರ ಅಪ್ಪಣೆ ಗಳನ್ನು ಪಾಲಿಸುವುದು ವೈಯುಂಡಿದೆ. ಇವರಲ್ಲಿ ಬಹುಜನರು, ಒಮ್ಮೆಲೆ ತಮ್ಮ ನಾಡಿನ ಮುಖ್ಯಾಧಿಕಾರಿಗಳ ಕೈಕೆಳಗಿನವರಾಗಲು ಮನಸ್ಸನ್ನು ಸಿದ್ಧ ಪಡಿಸುವುದಕ್ಕೆ ಸಂಕೋಚಪಟ್ಟುಕೊಳ್ಳುವ ಸಂಭವವು ಇದೆ. ಪರಕೀಯರಿಗೆ ವಿಧೇಯರಾಗಿ, ಅವರಿಂದ ಹೇಳಿಸಿಕೊಳ್ಳಲು, ಅನಿಸಿಕೊಳ್ಳಲು ನಮ್ಮ ಜನರಿಗೆ ಏನೂ ಎನಿಸುವುದಿಲ್ಲ ಆದರೆ ಅದೇ ತಮ್ಮವರ ಕೈಯಲ್ಲಿ ಕೆಳಗಿನವರಾಗಿ ದುಡಿಯಲು ಕುರಕುರಿ ಮಾಡುವರು. ಜಿಲ್ಹೆಯ ಕಲೆಕ್ಟರನು, ನ್ಯಾಯಾ ಧೀಶನು ಇಂಗ್ಲಿಷ ಮನುಷ್ಯನಿದ್ದಾಗ ಹುಮ್ಮಸದಿಂದ ಕೆಲಸ ಮಾಡುತ್ತಿದ್ದ ಕೈಕೆಳಗಿನ ಅಧಿಕಾರಿಗಳು ಆ ಸ್ಥಳದಲ್ಲಿ ಹಿಂದೀಯನು ಬರುತ್ತಲೆ ಬರಗ್ಯ ಮೋರೆ ಮಾಡಿದ, ಗೊಣಗಲಾರಂಭಿಸಿದ ಉದಾಹರಣಗಳು ಪ್ರತಿ ಜಿಲ್ಹೆಯ ಲ್ಲಿಯೂ ಸಿಕ್ಕುತ್ತವೆ. ಮುಲ್ಕಿ ಮತ್ತು ನ್ಯಾಯಖಾತೆಯಲ್ಲಿ ಕಂಡುಬಂದ ಈ ಮನುಷ್ಯ ಸ್ವಭಾವವೇ ದಂಡಿನಲ್ಲಿ ಇನ್ನೂ ಹೆಚ್ಚಿನ ಸ್ವರೂಪದಲ್ಲಿ ಅನು ಭವಕ್ಕೆ ಬಂದರೆ ಸೋಜಿಗವೇನು? ಈ ಕಾರಣದಿಂದ ಈ ವರೆಗೆ ಬ್ರಿಟಿಶ ಅಧಿ ಕಾರಿಗಳ ಅಪ್ಪಣೆಗಳಿಗೆ ಅಂಕಿತರಾಗಿರುವ ಸ್ವಭಾವವು ಬೆಳೆದುಕೊಂಡು ಬಂದ ಈಗಿನ ನಮ್ಮ ಸೈನ್ಯವು ನಿಜವಾದ ರಾಷ್ಟ್ರೀಯ ಸೈನ್ಯವಾಗಲು ಕೆಲವೊಂದು ಕಾಲಾವಧಿಯು ಬೇಕೆಂಬುದು ಸ್ಪಷ್ಟವಿದೆ.

ಇನ್ನು ನಿಜವಾಗಿ ಇದಕ್ಕೂ ವಿಶೇಷ ಮಹತ್ವದ ದೊಡ್ಡ ತೊಂದರೆಯೊಂದಿದೆ. ಅದರ ಅರಿವು ಕೂಡ ನಮ್ಮ ಜನಗಳಿಗೆ ಸಾಕಷ್ಟಿಲ್ಲ. ಮುಖಂಡರೆನಿಸಿಕೊಳ್ಳುವ ಹಲವು ಮಹನೀಯರಿಗೇ ಇದರ ಎಚ್ಚರವು ಇಲ್ಲದಿರುವಾಗ ಸಾಮಾನ್ಯ ಜನಗಳ ಮಾತೇನು?

'ತೊಲಗಿರಿ ಬ್ರಿಟಿಶರೇ, ಭಾರತ ಬಿಟ್ಟು ತೊಲಗಿರಿ' (Quit India) ಎಂದು ಉಚ್ಚರಿಸಿದೊಡನೆಯೇ ಬ್ರಿಟಿಶರು ಹಿಂದೀಯರಿಗೆ ಸೆರೆಮನೆಗೆ ಅಟ್ಟುತ್ತಿದ್ದರು; ಅವರೇ—ಅದೇ ಬ್ರಿಟಿಶ ಸರಕಾರವೇ ಈಗ ತಾವಾಗಿಯೆ 'ನಾವು ಭಾರತ ಬಿಟ್ಟು ತೊಲಗುವೆವು' ಎಂದು ಹೇಳುತ್ತಿರುವುದು ಸೋಜಿಗವಲ್ಲವೆ? ಕೈಗೆ ಸಿಕ್ಕ ಸಣ್ಣ ಒಡವೆ, ಮನೆ, ಹೊಲವನ್ನು ಬಿಟ್ಟುಕೊಡಬೇಕಾದರೆ ಮನುಷ್ಯನಿಗೆ ಅದೆಷ್ಟೋ ಕಷ್ಟವಾಗುವುದು; ಅದನ್ನು ತನ್ನ ಕೈಯಲ್ಲಿಯೇ ಉಳಿಸಿಕೊಳ್ಳಲು ತನಗೆ ಶಕ್ಯವಿರುವ ಎಲ್ಲ ಉಪಾಯಗಳೂ ಮುಗಿದ ಬಳಿಕ ನಿರುಪಾಯವಾಗಿ ಆ ವಸ್ತುವನ್ನು ಬಿಡುವುದುಂಟು. ಅಥವಾ ಸಾಧುವಾದ ಮನುಷ್ಯನು ತನಗೆ ಹೆರವರ ಪದಾರ್ಥವೇಕೆ ಎಂದು ತಾನೇ ಬಿಟ್ಟುಕೊಡುವನು. ಆದರೆ ಹೀಗೆ ತಾವಾಗಿಯೆ ಹಿಂದುಸ್ತಾನವನ್ನು ಬಿಟ್ಟು ತೊಲಗುವೆವೆಂದು ಹೇಳಲು ಬ್ರಿಟಿಶರೇನು ಧರ್ಮಾತ್ಮರೊ? ಅವರ ಈ ವರೆಗಿನ ಇತಿಹಾಸವು ಈ ಮಾತಿಗೆ ತೀರ ವಿಪರೀತವಾಗಿದೆ. ಬ್ರಿಟಿಶರು ಯಾವ ಮಾತನ್ನೂ ಸರಲವಾಗಿ ಆಡುತ್ತಿರುವುದಿಲ್ಲ. ಅವರಾಡುವ ನೇರವಾಗಿ ಕಾಣುತ್ತಿರುವ ಮಾತಿನ ಹಿಂದೆ ಏನೊಂದು ತಂತ್ರವು ಇದ್ದೇ ಇರುತ್ತದೆಂದು ಇತಿಹಾಸವು ಹೇಳುತ್ತದೆ. ಹಾಗಾದರೆ ಅವರು ತಾವು ಭಾರತದಿಂದ ಹೊರಟು ಹೋಗುವುದಾಗಿ ಹೇಳುವ ಮಾತಿನ ಹಿಂದೆ ಇರುವ ಕವಡು ಏನು?

ಭಾರತೀಯರು ತಮಗೆ 'ತೊಲಗಿ ಇಲ್ಲಿಂದ' ಎಂದು ಹೇಳುತ್ತಿರುವರಾದರೂ ತಮ್ಮನ್ನು ಇಲ್ಲಿಂದ ಅವರು ಬೇಗನೆ ಕದಲಿಸಲಾರರೆಂದು ಬ್ರಿಟಿಶರಿಗೆ ಚೆನ್ನಾಗಿಯೆ ಗೊತ್ತಾಗಿದೆ. ಈ ಮಾತನ್ನು ಅವರು ಮುಂಗಂಡಿದ್ದಾರೆ; ಮನಗಂಡಿದ್ದಾರೆ; ಎಂಬುದನ್ನು ಸೈಮನ್ ಕಮಿಶನ್ನಿನ ವರದಿಯಲ್ಲಿ ಬಂದ ಕೆಳಗಿನ ಅವತರಣಿಕೆಯಿಂದ ಸ್ಪಷ್ಟವಾಗಿ ಅರಿತುಕೊಳ್ಳಬಹುದಾಗಿದೆ.

The formation of an Indian National Army drawn from India as whole, in which Indian officers

will lead men who may be of different classes or races, in which member will recognise the rest as his comrade and in which public opinion will have general confidence is a task of the greatest possible difficulty.

—Siman Commission Report
Vol I. P. 977

ಇಡೀ ಹಿಂದುಸ್ತಾನದಿಂದ ಆಯ್ದುಕೊಂಡ, ಬೇರೆ ಬೇರೆ ಜಾತಿಸಂಗಡ ಅಥವಾ ಜನಾಂಗದ ಸೈನ್ಯಾಧಿಕಾರಿಗಳು ತಮ್ಮ ಸಂಗಡಿಗರೆಲ್ಲರನ್ನೂ ತಮ್ಮ ಸಮಾನ ಬಾಂಧವರೆಂದು ಬಗೆದು ಅವರನ್ನು ಹಾಗೆ ನಡಸಿಕೊಳ್ಳುವುದು ಸಾಧ್ಯವಾಗಿ ತೋರುವುದಿಲ್ಲ. ಅಲ್ಲದೆ ಇಂತಹ ಸೈನ್ಯದಲ್ಲಿ ಎಲ್ಲ ಜನತೆಯ ವಿಶ್ವಾಸವು ಸಾಕಷ್ಟು ಇದ್ದೀತೆಂದು ಬಗೆಯುವುದೂ ಕಷ್ಟ. ಆದುದರಿಂದ ಭಾರತಕ್ಕೊಂದು ರಾಷ್ಟ್ರೀಯ ಸೇನೆಯನ್ನು ನಿರ್ಮಿಸುವುದು ಅತ್ಯಂತ ಕಠಿಣ ವಾದ ಕಾರ್ಯವಾಗಿದೆಯೆಂದು, ಸೈಮನ್ ಶಿಷ್ಟಮಂಡಳದವರು ತಮ್ಮ ಅಭಿಪ್ರಾಯವನ್ನು ಈ ಮೊದಲೆ ಬರೆದಿಟ್ಟಿದ್ದಾರೆ!

ಹೀಗೆ ಭಾರತೀಯ ರಾಷ್ಟ್ರೀಯ ಸೈನ್ಯವೇ ಅಸಂಭವವಾದ ಬಳಿಕ ಬ್ರಿಟಿಷರನ್ನು ತೊಲಗಿಸುವುದೂ ಅಶಕ್ಯವೆಂದು ಅವರು (ಬ್ರಿಟಿಷರು) ಊಹಿಸಿದ್ದರೆ ಸೋಜಿಗವೇನು?

ಹಿಂದೂ-ಮುಸಲ್ಮಾನರ (ಲೀಗಿನವರ) ಶಿಕ್ಕಾಟವು ಅಖಂಡವಾಗಿ, ಅವ್ಯಾಹತವಾಗಿ ಉಳಿಯುವಂತೆ ಬ್ರಿಟಿಶ ರಾಜಕಾರಣಿಗಳು ಆಟವಾಡುತ್ತಿರುವರು. ಈ ಆಟವನ್ನು ನಡೆಯಗೊಡಬಾರದೆಂದು ಮಹಾತ್ಮಾಜಿಯವರೂ ನೇಹರುಗಳೂ ತಮ್ಮ ಅಂತಃಕರಣ ಶಕ್ತಿಯಿಂದ ಸಾವಿರಾರು ರಾಷ್ಟ್ರೀಯ ಮುಸಲ್ಮಾನರನ್ನು ಕಾಂಗ್ರೆಸ್ಸಿನ ಕಡೆಗೆ ಆಕರ್ಷಿಸಿದ್ದಾರೆ. ಅದರಿಂದ ಲೀಗಿನವರ ಶಕ್ತಿಯು ಎಷ್ಟೋ ಮಟ್ಟಿಗೆ ಕುಗ್ಗಿದೆ; ಲೋಕದಲ್ಲಿ ಲೀಗಿನ ಮರ್ಯಾದೆ ಗೇಡಾಗಿದೆಯೆಂಬುದು ನಿಜ.

ಆದರೂ ಲೀಗಿನ ಸರಕಾರವಿರುವ ಸಿಂಧ, ಬಂಗಾಲಗಳಲ್ಲಿ, ವಿಶೇಷತಃ ಬಂಗಾಲದಲ್ಲಿ ನವಕಾಲಿ ಶಿಪ್ಪೇರಾದಂತಹ ಭಯಂಕರ ಅನಾಹುತಗಳಾಗಿ

ಹಿಂದೂ ಜನರು ತುಂಬ ಕೇಡಿಗೆ ಈಡಾಗಬೇಕಾಯಿತು. ಇದರ ಸೇಡನ್ನು ಹಿಂದುಗಳು ಬಿಹಾರದಲ್ಲಿ ತೀರಿಸಿಕೊಳ್ಳಲು ದೊಂಬಿ ಎದ್ದರು. ಆಯ್ತು; ಇದರಿಂದ ಬ್ರಿಟಿಶರಿಗೆ ತುಂಬ ಹಿಗ್ಗು ! ಬ್ರಿಟಿಶರು ಹೂಡಿದ ಆಟದ ಫಲವಿದು. ದೊಂಬಿಮಾಡಿ ಜನರು ಅವರ ಜಾಲದಲ್ಲಿ ಬಿದ್ದಂತೆ ಆಯಿತೆಂದು ಮಹತ್ಮಾಜಿ ಮತ್ತು ಅಬ್ದುಲ್ಲ ಗಫರಖಾನರು ಹೇಳಿದುದು ತೀರ ಸರಿ.

ಏಕೆಂದರೆ ಕಲಕತ್ತೆ ಮೊದಲಾದ ಕಡೆಗೆ ಹಿಂದೂ ಮುಸಲ್ಮಾನರ ಕೋಲಾಹಲಗಳು ಆದಬಳಿಕ ಈ ಸಮಾಜದವರು ತಮ್ಮ ರಕ್ಷಣೆಗಾಗಿ ಗವ್ಹರ್ನರ ಮತ್ತು ವೈಸರಾಯರಿಗೆ ಮೊರೆ ಇಡಲಾರಂಭಿಸಿದರು ! ಶ್ರೀ ಶರಚ್ಚಂದ್ರ ಬೋಸರಂತಹರು ಕೂಡ ವೈಸರಾಯರನ್ನು ಬೆಟ್ಟಿಯಾಗಿ 'ಕಲಕತ್ತೆಗೆ ಬಂದು ಹಿಂದೂ ಜನರಿಗೆ ಆದ ಹಾನಿಯನ್ನು ನೋಡಿ ಹೋಗಿ' ಎಂದು ಕೇಳಿಕೊಂಡರು !

ಬ್ರಿಟಿಷರಿಗೆ ಬೇಕಾದುದೇ ಇದು ! ಸೈಮನ್ ವರದಿಯಲ್ಲಿ ಅವರು ಭವಿಷ್ಯ ನುಡಿದಂತೆಯೇ ಆಯಿತು. ಬ್ರಿಟನ್‌ರಿಗೆ ಅದೆಷ್ಟು ಹಿಗ್ಗು ಆಗಿರಲಿಕ್ಕಿಲ್ಲ?

ಆದರೆ ಮಹಾತ್ಮಾಜಿಯವರು ಮತ್ತು ಅಬ್ದುಲ್‌ಗಫ್ಫರಖಾನರು ಕೂಡಲೆ ನಮ್ಮ ಜನಗಳಲ್ಲಿ ಉಂಟಾದ ಬ್ರಿಟಿಶರಿಗೆ ಮೊರೆ ಇಡುವ ದೈನ್ಯ, ಹೀನ ಮನಸ್ಥಿತಿಯನ್ನು ತಡೆಹಿಡಿದರು. ನಮ್ಮಲ್ಲಿ ನಾವು ಎಷ್ಟೇ ಕಾದಾಡಲಿ, ಬ್ರಿಟಿಶರ ಮರೆಗೆ ನಿಂತು ಜೀವ ಬದುಕಿಸಿಕೊಳ್ಳುವುದು ಬೇಡ. ಈ ಬಗೆಯಾದ ನಾಚಿಕೆಗೇಡಿ ಬಾಳಿಗಿಂತಲೂ ಸಾವು ಮಿಗಿಲಾಗಿದೆ. ಹೊಡೆದಾಡಿದರೆ ನಾವೇ ಕಾದುವಾ. ಅದರಲ್ಲಿ ಹಿಂದುವು ಬದುಕಲಿ, ಅಥವಾ ಮುಸಲ್ಮಾನನು ಗೆದೆಯಲಿ, ಆದರೆ ಬ್ರಿಟಿಶನು ಮಾತ್ರ ನಡುವೆ ಬೇಡ, ಎಂಬ ಧೀರೋದಾತ್ತ ಮಂತ್ರೋಪದೇಶವನ್ನು ಮಾಡಿದರು. ಮತ್ತು ತಮ್ಮ ವೈಯಕ್ತಿಕ ತಪಸ್ಸಿನ ಪ್ರಭಾವದಿಂದ ಹಿಂದೂ ಮುಸಲ್ಮಾನರಿಗೆ ಸಕಾಲದಲ್ಲಿ ಎಚ್ಚರಿಸಿದರು. ಲೀಗಿನ ಸ್ವಾರ್ಥಿಗಳಲ್ಲಿ ಕೆಲವರನ್ನು ಬಿಟ್ಟರೆ ಮುಸಲ್ಮಾನರಲ್ಲಿ ರಾಷ್ಟ್ರೀಯ ವೃತ್ತಿಯ ಜನರು ಹೆಚ್ಚುತ್ತಲಿದ್ದುದು ಶುಭಸೂಚಕ ಸಂಗತಿಯಾಗಿದೆ.

ಆದರೆ ಹಿಂದೂ ಮುಸಲ್ಮಾನರ ರಾಜಕೀಯ ಒಪ್ಪಂದವಾದರೂ ರಾಷ್ಟ್ರೀಯ ಸೈನ್ಯ ನಿರ್ಮಾಣಕ್ಕೆ ಅದಿಷ್ಟೇ ಮಾತು ಸಾಲದು. ಅದಲ್ಲದೆ ಹಿಂದೂ ಎಂಬ ಸ್ಥೂಲ ಹೆಸರಿನ ಕೆಳಗೆ ಮರೆಯಲ್ಲಿ ಹುದುಗಿಕೊಂಡಿರುವ

ಹಲವು ಪಂಗಡಗಳಲ್ಲಿ ಒಳಗಿನ ಜಾತಿದ್ವೇಷವು ಕಡಿಮೆ ಉಗ್ರ ಸ್ವರೂಪದಲ್ಲಿಲ್ಲ. ಇವೆಲ್ಲವೂ ಜೀವಂತವಾಗಿರುವಾಗ ರಾಷ್ಟ್ರೀಯ ಸೈನ್ಯನಿರ್ಮಾಣವಾಗುವುದು ಸಾಧ್ಯವೆ?

ರಾಷ್ಟ್ರೀಯ ಸೈನ್ಯ ನಿರ್ಮಾಣದ ಕೆಲಸವು ಏಕೆ ದುಃಸಾಧ್ಯವೆಂಬುದನ್ನು ತಿಳಿಯಲು ನಮ್ಮ ನಾಡಿನ ಪೋಲೀಸಪಡೆಯೊಳಗಿನ ತೊಡಕುಗಳನ್ನು ಅರಿತುಕೊಂಡರೂ ಕೆಲಮಟ್ಟಿಗೆ ಗೊತ್ತಾಗುವಂತೆ ಇದೆ.

ಈಗ ಹಿಂದೂ ಮುಸಲ್ಮಾನರ ಕಾದಾಟಗಳು ನಡೆದಿವೆ. ಅಲ್ಲಿ ಮುಂಬೈಯಂತಹ ಸ್ಥಳದಲ್ಲಿ ಬರುತ್ತಿರುವ ಅನುಭವವು ನಮ್ಮ ಕಣ್ದೆರೆಯಲು ಸಾಕಷ್ಟು ತೀಕ್ಷ್ಣವಾಗಿಯೇ ಇದೆ. ಮುಸಲ್ಮಾನರ ಓಣಿಯಲ್ಲಿ ಹಿಂದೂ ಸಿಪಾಯಿಯನ್ನು ಕಾವಲಿಗೆ ಇರಿಸಿದರೆ ಹಲವು ಬಾರಿ ಆತನು ತನ್ನ ಪ್ರಾಣಭಯಕ್ಕಾಗಿ ಅಲ್ಲಿ ಹೋಗುವುದನ್ನೇ ತಪ್ಪಿಸುವನು. ಮುಸಲ್ಮಾನನ್ನು ಇರಿಸಿದರೆ ಆತನು ತನ್ನ ಬಾಂಧವನಾದ ಅಪರಾಧಿಯನ್ನು ಹಿಡಿದು ಬಂಧಿಸುವಲ್ಲಿ ಅಷ್ಟು ದಕ್ಷತೆಯನ್ನು ವಹಿಸುವುದಿಲ್ಲ.

ಕರ್ಣಾಟಕದಲ್ಲಿ ಹಿಂದಕ್ಕೆ ವ್ಯಾಸನ ತೋಟಿನ ಗಲಾಟೆಯ ಕಾಲದಲ್ಲಿ ಬಂದ ಅನುಭವವೂ ಇದಕ್ಕೆ ಬೇರೆಯಾಗಿಲ್ಲ. ವೀರಶೈವ ಮತ್ತು ವೀರವೈಷ್ಣವರ ಈ ಜಗಳದಲ್ಲಿ ಶಾಂತಿ ಸ್ಥಾಪನೆಗೆ ಮಹಮ್ಮದೀಯ ಫೌಜದಾರರನ್ನು ನೇಮಿಸುವ ಹೊತ್ತು ಬರುತ್ತಲಿತ್ತು.

ಈಗ ಹಿಂದೂ-ಮುಸಲ್ಮಾನರ ಜಗಳಗಳಲ್ಲಿ ಬ್ರಿಟಿಶ ಸೈನಿಕರನ್ನು ತರುವ ಪ್ರಸಂಗವು ಬರುತ್ತಲಿದೆ. ಆದರೆ ಬ್ರಿಟಿಶ ದಂಡಾಳಿಗೆ, ಇವೆರಡೂ ಸಮಾಜಗಳು ಕಾದಾಡಿ ಹಗೆತನ ನಡೆಸಿದರೇನೆ ತಮ್ಮ ಇಲ್ಲಿಯ ರಾಜ್ಯವು ಭದ್ರವಾಗಿ ಇರುವುದೆಂಬ ಮನವರಿಕೆಯಾಗಿರುವುದರಿಂದ ಅವನು ಈ ಜಗಳದಲ್ಲಿ ಮನಃಪೂರ್ವಕವಾಗಿ ಕೈಹಾಕುವದಿಲ್ಲವೆಂಬ ಮಾತನ್ನು ಕಲಕತ್ತೆಯ ದೊಂಬಿಯ ನ್ಯಾಯ ವಿಚಾರಣೆಯಲ್ಲಿ ಒಬ್ಬರು ಆಡಿತೋರಿಸಿದ್ದಾರೆ. ಬ್ರಿಟಿಶರು ಒಮ್ಮೆ ಹಿಂದುಗಳ ಕಡೆಗೂ ಇನ್ನೊಮ್ಮೆ ಮುಸಲ್ಮಾನರ ಕಡೆಗೂ ಒಲಿದಂತೆ ತೋರಿಸಿ ಇವರಿಬ್ಬರ ನಡುವಿನ ಜಗಳಗಳು ನಿರಂತರವಾಗಿ ಉಳಿಯುವಂತೆ ಕೈವಾಡ ನಡೆಸುತ್ತಾರೆ.

ನಮ್ಮ ಹಿಂದೂ ಸಮಾಜದಲ್ಲಿ ಹರಿಜನ, ಬ್ರಾಹ್ಮಣ, ಲಿಂಗವಂತ, ರಡ್ಡಿ, ಬೇಡ, ಕುರುಬ, ದಾಸ, ಶೀಖ, ಮೊದಲಾದ ಜಾತಿ ಭೇದಗಳು ತೀಕ್ಷ್ಣವಾಗಿ ಜೀವಂತವಾಗಿರುವ ವರೆಗೆ ರಾಷ್ಟ್ರೀಯ ಸೈನ್ಯವು ಕನಸಿನೊಳಗಿನ ರಾಜ್ಯವೇ ಸರಿ. ಇವರಲ್ಲಿ ತಾವು ಹೆಚ್ಚಿನವರು, ತಾವು ಹೆಚ್ಚಿನವರೆಂಬ ಸೆಣಸಾಟವಿರುವ ವರೆಗೆ ರಾಷ್ಟ್ರೀಯ ಸೈನಿಕರಾಗಲು ಇವರು ಅರ್ಹರಾಗುವುದಿಲ್ಲ. ಧರ್ಮಕ್ಕೆ ಪ್ರಥಮ ಸ್ಥಾನವನ್ನು ಕೊಡುವವನು ರಾಷ್ಟ್ರೀಯ ವೃತ್ತಿಯನ್ನು ಗೌಣವೆಂದು ಭಾವಿಸುವುದು ಸಹಜ. ಆದಕಾರಣ ಜಾತೀಯ ದೊಂಬಿಗಳನ್ನು ಶಾಂತಮಾಡಲು ಇಂತಹ ಸೈನಿಕರು ನಿರುಪಯುಕ್ತ. ದೇಶದೊಳಗಿನ ಶಾಂತಿ ರಕ್ಷಣೆಗೆ ನಿರುಪಯುಕ್ತವಾದ ಸೈನ್ಯವಿದ್ದ ದೇಶವು ಎಂದೂ ಸ್ವಾತಂತ್ರ್ಯ ಸುಖವನ್ನು ಅನುಭವಿಸಲಾರದು. ಇಂತಹ ದೇಶವು ಯಾವಾಗಲೂ ಪರಕೀಯರಿಗೆ ಅಂಕಿತವಾಗಿಯೆ ಉಳಿಯದೆ ಗತಿಯಿಲ್ಲ.

ಆದುದರಿಂದ ಜಾತಿ, ಧರ್ಮಗಳನ್ನು ಕಡೆಗಣಿಸಿ ( ಅದಕ್ಕೆ ದ್ವಿತೀಯ ಸ್ಥಾನಕೊಟ್ಟು ) ರಾಷ್ಟ್ರೀಯತ್ವಕ್ಕೇ ಪ್ರಥಮ ಸ್ಥಾನವನ್ನು ಕೊಡುವ ವೃತ್ತಿಯ ಸೈನಿಕರಿಂದ ಸಿದ್ಧವಾದ ನಾಡಪಡೆ ( ರಾಷ್ಟ್ರೀಯ ಸೈನ್ಯವು ) ಇಲ್ಲದೆ ಯಾವ ದೇಶವೂ ಸ್ವಾತಂತ್ರ್ಯಕ್ಕೆ ಅರ್ಹವಾಗಲಾರದು. ಎಲ್ಲಿಯವರೆಗೆ ನಾಡಿನಲ್ಲಿ ಜನರು, ತಮಗೆ ತಮ್ಮ ಧರ್ಮ, ಜಾತಿ ಇದುವೆ ಮೊದಲು, ರಾಷ್ಟ್ರವು ಹಿಂದುಗಡೆ ಎಂಬ ನಂಬುಗೆಯುವರೇ ಹೆಚ್ಚಾಗಿ ಇರುವರೊ ಅಲ್ಲಿಯ ವರೆಗೆ ರಾಷ್ಟ್ರೀಯ ಸೈನ್ಯವು ತಲೆಯೆತ್ತುವುದು ಅಸಂಭವವು. ರಾಷ್ಟ್ರೀಯ ಸೈನ್ಯವಿಲ್ಲದೆ ದೇಶವು ತನ್ನ ಬಿಡುಗಡೆಯನ್ನು ಮಾಡಿಕೊಳ್ಳಲಾರದು.

ಈ ಕಾರಣದಿಂದಲೇ, ಜಾತಿಯು ಬೇಕೆಂದರೆ ಸ್ವಾತಂತ್ರ್ಯವಿಲ್ಲ; ಸ್ವಾತಂತ್ರ್ಯವು ನಮ್ಮ ಗುರಿಯೆಂದರೆ ಜಾತಿಯನ್ನು ಬಿಡದೆ ಗತಿಯಿಲ್ಲ.

—ಜ. ಕ. ಎಪ್ರೀಲ, ೧೯೪೭

ಆದರೆ ಈಗ ಬ್ರಿಟಿಶರು ಭಾರತವನ್ನು ವಿಚ್ಛೇದಿಸಿ ಪಾಕಿಸ್ತಾನವನ್ನು ಸ್ಥಾಪಿಸಿದ್ದಾರೆ; ಹಿಂದುಸ್ತಾನವು 'ಸ್ವತಂತ್ರ' ವೆಂದು ಒಪ್ಪಿಸಿಕೊಂಡಿದ್ದಾರೆ. ಬ್ರಿಟಿಶ ಸೈನ್ಯವೂ ಸಂಪೂರ್ಣವಾಗಿ ಹೊರಟು ಹೋಗಿದೆ. ಆದರೂ ನಾವು ಸ್ವತಂತ್ರರೆಂದು ಹೇಳುವುದು ಸಾಹಸದ ಮಾತು.

ಏಕೆಂದರೆ ಸೈನ್ಯದಲ್ಲಿ ರಾಷ್ಟ್ರೀಯತೆಯು ಬೇರೂರಲು ಇನ್ನೂ ಕೆಲವು ಕಾಲವಾದರೂ ಬೇಕೇ ಬೇಕು. ಬ್ರಿಟಿಶರ ಕಾಲದಲ್ಲಿ ಸ್ಥಾಪಿತವಾಗಿರುವ ಸೈನ್ಯದಲ್ಲಿರುವ ದಂಡಾಳುಗಳೂ, ದಂಡನಾಯಕರೂ, ದಳವಾಯಿಗಳೂ ಜಾತೀಯ ಭಾವನೆಗಳಿಂದ ಅಲಿಪ್ತರಾಗಿರುವವರು ತೀರ ಕಡಿಮೆ. ಏಕೆಂದರೆ ಬ್ರಿಟಿಶರು ಆಗ ಆ ಜಾತಿಯ ಭೇದಗಳನ್ನು ಲಕ್ಷಿಸಿಯೆ ಪಡೆಗಳನ್ನು ಕಟ್ಟಿದ್ದಾರೆ. ಮುಸಲ್ಮಾನ ಸೈನಿಕರು ಬಹುತರವಾಗಿ ಪಾಕಿಸ್ತಾನಕ್ಕೆ ಹೋಗಿರುವರಾದರೂ ಹಿಂದುಸ್ತಾನದ ಸೈನ್ಯದಲ್ಲಿ ಇನ್ನೂ ಸ್ವಲ್ಪ ಅಧಿಕಾರಿಗಳೂ ದಂಡಾಳುಗಳೂ ಉಳಿದಿರುವುದಾಗಿ ಕೇಂದ್ರ ಸರಕಾರದಿಂದಲೇ ಪ್ರಕಟವಾಗಿದೆ. ಪಾಕಿಸ್ತಾನವು ಸ್ವತಂತ್ರವಾಗಿರುವಾಗ ಹಿಂದುಸ್ತಾನದ ದಂಡಿನಲ್ಲಿ ಮುಸಲ್ಮಾನರು ಇರುವುದು ಗಂಡಾಂತರದ್ದೆಂದು ಸಿದ್ಧಪಡಿಸಬೇಕಾದ ಅವಶ್ಯಕವಿಲ್ಲ. ಕೆಲವರು ರಾಷ್ಟ್ರೀಯ ವೃತ್ತಿಯ ಮುಸಲ್ಮಾನರು ಇರಬಹುದು. ಆದರೆ ಪಾಕಿಸ್ತಾನದ ಮುಸಲ್ಮಾನರೊಡನೆ ಹಿಂದುಸ್ತಾನಕ್ಕೆ ಎದುರಿಸಬೇಕಾದಾಗ ಈ ರಾಷ್ಟ್ರೀಯ ವೃತ್ತಿಯವರೂ ಉಭಯ ಸಂಕಟದಲ್ಲಿ ಸಿಕ್ಕು ನಿರ್ವಿಣ್ಣರಾಗುವರು. ಅಲ್ಲದೆ ಜಾತ್ಯಭಿಮಾನ ತಲೆಯೆತ್ತಿ ಭಾರತ ಸೈನ್ಯದ ಗುಟ್ಟುಗಳೆಲ್ಲ ಪಾಕಿಸ್ತಾನಕ್ಕೆ ಕೂಡಲೇ ಗೊತ್ತಾಗುವ ಹೆದರಿಕೆಯಂತೂ ಪ್ರತಿಕ್ಷಣಕ್ಕೂ ಉಂಟು! ಆದಕಾರಣ ಪಾಕಿಸ್ತಾನವು ಭಾರತದಿಂದ ಸ್ವತಂತ್ರವೆನಿಸುತ್ತಿರುವವರೆಗೆ ಮುಸಲ್ಮಾನರು ಸೈನ್ಯದಲ್ಲಿ, ಪ್ರೋಲೀಸಿನವರಲ್ಲಿ ಕೂಡ ಇರತಕ್ಕದ್ದಲ್ಲ. ಇವರು ಈ ವಿಭಾಗಗಳಲ್ಲಿ ಸೇರಿಕೊಂಡಿರುವ ಭಾರತವು ಸ್ವತಂತ್ರವಾಗಿದೆಯೆಂಬುದು ಕೇವಲ ಭ್ರಮೆ.

ಸೈನ್ಯದಲ್ಲಿ, ಸಂರಕ್ಷಕದಲಗಳಲ್ಲಿ ಮುಸಲ್ಮಾನರದೊಂದೆ ಹೆದರಿಕೆಯಲ್ಲ. ಹಿಂದೂ ಜಾತಿಯ ಒಳಬಣಗಳ ಜಾತೀಯತೆಯ ದುಷ್ಪರಿಣಾಮದ ಗಂಡಾಂತರವೂ ಅಷ್ಟಿಷ್ಟಲ್ಲ. ಸೈನ್ಯದಲ್ಲಿ ಸೀಖ ಪಲ್ಟನ್, ಗುರ್ಖಾಪಡೆ, ಲಿಂಗಾಯತ ಬ್ಯಾಟೇಲಿಯನ್ ಮುಂತಾಗಿ ಜಾತಿಗನುಸರಿಸಿ ವಿಭಾಗಗಳು ಈಗ ಇವೆ. ಇವುಗಳು ತಮ್ಮ ತಮ್ಮ ಜಾತಿಯ ವಿಷಯಕ ಈರ್ಷೆಯಲ್ಲಿ ರಾಷ್ಟ್ರವನ್ನೆ ಮರೆಯುವುದು ಅಸಂಭವವಲ್ಲ. ಆಯಾ ಜಾತಿಯ ರಾಷ್ಟ್ರೀಯ ವೃತ್ತಿಯ ಮುಖಂಡರು, ತಮ್ಮ ಜಾತಿಯ ಹೆಸರಿನ ದಂಡಿನ ಭಾಗಕ್ಕೆ ಬೇರೊಂದು ಅಖಿಲ ಭಾರತೀಯ ಅಭಿಮಾನದರ್ಶಕ ಹೆಸರನ್ನಿಡಲು

ತಾವಾಗಿಯೆ ಸಂರಕ್ಷಕ ಮಂತ್ರಿಗಳಿಗೆ ಅಥವಾ ಭಾರತದ ಮುಖ್ಯ ಮಂತ್ರಿಗಳಿಗೆ ಪ್ರಾರ್ಥಿಸಿಕೊಳ್ಳುವದರಲ್ಲಿಯೇ ಭೂಷಣವಿಲ್ಲವೆ? ಅಖಿಲ ಭಾರತೀಯ ನೇತಾರರ ಒತ್ತಾಯಕ್ಕೆ ಈ ಮಾತಿಗೆ ಒಪ್ಪುವ ಪ್ರಸಂಗ ಬರುವುದು ಅಷ್ಟು ಉಚಿತವಲ್ಲ.

ಈಗ ದೊಡ್ಡ ಪಟ್ಟಣಗಳಲ್ಲಿ ಗೃಹರಕ್ಷಕ ದಲಗಳಿಗೆ ಸೈನಿಕರಂತಹ ಕೆಲವೊಂದು ಶಿಕ್ಷಣವನ್ನು ಕೊಡುವ ಉಪಕ್ರಮವು ಆರಂಭವಾಗಿದೆ. ಶಿಕ್ಷಣ ಸಂಸ್ಥೆಗಳಲ್ಲಿ ತರುಣರಿಗೆ ಸೈನಿಕ ಶಿಕ್ಷಣ ಕೊಡುವ ಏರ್ಪಾಟವೂ ನಡೆದಿದೆ. ಸ್ಥೂಲದೃಷ್ಟಿಯಿಂದ ನೋಡಿದರೆ ಇದರಲ್ಲಿ ಏನೂ ಗಂಡಾಂತರವು ಕಾಣುವುದಿಲ್ಲ; ಅಷ್ಟೇ ಅಲ್ಲ, ರಾಷ್ಟ್ರವನ್ನು ಬಲಿಷ್ಠಮಾಡುವುದಕ್ಕಾಗಿ ಇದೆಲ್ಲವೂ ಸಹಕಾರಿಯಾಗುವುದು, ಎಂಬ ಹಿಗ್ಗಿನಲ್ಲಿಯೆ ನಾವೆಲ್ಲ ಮುಗ್ಧರಾಗಿದ್ದೇವೆ.

ಆದರೆ ಕರ್ಣಾಟಕ-ಮಹಾರಾಷ್ಟ್ರದ ಸಮಾಜಸ್ಥಿತಿಯನ್ನು ನಿರೀಕ್ಷಿಸಿದರೆ ಇಲ್ಲಿಯ ನಾಗರಿಕ ದಲಗಳೂ, ತರುಣರ ಸೈನಿಕ ಶಿಕ್ಷಣವೂ ಒಂದು ದೃಷ್ಟಿಯಿಂದ ಚಿಂತೆಗೆ ಕಾರಣವಾಗುವಂತೆಯೆ ಇದೆ. ಸಮಾಜದಲ್ಲಿ ಎಲ್ಲಿಯವರೆಗೆ ಜಾತಿಯ ವೈಷಮ್ಯವು ನಷ್ಟವಾಗಿಲ್ಲವೋ ಅಲ್ಲಿಯ ವರೆಗೆ ಈ ಯುದ್ಧಶಿಕ್ಷಣದಿಂದ ಯಾದವೀ ಕಲಹಗಳು ಇನ್ನಷ್ಟು ಭಯಾವಹವಾಗುವ ಹೆದರಿಕೆಯೆ ಉಂಟು.

ಇದರ ಜೊತೆಗೆ ಮಿತಿಮೀರಿದ ಪ್ರಾಂತಾಭಿಮಾನವೂ ಒಂದು ಕುತ್ತು. ತಮ್ಮ ಪ್ರಾಂತವೇ ಒಂದು ರಾಷ್ಟ್ರ; ಸ್ವತಂತ್ರದೇಶವೆಂಬ ಗಾಳಿ ತುಂಬಿ ಮಾತನಾಡುವ ಅತಿವಾದಿಗಳುಂಟು. ಹಲಕೆಲವು ಸ್ವಾಯತ್ತಪ್ರಾಂತಗಳೂ ಸಂಸ್ಥಾನಗಳೂ ತಮ್ಮ ತಮ್ಮ ದಂಡು, ಹಡಗುಪಡೆ, ವಿಮಾನಪಡೆ ಇರಬೇಕೆಂಬ ಒಲವು ಉಳ್ಳವುಗಳಾಗಿವೆ. ಇದು ನಿಜವಾಗಿಯೂ ಭಾರತವು ಛಿನ್ನವಿಚ್ಛಿನ್ನವಾಗಲು ಸಂಚಕಾರ!

'ಕೊಲ್ಲಾಪುರವು ಅಚ್ಚಕೆಚ್ಚಿನ ಮರಾಠಾ ಸಂಸ್ಥಾನ; ಪುಣ್ಯಶ್ಲೋಕ ಶಿವಾಜಿ ಮಹಾರಾಜರ ನೆತ್ತರವು ಹರಿದಾಡುತ್ತಿರುವ ರಾಜವಂಶವು ಈ ಸಂಸ್ಥಾನವನ್ನು ಆಳುತ್ತಿದೆ. ಪವಿತ್ರವಾದ ಈ ಅರಸುಕುಲವನ್ನು ಉಳಿಸಿಕೊಂಡು ಬರುವುದು ಪ್ರತಿಯೊಬ್ಬ ಮರಾಠನ ಕರ್ತವ್ಯ. ಕೊನೆಯ ನೆತ್ತರದ

ಹನಿಯು ನರದಲ್ಲಿ ಇರುವ ವರೆಗೂ ತಾವು ಈ ಕರ್ತವ್ಯಕ್ಕಾಗಿ ಹೋರಾಡ ತಕ್ಕವರೇ'! ಎಂಬ ಒಂದೊಂದು ಜಾತಿಯ ಈ ಬಗೆಯ ವೀರಾವೇಶದ ಮಾತಿನ ಹುಚ್ಚುಹೊಳೆ ಆಯಾ ಜಾತಿಯ ಅಜ್ಞಜನರನ್ನು ಕೊಚ್ಚಿ ಕೊಂಡೊಯ್ದು ಎಂತಹ ಅನಾಹುತವನ್ನು ಮಾಡಬಲ್ಲದು ಎಂಬುದು ಹಲ ವೆಡೆ ದಿನಾಲು ಅನುಭವಕ್ಕೆ ಬರುತ್ತಲಿದೆ. ಹಿಂದೀ ಸಂಸ್ಕೃತಿ ರಕ್ಷಣೆಯ ಹೆಸರಿನಲ್ಲಿ ಗುಪ್ತಸಂಘ ಸ್ಥಾಪಿಸಿಕೊಂಡು ಕೆಲಸಮಾಡುತ್ತಿರುವ ರಾ. ಸ್ವ. ಸೇವಕದಲದವರಿಂದ ಆದ ಹೀನ ಕೃತ್ಯವು ಲೋಕವಿಶ್ರುತವಾಗಿವೆ. ಈ ಮೊದಲು ಜಿನ್ನಾರ ಅನುಯಾಯಿಗಳು ಮಾಡಿದ ರಾಕ್ಷಸೀ ಕೃತ್ಯಗಳು, ಈಗ ಹೈದರಾಬಾದಿನ ರಜಕಾರರು ನಡಸಿರುವ ಕೊಲೆಸುಲಿಗೆಗಳು, ಕೊಲ್ಲಾಪೂರ, ಸಾಂಗ್ಲಿ, ಮಿರಜಿ, ಬೆಳಗಾವ ಜಿಲ್ಹೆಯ ಹಲವೆಡೆಗೆ ಆದ ಕೊಳ್ಳೆ ಲೂಟಿಗಳೂ ಇದಕ್ಕೆ ನಿದರ್ಶನ.

ಜನ್ಮದಿಂದ ಜಾತಿಭೇದವನ್ನು ನಾವು ಇಟ್ಟುಕೊಂಡಿರುವವರೆಗೂ ಮತ್ತು ರಾಷ್ಟ್ರೀಯತೆಗಿಂತಲೂ ತಮ್ಮ ಧರ್ಮ, ಮತವು ಮಿಗಿಲೆಂದು ನಮ್ಮ ಅಂತರಾಳದಲ್ಲಿ ದೃಢವಾಗಿ ನಂಬುಗೆಯು ಬೇರೂರಿರುವ ವರೆಗೂ ನಮ್ಮ ಸಮಾಜಕ್ಕೆ ಕೊಡಲ್ಪಡುವ ಸೈನಿಕ ಶಿಕ್ಷಣವು, ಸಂಧಿಸಾಧಿಸುವುದೆಂದೊಡನೆ ತಮ್ಮ ಜಾತಿ, ಧರ್ಮದ ವರ್ಚಸ್ಸನ್ನು ಸ್ಥಾಪಿಸಬೇಕೆಂಬ ವ್ಯಾಮೋಹವನ್ನು ಉಂಟುಮಾಡದೆ ಇರಲಾರದು.

ಇಂದಿನ ಶಿಕ್ಷಣಸಂಸ್ಥೆಗಳು ವ್ಯಕ್ತಾವ್ಯಕ್ತ ಹೆಸರುಗಳಿಂದ ಕೆಲವೊಂದು ಜಾತಿ ಪಂಗಡದವರ ಕೈಯಲ್ಲಿವೆ. ಈ ಸಂಸ್ಥೆಗಳಲ್ಲಿ ಉಳಿದ ಜಾತಿಯ ವಿದ್ಯಾರ್ಥಿಗಳಿಗೆ ಪ್ರವೇಶವಿಲ್ಲವೆಂಬುವಂತಿಲ್ಲವಾದರೂ ಬಹುಸಂಖ್ಯಾಕ ವಿದ್ಯಾ ರ್ಥಿಗಳು ಆ ಶಿಕ್ಷಣಸಂಸ್ಥೆಯ ಸಂಚಾಲಕರ ಜಾತಿಯವರೇ ಆಗಿರುವುದುಂಟು. ಶಿಕ್ಷಕವರ್ಗದಲ್ಲಿ ಶಾಲೆಯ ಕಾರ್ಯ ನಿರ್ವಾಹಕ ಮಂಡಲದಲ್ಲಿ ಆಯಾ ಜಾತಿಯ ವರ ಕೈಯಲ್ಲಿಯೆ ಮುಖ್ಯ ಸೂತ್ರಗಳು ಇರುತ್ತವೆ. ಈ ಕಾರಣದಿಂದ ಇಂತಹ ಶಿಕ್ಷಣಸಂಸ್ಥೆಗಳ ಮೇಲ್ವಿಚಾರಣೆಯಲ್ಲಿ ನಡೆವ ಪಥಕಗಳು ಜಾತೀಯ ಸ್ವರೂಪ ವನ್ನು ತಾಳಲಿಕ್ಕಿಲ್ಲವೆಂದು ಗ್ರಹಿಸುವುದು ಸಮಂಜಸವಾದೀತೆ? ಶಿಕ್ಷಣಸಂಸ್ಥೆ, ಶಿಕ್ಷಣ ಸಂಸ್ಥೆಗಳಲ್ಲಿ ಜಾತೀಯಭಾವನೆಯ ಸೂಕ್ಷ್ಮವಾದ ಸ್ಪರ್ಧೆಯು ಈಗ ಇದ್ದೇ ಇದೆ. ಇದನ್ನು ಬಹಿರಂಗವಾಗಿ ಒಪ್ಪಿಕೊಳ್ಳಲು ಕೆಲವರು ಸಿದ್ಧರಾಗ

ಲಿಕ್ಕಿಲ್ಲ. ಆದರೂ ಇದು ವಾರ್ಷಿಕೋತ್ಸವಗಳಿಗೆ ಮುಖ್ಯ ಅತಿಥಿಗಳನ್ನು ಬರಮಾಡಿಕೊಳ್ಳುವಲ್ಲಿ ವ್ಯಕ್ತವಾಗುತ್ತದೆ. ವಿದ್ಯಾರ್ಥಿಗಳ ಆಟಪಾಟಗಳಲ್ಲಿ ಒಂದು ಶಿಕ್ಷಣ ಸಂಸ್ಥೆಯವರಿಗೂ ಇನ್ನೊಂದು ಶಿಕ್ಷಣಸಂಸ್ಥೆಯವರಿಗೂ ಇರುವ ಆಂತರಿಕ ಮನೋಭಾವವು ಎಂತಹದು, ಎಂಬುದು ಆ ವಿದ್ಯಾರ್ಥಿಗಳ ಮುಖಾಂತರ ಬರುವ ಮಾತುಗಳಿಂದ, ಆಗುವ ಕಲಹಗಳಿಂದ ಸ್ಪಷ್ಟವಾಗುತ್ತಿರುತ್ತದೆ.

ಖಾಸಗೀ ಶಿಕ್ಷಣಸಂಸ್ಥೆಗಳನ್ನೆಲ್ಲ ಸರಕಾರವು ವಶಪಡಿಸಿಕೊಳ್ಳಬೇಕು ಅಥವಾ ಸಂಚಾಲಕರಲ್ಲಿ ಒಂದೇ ಬಗೆಯವರೇ ಇರದಂತೆ ನಿರ್ಬಂಧವಿಟ್ಟು ಅವುಗಳ ಕಾರ್ಯ ನಿರ್ವಾಹಕ ಮಂಡಲಗಳಲ್ಲಿ ಶಿಕ್ಷಣ ತಜ್ಞನೊಬ್ಬನು ಸರಕಾರದ ಪ್ರತಿನಿಧಿಯಾಗಿ ಅಂತರ್ಗತ ಶಕ್ತಿಗಳ ನಿರೀಕ್ಷಣೆಗಾಗಿ ನೇಮಿಸಲ್ಪಡುವ ಕಟ್ಟಳೆಯಾಗಬೇಕು.

ಈ ಬಗೆಯಾದ ಯಾವುದೊಂದು ಮಾರ್ಪಾಟಾಗಿ ಶಿಕ್ಷಣ ಸಂಸ್ಥೆಗಳಲ್ಲಿ ಹುದುಗಿಕೊಂಡಿರುವ ಜಾತೀಯತೆಯು ಸಮೂಲ ನಷ್ಟವಾಗದೆ ಇದ್ದರೆ ಈ ಸಂಸ್ಥೆಗಳಿಂದ ನೇರ್ಪಡುವ 'ಸಮೀರ ಸೇನಾ' 'ಬಸವೇಶ್ವರ ಪಥಕ' 'ವಿದ್ಯಾರಣ್ಯದಳ' 'ಅಂಜುಮಾನ ತುಕಡಿ' 'ಶಿವಾಜೀ ಸವಾರರು' 'ಹೇಮರಡ್ಡೀ ಪದಾತಿ' 'ಮಹಾವೀರ ತಂಡ' ಎಂದು ಮುಂತಾದ ಶಿಬಿರಗಳು ರಾಷ್ಟ್ರದ ಬಲಸಂವರ್ಧನೆಗೆ ಕಾರಣವಾಗದೆ ಅಂತರ್ಗತ ಕಲಹಗಳಿಗೆ ಪೋಷಕವಾಗುವ ಹೆದರಿಕೆಯು ತಪ್ಪಿದ್ದಲ್ಲ.

ಹೀಗೆ ಶೀಘ್ರದುನೋಡಿದಷ್ಟೆಲ್ಲ ನಮ್ಮ ದೇಶದೊಳಗಿನ ಜಾತೀಯತೆಯು ರಾಷ್ಟ್ರೀಯ ಸೈನ್ಯ ನಿರ್ಮಾಣಕ್ಕೆ ಬಗೆ ಬಗೆಯಾಗಿ ಅಡ್ಡಬರುತ್ತಿದೆ. ಈಗಿನ ಜಾತಿ ಭೇದಗಳನ್ನು ಇದ್ದಂತೆ ಉಳಿಸಿಕೊಂಡೂ ರಾಷ್ಟ್ರೀಯ ಸೈನ್ಯನಿರ್ಮಾಣದ ಹಂಚಿಕೆಯು ಯಾವುದಾದರೂ ಇದ್ದರೆ, ಸನಾತನ ಧರ್ಮಾಭಿಮಾನಿಗಳು ಸೂಕ್ಷ್ಮ ವಿಚಾರದಿಂದ ಕಂಡು ಹಿಡಿದು ಅದನ್ನು ದೇಶದ ಬಲ್ಲಿದರ ಎದುರು ಬೇಗನೆ ಮಂಡಿಸುವುದು ಸಾಧ್ಯವಾದರೆ ಅವರು ಕೂಡಲೆ ಹಾಗೆ ಮಾಡಬೇಕು. 'ಸಾವಿರಾರು ವರುಷಗಳಿಂದ ನಡೆದು ಬಂದ ಸನಾತನ ವರ್ಣವ್ಯವಸ್ಥೆಯನ್ನು ಹಾಳುಮಾಡುತ್ತಾರಲ್ಲ,' ಎಂದು ಒಳಗೊಳಗೆ ಮಿಡುಕಾಡುತ್ತ ಕುಳ್ಳಿರುವುದರಿಂದ ಅವರಿಗೂ ಲಾಭವಿಲ್ಲ! ದೇಶಕ್ಕೂ ಹಿತವಿಲ್ಲ. ಹಾಗೆ ಏನಾದರೂ ದಾರಿ

ಯಿದ್ದರೆ ಅದರ ಚರ್ಚೆಯೂ ಬಹಿರಂಗವಾಗಿ ನಡೆಯುವುದು ಉತ್ತಮ. ಯಾರಿಗೆ ಒಪ್ಪಿಗೆಯಾಗಲಿ ಆಗದಿರಲಿ, ಲೋಕ ಹಿತಕಾರಕ ಪ್ರಾಮಾಣಿಕವಾದ ಯಾವ ವಿಚಾರ, ಭಾವನೆಗಳೂ ಒತ್ತಾಯದಿಂದ ಅಥವಾ ಹೆದರಿಕೆಯಿಂದ ಒಳಗೆ ಹುಗಿಯಲ್ಪಡಲಾಗದು. ಅದು ವ್ಯಕ್ತಿಯ ಹಾಗೂ ರಾಷ್ಟ್ರದ ಆರೋಗ್ಯಕ್ಕೆ ಹಾನಿಕರ.

ಸತ್ತ ಮೇಲಿನ ಪಾರಲೌಕಿಕ ಮುಕ್ತಿಯೇ ನಮ್ಮ ಗುರಿ; ಈ ರಾಜಕೀಯ ಸ್ವಾತಂತ್ರ್ಯವು ಭೌತಿಕ; ಎಂಬ ಶ್ರದ್ಧೆಯೆ ಬಹುಜನರದಾಗಿದ್ದರೆ ಇಷ್ಟು ಚಳವಳಿ ಮಾಡಿ ಬ್ರಿಟಿಶರನ್ನು ಹೊರಗೆ ಅಟ್ಟಿದ್ದು ಮೂರ್ಖತನವಾಯಿತು. ಇನ್ನೂ ಹೊತ್ತು ಮೀರಿಲ್ಲ. ಬ್ರಿಟಿಶರು ದೂರ ಹೋಗಿಲ್ಲ. ಕರೆದರೆ ಸಾಕು; ಅವರು ಬರಲು ಸಿದ್ಧರಿದ್ದಾರೆ.

'ಯದ್ಯಯತ್ ಪರವಶಂ ದುಃಖಮ್' ಎಂಬುದು ನಿಜವಿದ್ದರೆ, ಪಾರತಂತ್ರ್ಯವು ನರಕಕ್ಕಿಂತಲೂ ಹೀನ. ಪರಕೀಯರ ಆಡಳಿತದಲ್ಲಿ ನಿಜವಾದ ಆತ್ಮವಿಕಾಸವು ಆಗಲಾರದು. ಆತ್ಮವಿಕಾಸವೇ ಇಲ್ಲದಾಗ ಧರ್ಮವು ಉಳಿದಿದೆಯೆಂಬುದು ಭ್ರಮೆ. ಆದುದರಿಂದ ನಿಜವಾದ ಧರ್ಮವು ರಾಷ್ಟ್ರದ ಸ್ವಾತಂತ್ರ್ಯದಲ್ಲಿಯೆ ಎಂದು ನಂಬುವುದಾದರೆ ನಮಗೆ ಈಗ ದೊರೆತ ಸ್ವರಾಜ್ಯವನ್ನು ಉಳಿಸಿಕೊಳ್ಳಲು ಎಂತಹ ತ್ಯಾಗಮಾಡಬೇಕಾದರೂ ಅದಕ್ಕೆ ನಾವು ಸಿದ್ಧರಾಗಬೇಕಷ್ಟೆ?

ರಾಷ್ಟ್ರೀಯ ಸೈನ್ಯವಿಲ್ಲದೆ ರಾಷ್ಟ್ರಕ್ಕೆ ಸ್ವಾತಂತ್ರ್ಯವಿಲ್ಲ; ಉಳಿಗಾಲವಿಲ್ಲ. ಜನ್ಮದಿಂದ ಜಾತಿಭೇದಗಳಿರುವುದು ರಾಷ್ಟ್ರೀಯ ಸೈನ್ಯ ನಿರ್ಮಾಣಕ್ಕೆ ವಿಘಾತಕವೆಂದು ಒಪ್ಪಲೆ ಬೇಕಷ್ಟೆ?

---

## ನಮಗೆ ಬೇಕಾದುದು ಏನು ಜಾತಿಯೆ ? ಪ್ರಜಾಪ್ರಭುತ್ವವೆ ?

ಅಖಿಲ ಭಾರತೀಯ ಘಟನಾ ಸಮಿತಿಯಲ್ಲಿ ಪಂಡಿತ ಜವಾಹರಲಾಲರು ಒಂದು ಗೊತ್ತುವಳಿಯನ್ನು ಮಂಡಿಸಿ ಭಾರತದ ಗುರಿ ಪ್ರಜಾಪ್ರಭುತ್ವವೆಂದು ಸಾರಿದರು. ಈ ದೃಷ್ಟಿಯಿಂದ ಆ ಗೊತ್ತುವಳಿಯ ಮುಖ್ಯ ಭಾಗವು ಹೀಗಿದೆ :

This constituent Assembly declares its firm and solemn resolve to proclaim India as an Independent Sovereign Republic and to draw up for her future governance a constitution,

Wherein all power of authority of the Sovereign Independent India its constituent parts and organs of government are derived from the people and,

Wherein shall be guaranteed and secured to all the people of India justice social economic and political equality of status of opportunity and before the law, freedom of thought, expression, belief, faith worship, vocation, association and action, subject to law and public morality and,

Wherein adequate safeguards shall be provided for minorities backward and tribal areas and other backward classes............

This ancient land attain its rightful and honoured place in the world and make its full and willing contribution to the promotion of world peace and welfare of mankind

ಈ ಸಂಕಲ್ಪರೂಪಿಯಾದ ಗೊತ್ತು ಎಲ್ಲರ ಒಪ್ಪಿಗೆಯನ್ನೂ ಪಡೆದು ಘಟನಾಸಮಿತಿಯಲ್ಲಿ ಮಾನ್ಯವಾಯಿತು. ಇದರಲ್ಲಿರುವ Independent Republic ಎಂಬ ಶಬ್ದಸಮುಚ್ಚಯವು ಬಹಳ ಮಹತ್ವದ್ದಿದೆ. ಇದರ ಅರ್ಥವು ಸ್ವತಂತ್ರ ಪ್ರಜಾಪ್ರಭುತ್ವದ ರಾಜ್ಯವೆಂದಿದೆ. ಆ ನಿರ್ಣಯದಲ್ಲಿ 'ಪ್ರಜಾಪ್ರಭುತ್ವ'ವು ತಮ್ಮ ಗುರಿ ಎಂದಿಷ್ಟೇ ಹೇಳದೆ, ಮುಂದೆ ಪ್ರಜಾಪ್ರಭುತ್ವದ ಎಲ್ಲ ಅಧಿಕಾರಗಳ ಉಗಮವು ಪ್ರಜೆಗಳಲ್ಲಿಯೆ ಇದೆಯೆಂಬ ಮಾತನ್ನೂ ಸ್ಪಷ್ಟೀಕರಿಸಲಾಗಿದೆ. ( wherin all power of authority........ derived from the people ) ಮತ್ತು ಎಲ್ಲರಿಗೂ ಸಾಮಾಜಿಕ, ರಾಜಕೀಯ, ಆರ್ಥಿಕ, ನ್ಯಾಯ ನೀತಿಗಳಲ್ಲಿ ಸಮಾನ ಹಕ್ಕುವುಂಟೆಂಬುದನ್ನು ಸಾರಲಾಗಿದೆ. ಪ್ರತಿಯೊಬ್ಬರಿಗೂ ವಿಚಾರಸ್ವಾತಂತ್ರ್ಯವಿದೆ. ಉಚ್ಚಾರ ಸ್ವಾತಂತ್ರ್ಯವಿದೆ; ಧಾರ್ಮಿಕ ಸ್ವಾತಂತ್ರ್ಯವಿದೆ—ಆಚಾರಸ್ವಾತಂತ್ರ್ಯವಿದೆ. (ಆದರೆ ಈ ಸ್ವಾತಂತ್ರ್ಯವು ಸಾರ್ವಜನಿಕ ಹಿತಕ್ಕೆ ಅವಿರೋಧಿಯಾಗಿರತಕ್ಕದ್ದು) ಎಂಬ ಮಾತನ್ನೂ ಅಲ್ಲಿ ವಿಶದೀಕರಿಸಿದೆ.

ಅಲ್ಪಸಂಖ್ಯಾಕರಾದ ಹಿಂದುಳಿದವರಿಗೂ, ತಂಡಗಳ ಪ್ರದೇಶಗಳಿಗೂ, ಹರಿಜನರೇ ಮೊದಲಾದ ದಳಿತ ವರ್ಗಕ್ಕೂ ಅವಶ್ಯಕವಾದ ಸಂರಕ್ಷಣೆಯನ್ನು ಕೊಡಲಾಗುವದೆಂದೂ ಆಶ್ವಾಸನವನ್ನೀಯಲಾಗಿದೆ.

ಇಂತೀ ಪ್ರಜಾಪ್ರಭುತ್ವವು ನಮ್ಮ ಗುರಿ. ಇದು ನಿಜವಿದ್ದರೆ ಇದಕ್ಕನುಗುಣವಾಗಿ ಇಂದಿನ ನಮ್ಮ ಸಮಾಜರಚನೆಯಲ್ಲಿ ಆಮೂಲಾಗ್ರವಾದ ಬದಲಾವಣೆಯು ಅವಶ್ಯವಾಗಿಲ್ಲವೆ? ಏಕೆಂದರೆ, ಪ್ರಜಾಪ್ರಭುತ್ವವು ನಿಜವಾಗಿಯೆ ನಮ್ಮ ರಾಷ್ಟ್ರದ ಧ್ಯೇಯವಾಗಿದ್ದರೆ ನಮ್ಮ ನಾಡಿನ ಪ್ರತಿಯೊಬ್ಬರಲ್ಲಿಯೂ 'ಇಲ್ಲಿ ಹುಟ್ಟಿ, ನೆಲಸಿದ ತಾವೆಲ್ಲ ಸಮಾನಸ್ಕಂಧರು,' ಎಂಬ ಮಾತನ್ನು ಒಪ್ಪಿಕೊಂಡು ಆ ಆಶಯದ ಆತ್ಯಂತಿಕವಾದ ನಂಬುಗೆಯು ನೆಲೆಗೊಳ್ಳಲೇ ಬೇಕು. ಹೀಗೆ ನಂಬಿಕೆ ನೆಚ್ಚಿಕೆ ಇಲ್ಲದ ದೇಶವು ಪ್ರಜಾಪ್ರಭುತ್ವಕ್ಕೆ ಎಂದೂ ತಕ್ಕುದಾಗಲಾರದು.

ಈ ಗಳಿಗೆಯಲ್ಲಂತೂ ನಮ್ಮ ನಾಡಿನಲ್ಲಿ ವೈಯಕ್ತಿಕ ಗುಣ-ಶಕ್ತಿಗಳಿಂದ ಅವರವರು ಮೇಲು ಕೀಳೆಂಬ ಭಾವನೆಯನ್ನುಂಟುಮಾಡಿಕೊಂಬ ವಾಡಿಕೆಗಿಂತ ಅವರವರ ಜಾತಿಯಿಂದ, ಧರ್ಮದಿಂದ, ಹುಟ್ಟಿನಿಂದ ಅವರ

ಮೇಲ್ಮೆ ಅಥವಾ ಕೀಳ್ಮೆಯು ನಿರ್ಧರಿಸಲ್ಪಡುವ ಇಂದಿನ ದಿನದ ರೂಢಿಯೆ ಹೆಚ್ಚಾಗಿದೆ. ಇದು ಪ್ರಜಾಪ್ರಭುತ್ವದ ಮೂಲತತ್ವಕ್ಕೇ ತೀರ ವಿರೋಧ.

ಅಸಹಕಾರದ ಆಂದೋಲನದ ಆರಂಭದ ಉಕ್ಕು. ಅದರೊಡನೆ ಖಿಲಾಫತ ಚಳವಳಿಯೂ ಸೇರಿಕೊಂಡಿತ್ತು. ಮಹಾತ್ಮಾಜಿಯವರೊಡನೆ ಅಲ್ಲೀ ಬಂಧುಗಳೂ ಕೂಡಿಕೊಂಡು ಏಕಜೀವರಾಗಿ ಆಸೇತು ಹಿಮಾಚಲ ಕಾರ್ಯ ಮಾಡಿದರು. ಗಾಂಧಿಜೀ ಮತ್ತು ಅಲ್ಲೀಬಂಧುಗಳೊಳಗಣ ಪ್ರೀತಿ ವಿಶ್ವಾಸಗಳನ್ನು ಕಂಡು ಲೋಕವೆ ಕೌತುಕಬಡುತ್ತಿದ್ದಿತು. ಇವರು ಮೂವರ ಒಡಲು ಬೇರೆಯಾದರೂ ಜೀವವೊಂದೇ ಎಂಬಂತೆ ಅವರ ಹೊರಗಿನ ನಡೆನುಡಿಗಳಾಗಿದ್ದುವು.

ಇಂತಹ ಕಾಲದಲ್ಲಿ ಒಬ್ಬನು ಒಮ್ಮೆ ಮೌ. ಮಹಮ್ಮದಅಲ್ಲಿಯವರಿಗೆ ಒಂದು ಪ್ರಶ್ನೆ ಕೇಳಿದನು: ನಿಮ್ಮ ಮತ್ತು ಮಹಾತ್ಮಾಜಿಯವರ ಪರಸ್ಪರ ಪ್ರೀತಿವಿಶ್ವಾಸಗಳು ಅಪೂರ್ವವಾಗಿವೆ. ಮಹಾತ್ಮಾಜಿಯವರ ಹಿರಿಮೆಯನ್ನೂ ನೀವು ಅರಿತು ಒಪ್ಪಿದ್ದೀರಿ. ಆದರೆ, ಸಾಮಾನ್ಯ ಕಿರುಕುಳ ಒಬ್ಬ ಮಹಮ್ಮದೀಯ ಮತ್ತು ಮಹಾತ್ಮಾಜಿ ಇವರಲ್ಲಿ ನಿಮ್ಮ ಧಾರ್ಮಿಕ ದೃಷ್ಟಿಯಿಂದ ಯಾರು ಹೆಚ್ಚಿನವರೆಂದು ಬಗೆಯುವಿರಿ? ಎಂದು ಕೇಳಿದ ಪ್ರಶ್ನೆಗೆ ಮೌ. ಮಹಮ್ಮದಲ್ಲಿಯವರು ಏನೆಂದು ಉತ್ತರವಿತ್ತರು ಗೊತ್ತೆ? ಎಂತಹ ಕೀಳು ಮಹಮ್ಮದೀಯನಾದರೂ ಆತನ ಜೀವದ ಯೋಗ್ಯತೆ ಮ. ಗಾಂಧೀಜಿಯವರಿಗಿಂತಲೂ ಯಾವಾಗಲೂ ಹೆಚ್ಚಿನದೆ ಆಗಿದೆ!'

ಶ್ರೀ. ಮಹಮ್ಮದಲ್ಲಿಯವರು ಬರಿ ಒಬ್ಬ ಮೌಲಾನಾ ಅಷ್ಟೇ ಆಗಿದ್ದರೆ ಈ ಉತ್ತರದ ಬಗೆಗೆ ಯಾರಿಗೂ ಸೋಜಿಗಪಡಬೇಕಾಗಿದ್ದಿಲ್ಲ. ಬ್ರಾಹ್ಮಣರೊಳಗಿನ ಭಟ್ಟರೂ ಆಚಾರ್ಯರೂ, ಅದರಂತೆ ಉಳಿದ ಪ್ರತಿಯೊಂದು ಜಾತಿಯೊಳಗಿನ ಧರ್ಮಮಾರ್ತಾಂಡರೂ ಹೀಗೆಯೆ ದೃಢವಾಗಿ ನಂಬಿರುವುದನ್ನು ಕಾಣಬಹುದಾಗಿದೆ. ಆದರೆ ಶ್ರೀ. ಮಹಮ್ಮದಅಲ್ಲಿಯವರು ಬರಿ ಮೌಲಾನಾ-ಧರ್ಮ ಮಾರ್ತಾಂಡರಾಗಿದ್ದಿಲ್ಲ. ಅವರು ಇಂಗ್ಲಂಡಿನಲ್ಲಿ ಅಲ್ಲಿಯ ವಿದ್ಯೆಯ ಆಗರವಾದ ಕೆಂಬ್ರಿಜ್ಜಿನಲ್ಲಿ ನಿಂತು ಅಭ್ಯಾಸಮಾಡಿದವರು. ಕೊನೆಗೆ ಬ್ಯಾರಿಸ್ಟರಿ ಪದವಿಯನ್ನೂ ಪಡೆದವರು. ಅದ್ಯಯಾವತ್ ಆಧುನಿಕ ವಿದ್ಯಾಪರಿಣತರಾಗಿ ಭಾರತಕ್ಕೆ ಮರಳಿದವರು, ಇಂತಹರಲ್ಲಿ ಈ ಬಗೆಯ ಮೂಲಭೂತ

ವೈಷಮ್ಯದ ಭಾವನೆಯು ಬೇರೂರಿಕೊಂಡು ಹೇಗೆ ಬೆಳೆದುದು ಗೋಚರವಾಗ ಬೇಕೆ ! ತಮ್ಮ ವಿಶಿಷ್ಟ ಪಂಥದ ಒಬ್ಬ ಕಿರುಕುಳನು—ಹೀನನೂ ಕೂಡ ಬೇರೆ ಮತೀಯ ಗಣ್ಯ ವ್ಯಕ್ತಿಗಿಂತ ಆಧ್ಯಾತ್ಮಿಕ ದೃಷ್ಟಿಯಿಂದ ಶ್ರೇಷ್ಠನೆಂದು ಬಗೆಯುವ ಈ ಚಟವು ಭಾರತೀಯ ಪ್ರತಿಯೊಂದು ಜಾತಿ, ಧರ್ಮಗಳಲ್ಲೂ ಹುದುಗಿಕೊಂಡಿರುವುದನ್ನು, ನಿಷ್ಪಕ್ಷಪಾತ ಬುದ್ಧಿಯಿಂದ ವಿಚಾರಿಸಿದರೆ, ಒಪ್ಪಿಕೊಳ್ಳಲೇಬೇಕಾಗುತ್ತದೆ. ಮೌ. ಮಹಮ್ಮದಲ್ಲಿಯವರೊಬ್ಬರೆ ಇಂಥ ವ್ಯಕ್ತಿಯಲ್ಲ. ಆಂಗ್ಲ ವಿದ್ಯಾವಿಭೂಷಿತರಾಗಿದ್ದೂ 'ತಮ್ಮ ಧರ್ಮ, ಜಾತಿ ಯೊಂದೇ ಶ್ರೇಷ್ಠ; ಉಳಿದುವು ಕನಿಷ್ಠ'ವೆಂದು ದೃಢವಾಗಿ ನಂಬಿರುವ ಬೇಕಾದಷ್ಟು ಹಿಂದೂ ಜನಗಳನ್ನೂ ಕಾಣಬಹುದಾಗಿದೆ. ಇಷ್ಟೇ ಅಲ್ಲ, ತಮ್ಮ ಶಿಕ್ಷಣ, ಬುದ್ಧಿವಂತಿಕೆಗಳನ್ನೆಲ್ಲ ಉಪಯೋಗಿಸಿ, ತಾವು ಹುಟ್ಟಿಬಂದ ಜಾತಿಯೇ ಹಿರಿದು, ತಮ್ಮ ಮನೆತನದ ಧರ್ಮವೇ ಜಗತ್ತಿನಲ್ಲಿ ಹೆಚ್ಚಿನದು, ತಮ್ಮ ಮತದ ಸ್ಥಾಪಕ, ಪುನರುದ್ಧಾರಕ ಆಚಾರ್ಯ ಅಥವಾ ವಿಭೂತಿಯೊಬ್ಬರೇ ಸರ್ವಜ್ಞರು, ತ್ರಿಕಾಲಜ್ಞಾನಿಗಳು; ಎಂದು ವಕೀಲಿಯ ನಾನಾಬಗೆಯ ಹಂಚಿಕೆ, ವಾದಸರಣಿಗಳನ್ನು ಉಪಯೋಗಿಸಿ ಸಿದ್ಧಮಾಡುವ ವ್ಯಾಪಾರದಲ್ಲಿ ಅವರು ಧನ್ಯತೆಯನ್ನು ಪಡೆದುಕೊಳ್ಳುತ್ತಿರುವುದನ್ನೂ ನೋಡಲು ಸಿಕ್ಕುತ್ತದೆ.

ನಮ್ಮ ದೇಶದ ಸಮಾಜದಲ್ಲೆಲ್ಲ ಇದೇ ಬಗೆಯ ಮನೋವೃತ್ತಿಯ ಜನಗಳೇ ಹೆಚ್ಚಾಗಿ ತುಂಬಿಕೊಂಡಿದ್ದರೆ 'ಪ್ರಜಾಪ್ರಭುತ್ವವು' ನಮ್ಮ ನಾಡಿನಲ್ಲಿ ಬೇರು ಹಿಡಿವ ಆಶೆಯೆಲ್ಲಿ ?

ಜನ್ಮದಿಂದ ಜಾತಿಗಳೂ ಮತ್ತು ಪ್ರಜಾಪ್ರಭುತ್ವವೂ ಪರಸ್ಪರ ಅಸಂಬದ್ಧ. ಪ್ರಜಾಪ್ರಭುತ್ವವು ಸ್ಥಾಪಿತವಾಗಬೇಕಾಗಿದ್ದರೆ ಹುಟ್ಟಿನಿಂದ ಬರುವ ಜಾತಿ, ಧರ್ಮಗಳು ಅಳಿಯಲೇಬೇಕು. ಯಾರೊಬ್ಬರಿಗೆ ಅವರ ಹುಟ್ಟಿನಿಂದಲೇ ಯಾವುದೊಂದು ಜಾತಿ, ಧರ್ಮವು ಅಂಟಿಕೊಂಡು ಅವರಿಗೆ ಆ ಬಗೆಯಲ್ಲಿ ಮೇಲಿನ ಅಥವಾ ಕೆಳಗಿನವನೆಂಬ ಸ್ಥಾನವು ದೊರೆಯುವುದೇ ಸರಿಯೆಂದು ನಮ್ಮ ದೃಢವಾದ ನಂಬುಗೆಯಿದ್ದರೆ ನಾವು ಪ್ರಜಾಪ್ರಭುತ್ವವನ್ನು ನಮ್ಮ ಗುರಿಯೆಂದು ಹೇಳುವುದು ಅಯುಕ್ತವು. ಪ್ರಜಾಪ್ರಭುತ್ವವು ತಮ್ಮ ಗುರಿ ಯೆಂದು ಒಪ್ಪಿ ಮತ್ತೆ ಒಳಗೊಳಗೇ ತಮ್ಮ ಜಾತಿಭೇದಗಳನ್ನು ಪುಟಗೊಳಿ ಸುವ ಮನುಷ್ಯರು ವಂಚಕರೆಂದೇ ಹೇಳಬೇಕಾಗುತ್ತದೆ. ನಮ್ಮಲ್ಲಿ ಅನೇಕ

ರಿಗೆ ತಾವು ಆಡುವ ಮಾತಿನ ಅರ್ಥವು ಅದರ ಮುಂದಿನ ಉಪಸಿದ್ಧಾಂತಗಳ ತೊಡಕುಗಳು ಗೊತ್ತಾಗದೆ, ಅವರು ಪತ್ರಿಕೆಗಳಲ್ಲಿ ಓದಿದ ಅಥವಾ ಹಿರಿಯ ಮುಖಂಡರು ಆಡಿದ ಮಾತುಗಳನ್ನು ಗಿಳಿಯಂತೆ ಉಸುರುತ್ತಿರುತ್ತಾರೆ. ಶಿಳಿ ಗೇಡಿಗಳಾದ ಪ್ರಾಮಾಣಿಕ ಪ್ರಾಣಿಗಳ ವರ್ಗವು ಇದೊಂದು. ಪ್ರಜಾಪ್ರಭು ತ್ವಕ್ಕೆ ಒಪ್ಪಿಕೊಂಡುದರ ಹೊಣೆಯೇನೆಂಬುದರ ಅರಿವೇ ಈ ಜನಕ್ಕಿರುವುದಿಲ್ಲ. ಈ ಕಾರಣದಿಂದಲೆ ಪ್ರತ್ಯಕ್ಷ ಹೊತ್ತುಬಂದಾಗ ಇವರು ವಿಪರೀತವಾಗಿ ನಡೆದುಕೊಳ್ಳುವುದು ಕಂಡುಬರುತ್ತದೆ.

ಆದಕಾರಣ, ಇಂದು ತಿಳುವಳಿಕೆ ಬಂದ ಪ್ರತಿಯೊಬ್ಬ ಗೃಹಸ್ಥನು ಮೊದಲು ತನ್ನ ಹೃದಯಪರೀಕ್ಷೆ ಮಾಡಿಕೊಂಡು ನೋಡುವುದು ಕರ್ತವ್ಯ ವಾಗಿದೆ. ಪಂಡಿತ ಜವಾಹರಲಾಲ ಮತ್ತು ಮಹಾತ್ಮಾಜಿಯವರು, ಪ್ರಜಾಪ್ರಭುತ್ವವು ನಮ್ಮ ರಾಷ್ಟ್ರದ ಗುರಿಯೆಂದು ಹೇಳಿದ್ದು ನಿಜ. ಆದರೆ ಆ ಮಾತು ತನಗೆ ಒಪ್ಪಿಗೆಯೇ? ಒಪ್ಪಿಗೆಯಾದರೆ ತಮ್ಮ ಪರಂಪರಾಗತ ಭಾವನೆಗಳನ್ನೆಲ್ಲ ಬದಲಿಸಿಕೊಳ್ಳಲು ಮನಸ್ಸು ಸಿದ್ಧಪಡಿಸಿಕೊಳ್ಳಬೇಕು. ಹೀಗೆ ಮನಸ್ಸನ್ನು ಕ್ರಮವಾಗಿ ನಿಶ್ಚಿತವಾಗಿ ತಿದ್ದಿಕೊಳ್ಳಲು ಸಮಾಜವು ಅಣಿಯಾಗದಿದ್ದರೆ ಅಥವಾ ಸಮಾಜವನ್ನು ಅಣಿಮಾಡದಿದ್ದರೆ 'ಪ್ರಜಾ ಪ್ರಭುತ್ವವೇ ನಮ್ಮ ಗುರಿ' ಎಂದು ಮಾಡಿದ ಸಂಕಲ್ಪವು ಬರಿ ಕಾಗದದ ಮೇಲಣ ಎಣಿಕೆಯಾಗಿ ಉಳಿಯದೆ ಇರಲಾರದು.

ಇಂದು ಮೇಲಿನ ಜಾತಿಧರ್ಮದವರೆಂದು ಹೇಳಿಕೊಳ್ಳುವ, ಅಥವಾ ಹಾಗೆ ಭಾವನೆಯಿರುವ ಸಮಾಜದವರು ಪ್ರಜಾಪ್ರಭುತ್ವದ ತತ್ವವನ್ನು ಒಪ್ಪಿ ಕೊಂಡೊಡನೆ ಜಾತಿಯಿಂದ, ಹುಟ್ಟಿನಿಂದ ಇಲ್ಲವೆ ಧರ್ಮದಿಂದ ದೊರೆವ ಅನಾ ಯಾಸವಾದ ಶ್ರೇಷ್ಠತೆ, ಮಾನ ಮಾನ್ಯತೆಗಳನ್ನೆಲ್ಲ ತೊರೆಯಲು, ಸಿದ್ಧರಾಗ ಬೇಕಾಗುತ್ತದೆ. ಹುಟ್ಟಿನಿಂದ ಯಾರೂ ಹೆಚ್ಚಿನವರಲ್ಲ. ಅವರವರು ಸಂಪಾ ದಿಸುವ ಶಿಕ್ಷಣ, ಸಂಸ್ಕೃತಿಗಳ ಹಿರಿಮೆಯ ಮೇಲೆಯೆ ಆ ವ್ಯಕ್ತಿಯ ಮೇಲು ಕೀಳುಗಳು ಅವಲಂಬಿಸಿವೆ, ಎಂಬ ಮಾತನ್ನು ಸಮಾಜದಲ್ಲಿ ಜನಸಾಮಾನ್ಯ ರಿಗೆಲ್ಲ ಚೆನ್ನಾಗಿ ಮನದಟ್ಟಾಗುವಂತೆ ತಿಳಿಸುವುದು ಅವಶ್ಯವಾಗಿದೆ. ಪ್ರಜಾ ಪ್ರಭುತ್ವವನ್ನು ಬರಮಾಡಿಕೊಳ್ಳಲು ಅತ್ಯಂತ ಅವಶ್ಯಕವಾದ ಪ್ರಾಥಮಿಕ ಶಿಕ್ಷಣವು ಇದೇ ಆಗಿದೆ.

ಆದಕಾರಣ, ಪ್ರಜಾಪ್ರಭುತ್ವವೇ ನಮ್ಮ ಗುರಿಯಾಗಿದ್ದಲ್ಲಿ ಜಾತಿ, ಧರ್ಮಗಳ ಹೆಸರಿನ ಸಂಬಂಧ ಹಚ್ಚಿ ನಡಸುವ ಸಾರ್ವಜನಿಕ ಯಾವ ಪ್ರಯತ್ನ ಗಳಿಗೂ ತಮ್ಮ ನೆರವನ್ನೀಯಲಾಗದು. ಅಲ್ಲದೆ ಇಂತಹ ಪ್ರಯತ್ನಗಳಿಂದ ಸಾಮಾಜಿಕ ಸಮಭಾವನೆಗೆ ಅಡ್ಡಿಯಾಗುತ್ತಿದ್ದಲ್ಲಿ ಅವನ್ನು ವಿರೋಧಿಸಿ, ತಡೆದು ನಿಲ್ಲಿಸುವುದೂ ಸರಕಾರದ ಕರ್ತವ್ಯವಾಗಿದೆ. ಉದಾಹರಣಾರ್ಥವಾಗಿ, ಇಂದು ನಡೆದಿರುವ ಜಾತೀಯ ವಿದ್ಯಾರ್ಥಿಗಳ ವಸತಿಗೃಹಗಳ ಒಂದು ಮಾತನ್ನೇ ನೋಡಬಹುದು. ಇಂತಹ ವಸತಿಗೃಹಗಳಲ್ಲಿ ಇರಬೇಕಾಗುವ ವಿದ್ಯಾರ್ಥಿಗಳಿಗೆ ಅವರ ಆ ವಿಶಿಷ್ಟವಾದ ಜಾತಿ, ಧರ್ಮವೇ ಮಿಗಿಲಾದುದು ಎಂಬ ಬೋಧನೆಯು ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷವಾಗಿ ನಡೆಯದೆ ಇರದು. ಈ ಬಗೆಯ ವಾತಾವರಣದಲ್ಲಿ ಬೆಳೆದ ತರುಣರಿಗೆ ಭಿನ್ನ ಮತೀಯ ಒಳ್ಳೆಯ ಗೆಳೆಯರ ಸಂಗತಿ ಸಹವಾಸಗಳ ಲಾಭವು ಸಾಕಷ್ಟು ದೊರೆಯಲು ಅಷ್ಟು ಆಸ್ಪದವು ಉಳಿಯುವುದಿಲ್ಲ. ಇದರಿಂದ ಆ ತರುಣರು ಏಕಾಂತಿಕ ವಿಚಾರಿ ಗಳಾಗುವ ಸಂಭವವಿದೆ. ದೊಡ್ಡವರಾದ ಬಳಿಕ ಅವರಲ್ಲಿ ಉಳಿದ ಧರ್ಮ, ಜಾತಿಗಳ ಬಗೆಗೆ ವಿಶೇಷ ಸಹಾನುಭೂತಿ ಉಂಟಾಗುವ ಪ್ರಸಂಗವು ಬಂದರೂ ಆಗ ಅವರು ಒಂದು ಬಗೆಯ ಧರ್ಮಸಂಕಟಕ್ಕೆ ಒಳಗಾಗುತ್ತಾರೆ. ತಮ್ಮನ್ನು ಚಿಕ್ಕಂದು ಪೋಷಿಸಿ ಶಿಕ್ಷಣ ಕೊಟ್ಟ ಜಾತಿಗೆ ತಾನು ಹೆಚ್ಚು ಒಲೆಯದಿರುವುದು ಕೃತಜ್ಞತೆಯ ಲಕ್ಷಣವೆ? ಎಂಬ ವಿಚಾರವು ಆಗಾಗ ತೊಂದರೆಗೆ ಈಡು ಮಾಡುವುದು.

ಹೀಗಾಗಿ ವಿಶಿಷ್ಟ ಜಾತೀಯ ಶಿಕ್ಷಣ ಸಂಸ್ಥೆಗಳಿಂದ ನೆರವನ್ನು ಪಡೆ ದವರು, ಮುಂದಿನ ತಮ್ಮ ಜೀವನದಲ್ಲಿ ತೀರ ನಿಷ್ಪಕ್ಷಪಾತಿಗಳಾಗಿ ತಮ್ಮ ದಲ್ಲದ ಇನ್ನೂ ಒಂದು ಮತದವರ ವಿಶ್ವಾಸದ ಮುಂದಾಳಾಗಿ ಬೆಳೆಯಲು ಬಹಳ ಕಷ್ಟವಾಗುತ್ತದೆ ಒಂದು ಮತದವನು ಇನ್ನೊಂದು ಮತದ ಸಮಾ ಜದ ಮುಂದಾಳುಗಳಾಗಿರುವ ಉದಾಹರಣೆಗಳು ತೀರ ವಿರಳವಾಗಿರುವುದೇ ನನ್ನ ಮಾತಿನ ಸತ್ಯತೆಯ ಸಾಕ್ಷಿಯಾಗಿದೆ. ಆದುದರಿಂದ ಇಂತಹ ಸಂಘ, ಸಂಸ್ಥೆ, ಸಮಿತಿಗಳು ನಮ್ಮ ನಾಡಿನ ಪ್ರಜಾಪ್ರಭುತ್ವದ ಗುರಿಯನ್ನು ಮುಟ್ಟಲು ಅಡ್ಡಿಯನ್ನುಂಟುಮಾಡುವ ಕಾಲ್ತೊಡಕುಗಳೆಂದು ಹೇಳದೆ ಗತಿಯಿಲ್ಲ. " ಈ ಕಾರಣದಿಂದಲೆ ಇಂತಹವುಗಳನ್ನು ನಾಡಿನ ಏಳ್ಗೆಗೆ ಅನು

ಕೂಲವಾಗುವಂತೆ ಮಾರ್ಪಡಿಸಿಕೊಳ್ಳಬೇಕು. ಇಲ್ಲವಾದರೆ ಅವನ್ನು ತಡೆದು ನಿಲ್ಲಿಸಬೇಕು.

ಘಟನಾ ಸಮಿತಿಯು ಪ್ರಜಾಪ್ರಭುತ್ವವು ತನ್ನ ಗುರಿಯೆಂದು ಸಾರಿದ್ದಾಯಿತು. ಆದರೆ ಇನ್ನು ಮುಂದಿನ ಕೆಲಸವೆ ಬಹಳ ಹಿರಿಯದಾಗಿದೆ. ಜನಾಭಿಪ್ರಾಯವನ್ನು ಈ ಗುರಿಗೆ ತಕ್ಕಂತೆ ಯೋಗ್ಯ ರೀತಿಯಲ್ಲಿ ಬದಲಿಸಿ ಕೊಳ್ಳುವುದಕ್ಕಾಗಿ ನಾಡಿನಲ್ಲೆಲ್ಲ ಹೊಸ ಚಳವಳವು ಆರಂಭವಾಗಬೇಕು. ಅದಕ್ಕಾಗಿ ಅವಶ್ಯಕವಾದ ಹೊಸ ಸಂಸ್ಥೆಗಳು ತಲೆದೋರಬೇಕು.

ಕಳೆದ ವರುಷ ಮಿರತ ಕಾಂಗ್ರೆಸ್ಸಿನ ಕಾಲಕ್ಕೆ 'ಜಾತಿವರ್ಗ ವಿನಾಶಕ ಪರಿಷತ್ತು' ಒಂದು, ಪಟ್ಟಾಭಿ ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ನೆರೆಯುವುದಿದ್ದಿತು. ಆದರೆ ಹಿಂದೂ-ಮುಸಲ್ಮಾನರ ದೊಂಬಿಗಳಿಂದ ಉಂಟಾದ ಅನಿಶ್ಚಿತ ವಾತಾವರಣದ ಮೂಲಕ ಆ ಪರಿಷತ್ತು ಜರುಗಲಿಲ್ಲ. ಆದರೂ ಶ್ರೀ ಪಟ್ಟಾಭಿ ಸೀತಾರಾಮಯ್ಯನವರ ಅಧ್ಯಕ್ಷೀಯ ಭಾಷಣದ ಬಹುಭಾಗವು ಪತ್ರಿಕೆಗಳಲ್ಲಿ ಪ್ರಸಿದ್ಧವಾದುದನ್ನು ಅನೇಕ ಓದುಗರು ಓದಿರಲೂ ಸಾಕು.

ರಾಷ್ಟ್ರೀಯ ಮುಂದಾಳುಗಳು— ವಿಶೇಷವಾಗಿ ಮ. ಗಾಂಧಿ, ಜವಾಹರಲಾಲ ಪ್ರಭೃತಿಗಳಿಗೆ ಇದರ ಸಂಪೂರ್ಣ ಅರಿವು ಇದೆ. ಈಗಿರುವಂತೆಯೆ ಜಾತಿಬಂಧನದಲ್ಲಿ ನಮ್ಮ ಸಮಾಜವು ಸಿಕ್ಕಿಕೊಂಡಿರುವುದಾದರೆ ಪ್ರಜಾಪ್ರಭುತ್ವವು ಕೇವಲ ಕನಸೆಂಬುದನ್ನು ಅವರು ಬಲ್ಲರು. ಈ ಕಾರಣದಿಂದಲೇ ಮಹಾತ್ಮಾಜೀಯವರು ಜನ್ಮದಿಂದ ವರ್ಣಗಳೆಂಬ ತಮ್ಮ ಮೊದಲಿನ ಅಭಿಪ್ರಾಯವನ್ನು ಮಾರ್ಪಡಿಸಿಕೊಂಡಿದ್ದಾರೆ. ಹಿಂದೂಧರ್ಮದವರಲ್ಲಿ (ಹಳೆಯ ಸಂಪ್ರದಾಯದ ವಿರುದ್ಧ) ಬೇಕಾದವರು ತಮ್ಮ ಸಮಾನ ಸಂಸ್ಕೃತಿಯವರೊಡನೆ ಮದುವೆಯಾಗಬಹುದೆಂದು ಒಪ್ಪಿಗೆಯನ್ನಿತ್ತಿದ್ದಾರೆ. ಜನ್ಮದಿಂದ ವರ್ಣಗಳಲ್ಲ; ಗುಣಕರ್ಮಕ್ಕೆ ಅನುಸರಿಸಿ ವರ್ಣಗಳು ಎಂಬ ಮಾತೇ ಈಗ ಮುಂದೆ ಬಂದಿದೆ; ಬ್ರಾಹ್ಮಣ-ಅಬ್ರಾಹ್ಮಣ, ಸ್ಪೃಶ್ಯ-ಅಸ್ಪೃಶ್ಯವೆಂಬ ಭೇದವನ್ನು ತೊರೆದು ಯೋಗ್ಯ ವಧೂವರರಲ್ಲಿ ಹಿಂದುಗಳು ಮದುವೆ ನಡಸಬೇಕೆಂಬ ತತ್ವವನ್ನು ಈ ಮುಂದಾಳುಗಳೇ ಪ್ರತಿಪಾದಿಸಿ ಶಕ್ಯವಿದ್ದಲ್ಲಿ ಅದನ್ನು ನಡೆವಳಿಯಲ್ಲಿಯೂ ತಂದಿದ್ದಾರೆ.

'ಯದ್ಯದಾ ಚರತಿ ಶ್ರೇಷ್ಠಃ ತತ್ತದೇವೇತರೋ ಜನಾಃ' ಗುರುವಿನಂತೆ ಶಿಷ್ಯ. ನಮ್ಮ ನಾಡಿನ ಮುಂದಾಳುಗಳು ಪ್ರಜಾಪ್ರಭುತ್ವಕ್ಕೆ ಅವಶ್ಯಕವಾದ ರೀತಿಯ ಮಾರ್ಪಾಟುಗಳನ್ನು ಈ ತೆರನಾಗಿ ತಮ್ಮ ನಡೆನುಡಿಗಳಲ್ಲಿ ಮಾಡಿಕೊಳ್ಳುತ್ತಿರುವುದೇ ನಾಳಿನ ನಮ್ಮ ಭಾಗ್ಯೋದಯದ ಪೂರ್ವಸೂಚನೆಯಾಗಿದೆ. ಹಿಂಬಾಲಿಗರಲ್ಲಿ ರೂಢಿಪರಂಪರೆಗಳ ಪ್ರಭಾವವು ಒಮ್ಮೆಲೆ ಕಡಿಮೆಯಾಗುವುದು ಕಷ್ಟ. ಆದರೂ ಮುಂದಾಳುಗಳ ಈ ನಡೆವಳಿಯು ನಾಡಿಗೆಲ್ಲ ಮೇಲ್ಪಂಕ್ತಿಯಾಗಿ ಅದು ಅವರ ಅನುಯಾಯಿಗಳ ಮೇಲೂ ಕ್ರಮವಾಗಿ ಪರಿಣಾಮವನ್ನು ಮಾಡದೆ ಇರಲಾರದು.

— ಜ. ಕ. ಜೂನ ೧೯೪೭

ಪ್ರಜಾಪ್ರಭುತ್ವದ ಯಶಸ್ಸಿಗೆ ವರ್ಣರಹಿತ, ವರ್ಗರಹಿತ ಸಮಾಜದ ಅವಶ್ಯಕತೆಯಿದೆ. ಆದುದರಿಂದ ಪ್ರಜಾಪ್ರಭುತ್ವವು ಭಾರತದ ಗುರಿಯೆಂಬುದು ನಿಜವಿದ್ದರೆ ವರ್ಣರಹಿತ, ವರ್ಗರಹಿತ ಸಮಾಜ ನಿರ್ಮಾಣಕ್ಕೆ ನೆರವಾಗುವುದು ಪ್ರತಿಯೊಬ್ಬ ಭಾರತ ಹಿತಚಿಂತಕನ ಕರ್ತವ್ಯವಲ್ಲವೆ?

ಜನ್ಮದಿಂದ ಇರುವ ಜಾತಿಗಳನ್ನೂ ಉಳಿಸಿಕೊಂಡು ಪ್ರಜಾಪ್ರಭುತ್ವವನ್ನೂ ಬಯಸುವುದು ಅಸಂಗತವು. ಇವುಗಳಲ್ಲಿ ಯಾವುದಾದರೂ ಒಂದು ಸಾಧ್ಯ. ಏಕೆಂದರೆ ಇವೆರಡೂ ಪರಸ್ಪರ ವಿಸಂಗತವಾಗಿವೆ. ಒಂದೊಂದು ಜಾತಿಯ ಹಿರಿಯರು ಸೇರಿ ಊರ 'ದೈವ'ದವರಾಗಿ, 'ಮಹಾಜನ'ರೆನಿಸಿ ಹಳ್ಳಿಗಳ ಆಡಳಿತ ನಡೆಯುತ್ತಿದ್ದ ಕಾಲವು ಹಿಂದೆ ಆಯ್ತು. ಜನ್ಮದಿಂದ ದೊರೆಕೊಳ್ಳುವ ಜಾತಿ ಮತ್ತು ಅದಕ್ಕೊಂದು ವಿಶಿಷ್ಟ ಬೆಲೆಯನ್ನು ಅಂದಿನ ಯುಗವು ದೈವದತ್ತವೆಂದು ನೆರೆನಂಬಿದ್ದಿತು. ಆದರೆ ಆ ನಂಬುಗೆಯು ಆಧುನಿಕ ಶಾಸ್ತ್ರಜ್ಞರಿಗೆ ಮಾನ್ಯವಿಲ್ಲ; ಅದು ನಿರಾಧಾರವಾದ ಹುರುಳಿಲ್ಲದ ಶ್ರದ್ಧೆಯೆಂದು, ಇಂದಿನ ಯುಗವು ಅದನ್ನು ತಿರಸ್ಕರಿಸಿದೆ. ಹುಟ್ಟಿನಿಂದ ಕೆಲವೊಂದು ಗುಣವಿಶೇಷಗಳು ಪ್ರತಿಯೊಬ್ಬರಲ್ಲೂ ಹೆಚ್ಚುಕಡಿಮೆ ಪ್ರಮಾಣದಲ್ಲಿ ಇರುವುದು ನಿಜವಾದರೂ, ಪರಿಸ್ಥಿತಿ, ಶಿಕ್ಷಣ, ರಾಜಕೀಯ ಅನುಕೂಲತೆ ಮೊದಲಾದ ಕಾರಣಗಳಿಂದ ಯಾರಾಗಲಿ ತಮ್ಮ ಯೋಗ್ಯತೆಯನ್ನು ಅಂತಃಶಕ್ತಿಗಳನ್ನು, ವಿಕಾಸಗೊಳಿಸಿಕೊಳ್ಳಬಲ್ಲರು. ಆದುದರಿಂದ ಕೇವಲ ಜನ್ಮದಿಂದಲೇ ಇಂತಹರು ಮೇಲು, ಇಂತಹರು ಕೀಳು ಎಂದು

ಎಣಿಸುವುದು ಅಸಮರ್ಪಕವೆಂದು ಶಾಸ್ತ್ರ ಮತ್ತು ಅನುಭವದಿಂದ ಮನಗಂಡ ಮಾತಾಗಿದೆ. ಆದಕಾರಣ ಹುಟ್ಟಿನ ಮೇಲಿಂದಲೇ ಯಾರಿಗೂ ಹೆಚ್ಚಿನ ಬೆಲೆ ಕೊಡದೆ, ಮುಂದೆ ಸ್ವಪ್ರಯತ್ನದಿಂದ ಪಡೆದುಕೊಂಡ ಸಂಸ್ಕಾರ, ಮಾಡಿಕೊಂಡ ಶಕ್ತಿವಿಕಾಸಾದಿಗಳಿಂದಲೇ ವ್ಯಕ್ತಿಗಳ ಯೋಗ್ಯತೆಯನ್ನು ನಿರ್ಣಯಿಸಬೇಕೆಂಬುದು ಪ್ರಜಾಪ್ರಭುತ್ವದ ಸಿದ್ಧಾಂತವಾಗಿದೆ.

ಹಲರು ಗುರುವರ್ಗದವರೆಂದು ಹುಟ್ಟಿನಿಂದಲೆ ಶ್ರೇಷ್ಠರೆಂಬ ಠೀವಿಯಲ್ಲಿ ಜನಸಾಮಾನ್ಯರ ಮೇಲೆ ಅಧಿಕಾರ ನಡಸುವ ಚಟವು ಅಲ್ಲಲ್ಲಿ ಕಂಡುಬರುತ್ತದೆ. ತಾವು ಶ್ರೀಮಂತರು, ಕುಲವಂತರು, ಮಠಸ್ಥರು, ಪಟ್ಟದವರು, ರಾಯರು, ಗೌಡರು, ಧನಿಯರು ಎಂದು ಮುಂತಾಗಿ ಹುಟ್ಟಿನಿಂದಲೇ ಪ್ರತಿಷ್ಠೆಯನ್ನು ಹಕ್ಕಿನಿಂದ ಕೇಳುವ ಅಧ್ವರು ಊರೂರಿಗೆ ಉಂಟು. ಇವರೆಲ್ಲರೂ ಧರ್ಮರಾಜನು ಯಕ್ಷನ ಎದುರು ನಡೆದುಕೊಂಡ ಬಗೆಯನ್ನು ಗಮನಿಸಲಿ. ತಮ್ಮಂದಿರಲ್ಲಿ ' ನ-ಕುಲ 'ನಿಗೆ ಜೀವದಾನಮಾಡಲು ಧರ್ಮನು ಯಕ್ಷನನ್ನು ಪ್ರಾರ್ಥಿಸಿಕೊಂಡನು. ಬಲಿಷ್ಠರಾದ ಭೀಮ, ಅರ್ಜುನರನ್ನಲ್ಲ. ನಿಜವಾಗಿ ತನ್ನ ತಾಯಿಮಕ್ಕಳನ್ನೇ ಜೀವಂತ ಮಾಡೆಂದು ಕೇಳಬೇಕಾಗಿತ್ತು! ನಮ್ಮ ನಾಡಿನ ಗುರುವರ್ಗದವರು—ಬ್ರಾಹ್ಮಣ, ಜಂಗಮ, ಯತಿ, ಸಿದ್ಧರು ಮೊದಲಾದವರು, ನಿಜವಾಗಿಯೆ ಧರ್ಮವಂತರಾಗಿದ್ದರೆ ಧರ್ಮರಾಯನಂತೆ ಇವರೂ ತಮ್ಮ ' ನ-ಕುಲ 'ರನ್ನು ಮೊದಲು ಮೇಲೇಳಿಸಬೇಕಲ್ಲವೆ? 'ನ-ಕುಲನ' ಜೊತೆಗೆ (ಸಹ)ದೇವನು ಯಾವಾಗಲೂ ಇರುತ್ತಾನೆ. ಏಕೆಂದರೆ ಇವರು ಅವಳಿ(ಜವಳಿ). ಪತಿತರು ದೀನರುಗಳ ಉದ್ಧಾರದಲ್ಲಿಯೆ ದೇವಸೇವೆಯಾಗುವುದೆಂದು ಸಂತಸಜ್ಜನರು ಹೇಳುವುದನ್ನು ಶ್ರೀವ್ಯಾಸರ ' ನ-ಕುಲ ' ಮತ್ತು ' ಸಹ-ದೇವ 'ರೆಂಬ ಅವಳಿಗಳ ಸಂಕೇತದಲ್ಲೂ ಮನಗಾಣಬಹುದು.

ಸಾಮಾಜಿಕ ಅಥವಾ ರಾಜಕೀಯ ಒಂದು ಮತದವರ ವಿರುದ್ಧ ಇನ್ನೊಂದು ಮತದವರನ್ನು ' ಛೂ ' ಬಿಡುವುದಕ್ಕೆ ಹೊತ್ತಿನಲ್ಲಿ ಉಪಯೋಗವಾಗುವುದೆಂದು ಇಂದು ಹಲಕೆಲವರು ಪತಿತೋದ್ಧಾರದ ಕಾರ್ಯದಲ್ಲಿ ಮನಸು ಹಾಕಿದ್ದಾರೆ. ಇದರಿಂದ ವರ್ಗಕಲಹ, ವರ್ಣದ್ವೇಷಗಳೇ ಹೆಚ್ಚಾಗುವುವಲ್ಲದೆ ದೇಶದ ಏಳ್ಗೆಯು ಸ್ವಲ್ಪವೂ ಆಗಲಾರದು. ವೈಯಕ್ತಿಕ ನಿಃಸ್ವಾರ್ಥತೆಯಷ್ಟೇ ಸಾಲದು; ಪಕ್ಷಪಂಗಡದ ಅಧಿಕಾರ ಲಾಲಸೆಯ ಲೋಭವೂ

ಈ ಕೆಲಸದಲ್ಲಿ ತೊಡಗಿದವರಿಗೆ ಸೋಂಕುವುದು ಅನಿಷ್ಟ. ಇನ್ನೊಬ್ಬ ತಾಯ ಮಗನಾದರೂ 'ನ-ಕುಲನು' ತನ್ನ ತಮ್ಮನು. ತನ್ನ ಉಳಿದ ಖಾಸ ತಮ್ಮಂದಿರಗಿಂತ ಆತನು ಎಳ್ಳಷ್ಟೂ ಕಡಿಮೆಯವನಲ್ಲ. ಆತನನ್ನೂ ಖಾಸ ತಮ್ಮಂದಿರಷ್ಟೆ -ಅದೇಕೆ ಚಿಕ್ಕವನೆಂದು ಸ್ವಲ್ಪ ಹೆಚ್ಚೇ ಅಕ್ಕರೆಯಿಂದ ಕಾಣುವುದು ಅಣ್ಣನ ಧರ್ಮವಾಗಿದೆ; ಅಥವಾ ಧರ್ಮವಂತ ಅಣ್ಣನ ಕರ್ತವ್ಯವಾಗಿದೆ. ಈ ಬಗೆಯ ಬಂಧುಭಾವ, ದಯೆ, ಅಂತಃಕರಣ, ಕರುಣೆ, ಪ್ರೀತಿಯೆ ಪತಿತೋದ್ಧಾರದ ಕಾರ್ಯಕ್ಕೆ ಪ್ರಚೋದಕ ಶಕ್ತಿಯಾಗಿದ್ದಷ್ಟೂ ಅದು ಪವಿತ್ರವಾದ ಪುಣ್ಯದ ಕೆಲಸವಾಗುವುದು. ಇದಕ್ಕೆ ಹೊರತಾದ ಬೇರೆ ಭಾವನೆಯಿಂದ ನಡೆದ ಪತಿತೋದ್ಧಾರದ ಕಾರ್ಯವು ದೊಡ್ಡ ಹೆಸರಿನಲ್ಲಿ ಕೇವಲ ಸ್ವಾರ್ಥಸಾಧನೆಗಾಗಿ ನಡಸಿದ ಅಕೃತ್ಯ.

ಬ್ರಿಟಿಶರು ತಮ್ಮ ಆಡಳಿತದಲ್ಲಿ ಧಾರ್ಮಿಕ ಸ್ವಾತಂತ್ರ್ಯ ಮತ್ತು ಅಲ್ಪಸಂಖ್ಯಾಕರ ಸಂರಕ್ಷಣೆ ಹೆಸರಿನಲ್ಲಿ ನಮ್ಮ ದೇಶದೊಳಗೆ ಪ್ರಜಾಪ್ರಭುತ್ವಕ್ಕೆ ವಿಘ್ನಕಾರಿಯಾದ ಕೆಲವು ಸಂಪ್ರದಾಯಗಳನ್ನು ಆಚರಣೆಯಲ್ಲಿ ತಂದಿದ್ದಾರೆ. ಜಾತಿನಿಶಿಷ್ಟ ಮತದಾರರ ಸಂಘಗಳು ಮತ್ತು ಜಾತಿಗಳ ಹೆಸರಿನಲ್ಲಿ ಪ್ರಾತಿನಿಧ್ಯ ಇವೆರಡು ಪದ್ಧತಿಗಳೂ ಪ್ರಜಾಪ್ರಭುತ್ವದ ಮೂಲತತ್ವಕ್ಕೆ ಅರದಾಳ ಹಚ್ಚುತ್ತವೆ. ಏಕೆಂದರೆ ಪ್ರಜಾಪ್ರಭುತ್ವದಲ್ಲಿ ಗುಣಕ್ಕೆ ಮನ್ನಣೆಯಲ್ಲದೆ ಜನ್ಮದಿಂದ ಬಂದ ಜಾತಿಗೆ ಸ್ಥಾನವೇ ಇಲ್ಲ. ಜಾತಿಜಾತಿಗಳಿಗೆ ಪ್ರಾತಿನಿಧ್ಯ ಕೊಡುವ ಆಮಿಷವನ್ನು ಹಚ್ಚಿದ್ದರಿಂದ ಪ್ರತಿಯೊಂದು ಪಂಗಡವೂ ಬ್ರಿಟಿಶ ಅಧಿಕಾರಿಗಳಲ್ಲಿ ಮೊರೆಯಿಟ್ಟು ತನ್ನ ಸಂರಕ್ಷಣೆಯನ್ನು ಕೇಳಿಕೊಳ್ಳಲಾರಂಭಿಸಿತು. ಹಿಂದೂ ಸಮಾಜದಿಂದ ತಾವು ಬೇರೆ; ನಮ್ಮದೊಂದು ಸ್ವತಂತ್ರ ಜಾತಿ, ಮತ, ಎಂದು ಮುಂತಾಗಿ ಸ್ಥಾಪಿಸಿಕೊಂಡರೆ ತಮಗೆ ವಿಶೇಷ ಪ್ರಾತಿನಿಧ್ಯವು ದೊರೆವ ಆಶೆಯು ತೋರಿ ಹಲವರ ಬಾಯಿಗೆ ನೀರು ಊರಿತು. ತಾವು ಶೀಖರು, ತಾವು ಜೈನರು, ತಾವು ವೀರಶೈವರು, ತಾವು ಅಸ್ಪೃಶ್ಯರು ತಾವು ದಲಿತರು ಎಂದು ಮೊದಲಾಗಿ ಹೇಳಿಕೊಳ್ಳುವುದರಿಂದ ವಿಶೇಷ ಅಧಿಕಾರಸ್ಥಾನಗಳು, ಪ್ರಾತಿನಿಧಿತ್ವವು ದೊರೆಯಲಾರಂಭಿಸಿದ್ದನ್ನು ಕಂಡು ಹಾರುವರೆನಿಸಿಕೊಳ್ಳುವವರಲ್ಲಿ ಕೆಲವರು ತಾವು 'ಬ್ರಾಹ್ಮಣರಲ್ಲ;' ಏಕೆಂದರೆ ಸಾಮಾನ್ಯವಾಗಿ ಬ್ರಾಹ್ಮಣರೆಂಬವರಿಗಿಂತಲೂ ತಾವು ಬೇರೆ ಎಂದು ಮೆತ್ತಗೆ ಗೊಣಗುವ ದನಿಯೂ ಹೊರಡಲಾರಂಭಿಸಿತು.

ಇದೆಲ್ಲವೂ ಪ್ರಜಾಪ್ರಭುತ್ವದ ಮೂಲಕ್ಕೆ ಕೊಡಲಿಯ ಪೆಟ್ಟು. ಬ್ರಿಟಿಶರು ತಮ್ಮ ಸ್ವಾರ್ಥಕ್ಕಾಗಿ ಮುಸಲ್ಮಾನ ಮೊದಲಾದ ಜಾತಿಗಳಿಗೆ ವಿಶೇಷ ಹಕ್ಕು, ಪ್ರಾತಿನಿಧ್ಯ ಕೊಟ್ಟು ಕೆಲವು ಪಂಗಡಗಳ ಜಾತೀಯ ಸ್ವಾರ್ಥಬುದ್ಧಿಯನ್ನು ಬಲಿಸಿಟ್ಟಿದ್ದಾರೆ. ತಮಗೆ ದೊರೆತ ವಿಶೇಷ ಪ್ರಾತಿನಿಧ್ಯ, ಅನ್ಯಾಯದ ಹಕ್ಕುಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಇವರಲ್ಲಿ ತಮ್ಮ ಜಾತೀಯತೆಯನ್ನು ಕಾಯ್ದುಕೊಳ್ಳುವ ಚಪಲವು ತಲೆದೋರುತ್ತಿದ್ದರೆ ಸೋಜಿಗವಿಲ್ಲ.

ಇದೇ ಬಗೆಯ ಒಂದು ಸ್ವಾರ್ಥಭಾವವು ಬ್ರಾಹ್ಮಣರನ್ನು ಬಾಧಿಸುತ್ತಲಿದೆ. ಗುಣಕ್ಕೆ ಮನ್ನಣೆಯನ್ನೀಯಬೇಕೆಂದು ತತ್ವವನ್ನು ಪ್ರತಿಪಾದಿಸಿ, ಗುಣಿಗಳೆಂದರೆ ಬ್ರಾಹ್ಮಣರೆ. ಎಂಬ ಸಮೀಕರಣವನ್ನು ಮರುಮಾತಿನಲ್ಲಿ ಮೆಲ್ಲಗೆ ಹೇಳುತ್ತಾರೆ. ತಾವೇ ಬುದ್ಧಿವಂತರಾದುದರಿಂದ ಮಹತ್ವದ ಸ್ಥಾನಗಳು ತಮಗೇ ದೊರೆಯಬೇಕೆಂಬ ಹಿರಿಯಾಸೆ ಈ ಜನಕ್ಕೆ.

ಇಂದಿನ ಬ್ರಾಹ್ಮಣರಿಗೆ 'ತಾವು ಬ್ರಾಹ್ಮಣರು' ಎಂಬ ಅರಿವು ಅವರನ್ನು ಬಾಧಿಸುತ್ತದೆ. ಬ್ರಾಹ್ಮಣ, ತಾನು ಶ್ರೇಷ್ಠ; ಧೀಮಂತ ಎಂಬ ಸುಪ್ತ ಸೂಕ್ಷ್ಮ ಅಹಂಕಾರವು, ಅವನನ್ನು ಉಳಿದ ಜನಸಾಮಾನ್ಯರೊಡನೆ ಒಂದುಗೂಡಲಿಕ್ಕೆ ಅಡ್ಡಿಯನ್ನುಂಟು ಮಾಡುತ್ತಿದೆ.

ಇಂದಿನ ಸಾಮಾಜಿಕ ತೊಡಕುಗಳಲ್ಲಿ ಇಪೊಂದು ಅತಿ ವಿಚಿತ್ರವಾದ ಸಮಸ್ಯೆ. 'ತಾವು ಹಿಂದುಳಿದವರು, ಆದಕಾರಣ ತಮಗೆ ವಿಶೇಷ ಹಕ್ಕು, ಪ್ರಾತಿನಿಧ್ಯ, ನೌಕರಿ ದೊರೆಯಲೇಬೇಕು' ಎಂದು ಹೇಳುವ ಜನವು ಇದಕ್ಕಾಗಿ ಈ ಬಗೆಯಾದ. ಹಕ್ಕು, ನೌಕರಿ ದೊರೆವ ವರೆಗೆ ತಮ್ಮ 'ಹಿಂದುಳಿತನ'ವನ್ನು ಬಿಡಲಾರದು. ಹಿಂದುಳಿದವರಿಗೆ ವಿಶೇಷ ಸವಲತ್ತು ಕೊಟ್ಟು ಮುಂದೆ ತರದಿದ್ದರೆ ಅವರು ಸುಧಾರಿಸಲಾರರು. ಔಷಧವೆಂದು ಕುಡಿಯುವುದಕ್ಕೆ ಆರಂಭಿಸಿದವನು ಕುಡಿತಕ್ಕೇ ಸವಿಗಲಿತು, ಬಳಿಕ, ಬೇನೆ ಹೋಗುವುದೇ ಬೇಡವೆಂದಂತೆ ಗಂಡಾಂತರದ್ದಾಗುವ ಹಾಗಿದೆ. ಈ ಸೂಕ್ಷ್ಮ ಧರ್ಮಸಂಕಟದೊಳಗಿಂದ ಪಾರಾಗುವ ದಾರಿಯು ಬಲು ಇಕ್ಕಟ್ಟಿನದಾಗಿದೆ.

ಗುಣಕ್ಕೆ ಮನ್ನಣೆಯನ್ನೀಯಬೇಕು, ಎಂಬ ತತ್ವಪ್ರಚಾರಕರು, ಪರ್ಯಾಯದಿಂದ ಬ್ರಾಹ್ಮಣ ಜಾತಿಯವರ ಸ್ವಾರ್ಥ ಸಾಧಿಸಿಕೊಳ್ಳುವುದಕ್ಕಾಗಿಯೇ ಹೂಡಿದ ಆಟವಿದು ಎಂಬ ಸಂದೇಹಕ್ಕೆ ಎಳ್ಳಷ್ಟೂ ಇಂಬು ದೊರೆಯ

ದಂತೆ ತಮ್ಮ ನುಡಿವಳಿ, ನಡೆವಳಿಯನ್ನಿಡುವುದು ಅವರ ಕರ್ತವ್ಯವಾಗಿದೆ. ಜನ್ಮದಿಂದ ಬ್ರಾಹ್ಮಣ್ಯವು ಯಾರಿಗೂ ಪ್ರಾಪ್ತವಾಗುತ್ತಿರುವುದಿಲ್ಲ. ದ್ವಿಜತ್ವವು ಸಂಸ್ಕಾರದಿಂದ ಬರುವುದು ಎಂಬ ತತ್ವವನ್ನು ಇಂದಿನ ಜಾತಿಬ್ರಾಹ್ಮಣರು ಬೇಗನೆ ಒಪ್ಪಿಕೊಂಡಷ್ಟೂ ಲೇಸು. ಆಗಲೇ ಗುಣಕ್ಕೆ ಮರ್ಯಾದೆಯನ್ನೀಯಲು ಉಳಿದ ಸಮಾಜವು ನಿರಾತಂಕವಾಗಿ ಒಪ್ಪಿಕೊಳ್ಳುವುದು. ಹುಟ್ಟಿನಿಂದಲೇ ತಾವು ಬ್ರಾಹ್ಮಣರು ಎಂಬ ಹೆಮ್ಮೆಯು ಅಂಟಿಕೊಂಡಿರುವತನಕ ಗುಣಿಯಾಗಿದ್ದರೂ ಬ್ರಾಹ್ಮಣನೆಂಬುದರ ಸಲುವಾಗಿಯೇ ಆತನನ್ನು ಹಿಂದಿಕ್ಕಬೇಕೆಂಬ ಅಸೂಯೆಯು ಈರ್ಷೆಯು ಇನ್ನುಳಿದವರಲ್ಲಿ ತಲೆಯೆತ್ತುವುದು ಸಹಜವಾಗಿದೆ. ಹುಟ್ಟಿನಿಂದ ಎಲ್ಲರೂ ಸಮಾನರು, ವಿದ್ಯೆ, ಸಂಸ್ಕಾರ, ಸ್ವಾನುಭವಗಳಿಂದ ಮನುಷ್ಯನು ತನ್ನ ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳಬಲ್ಲನೆಂಬುದು ಪ್ರಜಾಪ್ರಭುತ್ವಕ್ಕೆ ಹೊಂದಿಕೆಯಾದ ಮಾತು. ಹುಟ್ಟಿನಿಂದಲೇ ಯಾರೂ ಹೆಚ್ಚಿನವರಲ್ಲ. ಈ ಬಗೆಯಾದ ಗ್ರಹಿಕೆಯು ಅಶಾಸ್ತ್ರೀಯ; ಸ್ವಾರ್ಥಸಾಧನೆಗಾಗಿ ಕೆಲವೊಂದು ವರ್ಗದವರು ಪೋಷಿಸಿಕೊಂಡು ಬಂದ ನಿರಾಧಾರವಾದ ಗ್ರಹಿಕೆ ಇದು.

ಇಂದಿನ ಜಾತಿಬ್ರಾಹ್ಮಣರದೂ ಒಂದು ವಿಸಂಗತವಾದ ವಿಚಾರಸರಣಿ. ತಾವು ಬ್ರಾಹ್ಮಣರೆಂಬ ಅಭಿಮಾನ ಇವರಿಗೆ. ಆದರೆ 'ಬ್ರಾಹ್ಮಣ' ಎಂದುಕೊಂಡೊಡನೆ ಕ್ರಮಪ್ರಾಪ್ತವಾದ ಬ್ರಾಹ್ಮಣ್ಯದ ಹೊಣೆಗಾರಿಕೆ ಮಾತ್ರ ಬೇಡ! ಬ್ರಾಹ್ಮಣ್ಯದ ಹೊಣೆಗಾರಿಕೆ ಒಲ್ಲದ ಬರಿ ಅಭಿಮಾನ, ದುರಭಿಮಾನ. ಅದು ಬ್ರಾಹ್ಮಣಿಕೆಯ ಕೊಬ್ಬು. (ಬ್ರಾಹ್ಮಣನು ಯಾರು? ಎಂಬ ಹೆಚ್ಚಿನ ವಿವರಗಳನ್ನು ಇನ್ನೊಂದೆಡೆಗೆ ಕೊಟ್ಟಿದೆ.) ಸತ್ಯಜ್ಞಾನಿಯಾಗಿ ತತ್ವನಿಷ್ಠನಾಗಿ ಲೋಕಕಲ್ಯಾಣಕ್ಕಾಗಿ ತನ್ನ ಜೀವನವನ್ನು ಸವೆಸುವುದು ಬ್ರಾಹ್ಮಣನ ಕರ್ತವ್ಯ. ಇದಕ್ಕೆ ಹೊರತಾದವರು ಬ್ರಾಹ್ಮಣರೇ ಅಲ್ಲವೆಂದು ವೇದ, ಉಪನಿಷತ್ತು, ಮಹಾಭಾರತಾದಿಗಳಿಂದ ನಿಃಸಂದಿಗ್ಧವಾಗಿ ಗೊತ್ತಾಗುತ್ತದೆ. ಬ್ರಾಹ್ಮಣರೆಂಬ ವವರೆಲ್ಲ ತತ್ವಚ್ಯುತರಾಗದೆ ಇದ್ದರೆ ನಮ್ಮ ಸಮಾಜಕ್ಕೂ, ದೇಶಕ್ಕೂ ಈ ಅಧೋಗತಿಯು ಬರುತ್ತಲೆ ಇದ್ದಿಲ್ಲ. ಇಂತಹ ತತ್ವನಿಷ್ಠ ಬ್ರಾಹ್ಮಣರನ್ನು ವಿರೋಧಿಸುವ ಸಾಹಸವು ಯಾರಿಂದಲೂ ಆಗುತ್ತಿದ್ದಿಲ್ಲ. ಹಾಗೆ ಯ್ಯಾರಾದರೂ ಮದಾಂಧರಾಗಿ ಆ ಬ್ರಹ್ಮಸ್ವಾಪಹರಣಕ್ಕೆ ಮನಸು

ಮಾಡಿದರೆ ಕಪಿಲಋಷಿಯ ಮೇಲೆ ಏರಿಬಂದ ಸಗರಪುತ್ರರಂತೆ ಅವರು ಸ್ವಯಂದಗ್ಧರಾಗದೆ ಹೋಗರು. ಮೊನ್ನೆ ಮಹಾತ್ಮಾಜಿಯವರ ಕೊಲೆಯ ತರುವಾಯ ಆದ ಘಟನೆಗಳಿಂದ ಸಗರರ ನಾಶದ ಪೌರಾಣಿಕ ಕತೆಯ ಸತ್ಯತೆಯನ್ನು ಮನಗಾಣಬಹುದಾಗಿದೆ. ಆ ಬಗೆಯ ಬ್ರಾಹ್ಮಣ ಘಾತದಿಂದುಂಟಾಗುವ ಪ್ರಳಯದಲ್ಲಿ ಯುಕ್ತಾಯುಕ್ತ ವಿವೇಕವು ಉಳಿಯುವುದಿಲ್ಲ. ಹಸಿದು ಒಣದೂ ಕೂಡಿಯೆ ಸುಡುವುದು.

ನಿಜವಾಗಿ ಬ್ರಾಹ್ಮಣನಿಗೆ ಬ್ರಾಹ್ಮಣತ್ವವು ಬಂದುದು ಆತನ ಶೀಲದಿಂದ; ಆತ್ಮಜ್ಞಾನಯುಕ್ತ ನಡೆವಳಿಯಿಂದ. 'ಸರ್ವಭೂತ ಹಿತದಲ್ಲಿ ರತನಾಗಿ' ಜೀವನಪಥದಲ್ಲಿ ಸಾಗಿದವನು ಲೋಕಪೂಜ್ಯನಾಗುವಲ್ಲಿ ಸಂದೇಹವೇನು? ರಾವಣ, ಜರಾಸಂಧಾದಿ ಲೋಕಕಂಟಕರು ಬ್ರಾಹ್ಮಣಪೀಡೆಗೆ ಮನಸು ಮಾಡಿದಾಗ ಶ್ರೀರಾಮ, ಶ್ರೀಕೃಷ್ಣರಂತಹ ವೀರರು ಅವರ ರಕ್ಷಣೆಗೆ ತಾವಾಗಿಯೆ ಮುಂದೆ ಬರಲಿಲ್ಲವೆ? ಸೂರ್ಯನಿಗೆ ಸೂರ್ಯನೆನ್ನಲು ಒಲ್ಲದವನು ತಾನೇ ನಗೆಗೆ ಈಡಾಗುವನು. ಬೆಂಕಿಯೊಡನೆ ಚೆನ್ನಾಟವಾಡ ಹೋದಲ್ಲಿ ಅದು ಆತನ ಮೈಸುಡದೆ ಇರಲಾರದು. ಗುಣ-ಶೀಲವಂತರನ್ನು ನಾಮಶೇಷ ಮಾಡುವುದು ಯಾರಿಂದಲೂ ಸಾಧ್ಯವಿಲ್ಲ. ಬ್ರಿಟಿಶ ಸರಕಾರದಂತಹ ಅಗಾಧ ಶಕ್ತಿಯ ಸಮ್ರಾಟರು ತಿಲಕ, ಗಾಂಧೀಜಿಯವರನ್ನು ಹುಡಿಗೂಡಿಸಲು ಹವಣಿಸಿ ತಾವೇ ಮಣ್ಣುಮುಕ್ಕಿದ್ದನ್ನು ನಾವೇ ನೋಡಿಲ್ಲವೆ? ಸತ್ಯಕ್ಕೆ ಸಾವಿಲ್ಲ. ಸತ್ಯಸಂಧರಾದವರನ್ನು ನಾಶಮಾಡುವುದಕ್ಕೆ ಪ್ರಯತ್ನಿಸುವವನೆ ಆತ್ಮನಾಶ ಮಾಡಿಕೊಳ್ಳುವನು. ಹೀಗೆ ಗುಣ-ಶೀಲದಲ್ಲಿ ಮೂಲಭೂತವಾಗಿರುವ ಅಂತಃಶಕ್ತಿಯಲ್ಲಿಯೆ ವಿಶ್ವಾಸವಿಲ್ಲದವರು ಬ್ರಾಹ್ಮಣರೇ ಅಲ್ಲ. ಏಕೆಂದರೆ ಗುಣ-ಶೀಲದಲ್ಲಿ ಶ್ರದ್ಧೆಯಿಲ್ಲದವರು ಆಸ್ತಿಕರೆ ಅಲ್ಲ. ಅಗಮ್ಯ ಅಗೋಚರವಾದ ಈಶಶಕ್ತಿಯ ಗಮ್ಯವಾದ ಅಂಶವೆಂದರೇ ಲೋಕದ ನಡೆನುಡಿವಳಿಯಲ್ಲಿ ಕಾಣಿಸಿಕೊಳ್ಳುವ ಗುಣ-ಶೀಲ. ಗುಣ-ಶೀಲದಲ್ಲಿ ಈ ಬಗೆಯ ಶ್ರದ್ಧೆಯಿದ್ದು ಹಾಗೆ ನಡೆವಳಿಯಿದ್ದವರು ಯಾರಿಗೂ ಹೆದರುವ ಕಾರಣವೆ ಇಲ್ಲ. ಇಂತಹ ನಡೆನುಡಿಯಿದ್ದವರು ಯಾವ ಜಾತಿ, ಕುಲ, ದೇಶದವರಿದ್ದರೂ ಅವರೆ ನಿಜವಾದ ಬ್ರಾಹ್ಮಣರು.

ನಮ್ಮಲ್ಲಿ ಇಂದು ಕಾಣುತ್ತಿರುವವರೆಲ್ಲ ಬಹುತರ ಜಾತಿಬ್ರಾಹ್ಮಣರೇ.

ನಿಜವಾದ ಬ್ರಾಹ್ಮಣರೇ ಇಲ್ಲ. ಆದುದರಿಂದ ಭಾರತದಲ್ಲಿ ಇಂದು ಎಲ್ಲರೂ ಒಂದೇ ವರ್ಣದವರು. ಕೆಲವರಿಗೆ ಬಹುಕಾಲದಿಂದ ವಿದ್ಯಾಭ್ಯಾಸದ ಅನುಕೂಲತೆಗಳು ದೊರೆತುವು. ಕೆಲವರಿಗೆ ದೊರೆಯಲಿಲ್ಲ; ಇಷ್ಟೇ ಭೇದ. ವಿದ್ಯಾಭ್ಯಾಸದ ಅನುಕೂಲತೆಗಳಿದ್ದ ಕೆಲವು ಜಾತಿಯವರೂ ಬಲಿಷ್ಠ ಜಾತಿಯ ಕೆಲವು ಪ್ರಬಲರೂ ಮುಸಲ್ಮಾನರ ಆಳಿಕೆಯಲ್ಲಿಯೂ, ಬ್ರಿಟಿಶರ ಆಡಳಿತದಲ್ಲಿಯೂ ದೇಶದಲ್ಲಿ ಆವರಿಸಿದ ಕೃತ್ರಿಮ ವಾತಾವರಣದಲ್ಲಿ ದೇಶದ್ರೋಹಿಗಳಾಗಿ ತಮ್ಮ ಸ್ವಾರ್ಥ ಸಾಧಿಸಿಕೊಂಡು, ಮಹತ್ವದ ಸ್ಥಾನಗಳನ್ನು ಆಕ್ರಮಿಸಿಕೊಂಡು ಕುಳಿತಿದ್ದಾರೆ. ಈಗ ಅದಕ್ಕೆ ಆಘಾತವಾಗುತ್ತಲೆ ಉತ್ಪಾತಕ್ಕೆ ಆರಂಭವಾಯಿತೆಂಬಂತೆ ಗುಲ್ಲು ಎಬ್ಬಿಸುತ್ತಿದ್ದಾರೆ. ( ಜಾತಿಬ್ರಾಹ್ಮಣರೂ, ಸಂಸ್ಥಾನಿಕರೂ, ಜಹಗೀರದಾರರೂ ಮುಂ. )

ಆದರೆ, ಈ ಪರಿಸ್ಥಿತಿಯನ್ನು ತಿಪ್ಪುವುದಕ್ಕೆಂದು ಮುಂದೆ ಬಂದವರು ಸಮಾಜದಲ್ಲಿ ಜಾತಿದ್ವೇಷವನ್ನೂ ವರ್ಗಕಲಹಗಳನ್ನೂ ನಿರ್ಮಾಣಮಾಡುತ್ತಿರುವರು. ಇದೂ ಶೋಚನೀಯವೇ. ಏಕೆಂದರೆ ರೋಗಕ್ಕಿಂತಲೂ ಅದನ್ನು ಹೋಗಲಾಡಿಸಲು ನಡಸುವ ಉಪಾಯಗಳು, ಇನ್ನೂ ದಾರುಣವಾದ ಪರಿಣಾಮವಾಗುವಂತಹವು ಇರಲಾಗದು. ಈ ಸಂದರ್ಭದಲ್ಲಿ ತಪ್ಪೋನಿಧಿ ಮಹಾತ್ಮಾಜಿಯವರೇ ನಮಗೆಲ್ಲ ಮೇಲ್ಪಂಕ್ತಿ. ನಿಂದ್ಯ ಉಪಾಯಗಳಿಂದ ವಂದ್ಯವಾದ ಕಾರ್ಯಗಳು ಎಂದೂ ಸಿದ್ಧಿಸವು, ಎಂಬುದು ಮಹಾತ್ಮಾಜಿಯವರ ಎಲ್ಲ ಕಾರ್ಯಕಲಾಪಗಳೊಳಗಿನ ಸೂತ್ರವಾಕ್ಯವಾಗಿತ್ತು. ದ್ವೇಷಾಸೂಯೆಗಳಿಗೆ ಧೂಪ ಹಾಕಿ ಎಬ್ಬಿಸಿದ ಜನಜಂಗುಳಿ ವೇತಾಳಮಂತ್ರದಿಂದ ಎಚ್ಚರಿಸಿದ ಭೂತವಿದ್ದಂತೆ. ಅದು ಮಾಂತ್ರಿಕನನ್ನೆ ಕೊನೆಗೆ ತಿನ್ನುವುದೆಂದು ಹೇಳುವ ಲೋಕಾನುಭವವು ಸುಳ್ಳಲ್ಲ. ಅಹಿಂಸೆ ಮತ್ತು ಪ್ರೀತಿಯ ಸಿದ್ಧಿಯಿಂದ ಆಗುವ ಕಾರ್ಯವು ಎಷ್ಟು ಲೋಕೋತ್ತರವಾದುದಾಗಿರುತ್ತದೆಂಬುದಕ್ಕೆ ಮಹಾತ್ಮಾಜಿಯವರ ಕೃತಿಗಳೇ ಸಾಕ್ಷಿ. ಮಹಾತ್ಮಾಜಿಯವರಿಗೆ ಬ್ರಿಟಿಶರ ನೀಚ ಕೃತಿಗಳು ಗೊತ್ತಿದ್ದರೂ ಅವರ ಬಗೆಗೆ ದ್ವೇಷದ ಪ್ರಚಾರ ಮಾಡುವುದು ಬೇಕಾಗಿರಲಿಲ್ಲ; ಸಿರಿವಂತರು ನಡಸುವ ಬಡವರ ಸುಲಿಗೆಯನ್ನು ಗಾಂಧೀಜಿಯವರು ಖಂಡಿಸಿದರು. ಆದರೂ ಅವರ ಬಗೆಗೆ ಜನರಲ್ಲಿ ಅಸೂಯೆಯನ್ನು ಹುಟ್ಟಿಸಲಿಲ್ಲ. ಸಾಮಾನ್ಯವಾಗಿ ಬ್ರಾಹ್ಮಣರಲ್ಲಿ ತಾವು ಶ್ರೇಷ್ಠರೆಂಬ ಅಭಿಮಾನವು

ಮನೆಮಾಡಿಕೊಂಡಿರುವುದನ್ನು ಅರಿತವರಾದರೂ ತಮ್ಮ ಉದಾತ್ತ ನಡೆನುಡಿಗಳಿಂದ, ಗಾಂಧೀಜಿಯವರೇ ನಿಜವಾದ ಬ್ರಾಹ್ಮಣರೆಂದು ಅವರಿಂದಲೇ ಹೊಗಳಿಸಿಕೊಳ್ಳಲಿಲ್ಲವೆ? ಬಿರ್ಲಾದಿಗಳು ತಮ್ಮ ಸಂಪತ್ತನ್ನು ಗಾಂಧೀಜಿಯವರ ಅಡಿಯಲ್ಲಿ ಇಡುವುದಕ್ಕೆ ಮುಂದೆ ಬರಲಿಲ್ಲವೇ?

ಅಂತರ್‌ರಾಷ್ಟ್ರೀಯ ವ್ಯವಹಾರದಲ್ಲಿ ಅಹಿಂಸೆಯನ್ನು ಬಳಸುವ ಸುಯೋಗವು ಬೇಗನೆ ಬರಲಿ, ಎಂದು ಲೋಕವೆಲ್ಲವೂ ಹಂಬಲಿಸುತ್ತಿರುವ ಕಾಲದಲ್ಲಿ ಒಂದು ರಾಷ್ಟ್ರದೊಳಗಿನ ಜನಗಳೇ ದ್ವೇಷಾಸೂಯೆಗಳಿಂದ ಪ್ರೇರಿತರಾಗಿ ಹಿಂಸಾಚಾರಕ್ಕೆ ಪ್ರವೃತ್ತರಾದರೆ ಆ ದೇಶದ ರಾಷ್ಟ್ರೀಯ ಸ್ವಾತಂತ್ರ್ಯವು ಬೇಗನೆ ನಾಮಶೇಷವಾಗದೆ ಇರಲಾರದು. ಪ್ರಾಮಾಣಿಕವಾದ ಭಿನ್ನಾಭಿಪ್ರಾಯಗಳನ್ನು ಸಹನೆಯಿಂದ ತಾಳಿಕೊಂಡು ಅವಕ್ಕೆಲ್ಲ ಅವಕಾಶವನ್ನು ಕಲ್ಪಿಸಿಕೊಡದೆ ಇರುವ ದೇಶವು ಸ್ವಾತಂತ್ರ್ಯವನ್ನು ಪಡೆದಿದೆಯೆಂದು ತಿಳಿಯಲಾಗದು. ಅಲ್ಲಿ ಸ್ವಾತಂತ್ರ್ಯದ ಗಂಧವೂ ಇರುವುದಿಲ್ಲ.

ಒಂದು ಪಕ್ಷವು ಇನ್ನೊಂದು ಪಕ್ಷವನ್ನೂ ದ್ವೇಷಿಸಿ ಹಿಂಸಾಚಾರಗಳಿಂದ ಅದನ್ನು ನೆಲಕ್ಕಿಕ್ಕಿ, ಮಣ್ಣುಗೂಡಿಸುವ ಗುಪ್ತಸಂಘಟನೆಯನ್ನು ನಡಸುವ ದುರ್ಬುದ್ಧಿಯು ನಮ್ಮ ನಾಡಿಗರೊಳಗಿಂದ ಇಲ್ಲನಂತಾಗುವ ವರೆಗೆ ಪ್ರಜಾಪ್ರಭುತ್ವವು ನಮ್ಮ ದೇಶದಲ್ಲಿ ಎಂದೂ ತಲೆಯೆತ್ತಲಾರದು. ಸ್ವರಾಜ್ಯದ ಹಲವು ಪದ್ಧತಿಗಳಲ್ಲಿ ಪ್ರಜಾಪ್ರಭುತ್ವವೇ ಎಲ್ಲಕ್ಕೂ ಮಿಗಿಲಾದುದು. ಉಳಿದವು ಹೆಚ್ಚುಕಡಿಮೆ ಸರ್ವಾಧಿಕಾರಿತ್ವದ ಪರ್ಯಾಯಗಳೇ ಆಗಿವೆ. ಒಬ್ಬ ಸರ್ವಾಧಿಕಾರಿಯ ಕೈಯಲ್ಲಿ ತಮ್ಮ ಆಗು-ಹೋಗುಗಳನ್ನೆಲ್ಲ ಒಪ್ಪಿಸಿ ತಮ್ಮ ವಿವೇಕ, ವಿಚಾರಶಕ್ತಿಯನ್ನೆಲ್ಲ ಕುಗ್ಗಿಸಿಕೊಂಡು ಆತನನ್ನು ಕಣ್ಣುಮುಚ್ಚಿ ಅನುಸರಿಸಲು ಸಿದ್ಧರಾಗುವುದೆಂದರೆ ಮನುಷ್ಯರಿದ್ದವರು ಕುರಿಗಳಾಗಲು ಒಪ್ಪಿಕೊಂಡಂತೆಯೆ ಸರಿ. ಈ ಜನ ಬರಿ ನರಗುರಿಗಳು ಆಗುತ್ತಿದ್ದರೂ ಎಷ್ಟೋ ಲೇಸಿರಬಹುದಿತ್ತು. ಆದರೆ ಇನ್ನೊಂದು ಪಕ್ಷದ ವಿಷಯದಲ್ಲಿ ದ್ವೇಷಾಸೂಯೆಗಳನ್ನು ತುಂಬಿ ರೊಚ್ಚಿಗೆಬ್ಬಿಸಿ ಈ ಅನುಯಾಯಿಗಳನ್ನು ಎದುರಾಳಿಗಳ ಬೇಟೆಗೆ ಸದಾ ಸಜ್ಜಾಗಿರುವಂತೆ ಮಾಡಿ, ಮುಂದಾಳುಗಳು ಕಾಡುಪ್ರಾಣಿಗಳ ಸಾಲಿಗೆ ಈ ಜನರನ್ನು ಒಯ್ದು ನಿಲ್ಲಿಸುತ್ತಾರೆ. ಯಾವನೊಬ್ಬ ಮುಂದಾಳಿನ

ಕೆಲವೊಂದು ವಿಚಾರಗಳು, ಆ ಪಕ್ಷದ ಕೆಲವೊಂದು ಕಾರ್ಯಕ್ರಮಗಳು ದೇಶಕ್ಕೆ ಸದ್ಯಕ್ಕೆ ಉಪಯುಕ್ತವಾಗಿವೆಯೆಂದು ಗ್ರಹಿಕೆಯಾಗಿ ವಿಶ್ವಾಸದಿಂದ ಹತ್ತಿರ ಬಂದವರನ್ನು ಈ ಬಗೆಯಾಗಿ ಪಕ್ಷಾಂಧರನ್ನಾಗಿಸುವ ರೀತಿ ಅತ್ಯಂತ ನಿಂದ್ಯವಾಗಿದೆ. ದೇಶದೊಳಗಿನ ಜನರು ಸ್ವತಂತ್ರ ವಿಚಾರಕ್ಷಮರು ಆಗುವುದರಿಂದ ರಾಷ್ಟ್ರದಲ್ಲಿ ಸುಖವು ಉಳಿದೀತೆ ಹೊರತು ವಿಕಾರವಶರಾಗಿ ರಾಷ್ಟ್ರದೊಳಗಿನ ಒಂದು ಪಕ್ಷದವರು ಇನ್ನೊಂದು ಪಕ್ಷದವರ ಚೆಂಡಾಡುವುದನ್ನು ಆರಂಭಿಸಿದರೆ ಯಾವ ಪಕ್ಷವೂ ಆರೋಗ್ಯಕರವಾಗಿ ಬೆಳೆಯಲಾರದು. ಭಿನ್ನಾಭಿಪ್ರಾಯಗಳಿದ್ದರೆ ಜನರಿಗೆ ಅವನ್ನು ಬಹಿರಂಗವಾಗಿ ತಿಳಿಸಿ ಹೇಳುವ ಸಂಸ್ಥೆಗಳು ಹೊರಡುವುದರಲ್ಲಿಯೆ ರಾಷ್ಟ್ರದ ಬೆಳವಣಿಗೆಯಿದೆ. ಚುನಾವಣೆಗಳ ಮುಖಾಂತರವಾಗಿ ಜನತೆಯ ಅಭಿಪ್ರಾಯವನ್ನು ತಿಳಿದುಕೊಂಡು ಯಾವ ಪಕ್ಷವಾಗಲಿ ಅದಕ್ಕನುಗುಣವಾಗಿ ನಡೆಯುವುದರಲ್ಲಿಯೆ ಪ್ರಜಾಪ್ರಭುತ್ವದ ತಿರುಳಿದೆ. ಇದಕ್ಕೆ ವಿಪರೀತವಾಗಿ ಹಿಂಸಾಚಾರಗಳಿಂದ ಜನರನ್ನು ಬೆದರಿಸಿ ತಮ್ಮ ಪಕ್ಷವನ್ನು ಬೆಳಸಿಕೊಳ್ಳುವ ಅಧಮರು ರಾಷ್ಟ್ರವನ್ನೆ ರಸಾತಳಕ್ಕೆ ನೂಕುತ್ತಾರೆ. ಹಿಟ್ಲರ ಮುಸಲೋನಿಗಳೆ ಇದಕ್ಕೆ ಸಾಕ್ಷಿ. ರಶಿಯದ ಸರ್ವಾಧಿಕಾರಿತ್ವವೂ ಯಾವಾಗ ಆ ನಾಡನ್ನು ಪಾತಾಳಕ್ಕೆ ಒಯ್ಯುವುದೊ ಹೇಳಲಿಕ್ಕಾಗದು. ಸರ್ವಾಧಿಕಾರಿತ್ವದಿಂದ ಬೇಗನೆ ಪ್ರಗತಿಯಾದಂತೆ ಎನಿಸಿದರೂ ಅದು ಸ್ಥಿರವಾದ ಲೋಕಶಕ್ತಿಯ ಬಲದ ಅಡಿಗಲ್ಲ ಮೇಲೆ ನಿಂತುದಲ್ಲ. ಒಬ್ಬ ವ್ಯಕ್ತಿಯ ಅಥವಾ ನಾಲ್ಕಾರು ವ್ಯಕ್ತಿಗಳ ಪ್ರಭಾವದಿಂದಾದ ಏಳ್ಗೆ, ಆ ವ್ಯಕ್ತಿಗಳು ಕಣ್ಮರೆಯಾದ ಕೂಡಲೆ ಅವರೊಡನೆ ಆ ರಾಷ್ಟ್ರವೂ ಹಿಂದೆ ಬೀಳುವುದು. ಜನಸಾಮಾನ್ಯರ ಮಟ್ಟವನ್ನು ಹೆಚ್ಚಿಸುವುದೇ ಪ್ರಜಾಪ್ರಭುತ್ವದೊಳಗಿನ ಅತ್ಯಂತ ಶ್ರೇಷ್ಠ ಗುಣ. ಇಂಗ್ಲೆಂಡಿನ ವೈಶಿಷ್ಟ್ಯವೇನಾದರೂ ಇದ್ದರೆ ಅದು ಈ ಗುಣದಲ್ಲಿಯೆ ಇದೆ. ಇಂಗ್ಲೆಂಡಿನಲ್ಲಿ ರಾಜಕೀಯ ರಂಗದಲ್ಲಿ ಪಕ್ಷ-ಪಕ್ಷಗಳು ಹಿಂಸಾಮಾರ್ಗವನ್ನು ಎಂದೂ ಅನುಸರಿಸುವುದಿಲ್ಲ. ಇಂದು ಸಾಮ್ರಾಜ್ಯವನ್ನೇ ತುಂಡರಿಸಿ, ಹಿಂದುಸ್ತಾನ, ಬ್ರಹ್ಮದೇಶ, ಸಿಲೋನಗಳ ಸ್ವಾತಂತ್ರ್ಯವನ್ನು ಕೊಡುವ ಕೂಲಿಕಾರ ಪಕ್ಷದ ಅಟ್ಲೆ, ಕ್ರಿಪ್ಸರನ್ನು ಕೊಲ್ಲಲು ಸಾಮ್ರಾಜ್ಯವಾದೀ ಪಕ್ಷದ ತರುಣರ ಪಿತ್ತ ನೆತ್ತಿಗೇರಿ ಒಮ್ಮೆಯೂ ಪ್ರಯತ್ನಿಸದೆ ಇರುವುದು ಅವರ ರಾಜಕೀಯ ವಿಚಾರದ ಹಿರಿಮೆಯನ್ನೇ ತೋರಿಸುವುದಿಲ್ಲವೆ? ಮಾಂಸಭಕ್ಷಕ

ರಾದರೂ ಅಹಿಂಸಾವ್ರತಸ್ಥರಲ್ಲವೆ ಅವರು ? ಜಾತ್ಯಂಧತೆಯಂತೆ ಪಕ್ಷಾಂಧತೆಯು ಬೆಳೆದುಕೊಂಡರೂ ಅದು ಸ್ವಾತಂತ್ರ್ಯಕ್ಕೆ ಬಾಧಕವೇ ಆಗಿದೆ.

ಪಂಥಗಳ ಗುರಿಯು ಅಧಿಕಾರಲಾಲಸೆಗಿಂತ ಲೋಕಹಿತವೇ ಮುಖ್ಯವಾಗಿರಬೇಕು. ಪ್ರಾಮಾಣಿಕವಾದ ಅಭಿಪ್ರಾಯಗಳ ಮಂಡನಪ್ರಚಾರಗಳಿಗಾಗಿ ಒಂದು ಪಕ್ಷವು ಇನ್ನೊಂದನ್ನು ಟೀಕಿಸಬೇಕಾಗುವುದು, ಖಂಡಿಸಬೇಕಾಗುವುದು ನ್ಯಾಯವೇ ಆಗಿದೆ. ಆದರೆ ಅದು ನ್ಯಾಯವಾದ ಮಾರ್ಗದಿಂದ ನಡೆಯಬೇಕು. ಹಿಂಸಾ, ಅತ್ಯಾಚಾರಗಳ ಹಾದಿಯಿಂದಲ್ಲ. ಜನರ ವಿಚಾರಗಳನ್ನು ಅರಳಿಸಬೇಕಲ್ಲದೆ ವಿಕಾರಗಳನ್ನು ಕೆರಳಿಸಬಾರದು.

ಭಾರತೀಯರು ನಾವು ಬ್ರಿಟಿಶರಿಗಿಂತಲೂ ಹೆಚ್ಚು ಸಾತ್ವಿಕರೂ, ಧರ್ಮನಿಷ್ಠರೂ ಎಂದು ಹೆಮ್ಮೆಯಿಂದ ಹೇಳಿಕೊಳ್ಳುವುದುಂಟು. ಬ್ರಿಟಿಶರು ಮಾಂಸಭಕ್ಷರು; ನಾವು ಮಾಂಸಹಾರಿಗಳಲ್ಲ. ಬ್ರಿಟಿಶರು ಗೋಭಕ್ಷರೂ; ನಾವು ಗೋಪೂಜಕರು; ಎಂದು ಮೊದಲಾಗಿ ಹೋಲಿಸಿಕೊಂಡು ಅವರಿಗಿಂತ ತಾವು ಮಿಗಿಲಾದವರೆಂಬ ಆತ್ಮವಂಚನೆಯನ್ನೆ ಮಾಡಿಕೊಳ್ಳುತ್ತಲಿದ್ದೇವೆ. ಏಕೆಂದರೆ ಗೋಪೂಜೆಮಾಡುವ ನಮ್ಮ ಆವು ಸಾಮಾನ್ಯವಾಗಿ ಒಂದು ವರುಷ ಹಿಂಡುವಷ್ಟು ಹಾಲು, ಗೋಭಕ್ಷರ ಗೋವು ಒಂದು ತಿಂಗಳಲ್ಲೇ ಕರೆಯುವುದು ! ನಾವು ಬರಿ ಪೂಜೆಮಾಡಿ ಗೋಶುಶ್ರೂಷೆ—ಹಿಂಡಿ ಹತ್ತಿಕಾಳು ಹಾಕಿ ಆರೈಕೆ ಮಾಡುವುದು ಮರೆಯುವೆವು. ಬ್ರಿಟಿಶರು ಪೂಜೆಯ ಫಾರ್ಸುಮಾಡದೆ ಗೋವನ್ನೇ ಪುಷ್ಟವಾಗಿ ಆರೋಗ್ಯಕರವಾಗಿ ಸಲಹುತ್ತಾರೆ. ಬ್ರಿಟಿಶರು ಹಿಂಸಾಚಾರಿಗಳೆನಿಸಿದರೂ ಹೊರನಾಡುಗಳೊಡನೆ ಶಸ್ತ್ರಧರಿಸಿದರೂ ತಮ್ಮ ನಾಡಿನ ವಿರೋಧಿ ಪಕ್ಷದವರ ಕುತ್ತಿಗೆ ಕೊಯ್ಯುವ ಒಳಸಂಚು ಎಂದೂ ನಡಸುವುದಿಲ್ಲ; ಅಹಿಂಸಾ, ಸತ್ಯ, ತಪಸ್ಸು ನಮ್ಮ ಸಂಸ್ಕೃತಿಯ ತಿರುಳೆಂದು ಬಾಯಿಂದ ದಿನಾಲು ನಾವು ಧರ್ಮವಚನಗಳ ಪಠನಮಾಡುವೆವು. ಆದರೆ ಆಚಾರದಲ್ಲಿ ಎಲ್ಲವೂ ಹಿಂಸೆ, ದ್ವೇಷ, ಅಸೂಯೆಯ ವಿವಿಧ ರೀತಿಗಳು ! ಅದೂ ಒಳನಾಡಿನಲ್ಲಿ; ತನ್ನ ದೇಶಬಾಂಧವರೊಡನೆಯೆ ಹಗೆತನ ! ಹೊರರಾಷ್ಟ್ರಗಳಲ್ಲಿ ತೋರಬೇಕಾಗ ವೀರ್ಯ, ಶೌರ್ಯವೆಲ್ಲದರ ಪ್ರದರ್ಶನವೆಲ್ಲಿ ? ಮನೆಯ ಮುದುಕನ ಮುಂದೆ ! ಏನು ಧೈರ್ಯ ! ಎಂತಹ ಸಾಹಸ ! ಯಾವ ಧರ್ಮನೀತಿಯಿದು !

ಆದರೂ ಭಾರತೀಯರು ನಾವು ಶ್ರೇಷ್ಠರು! ಭಾರತವು ಧರ್ಮದ ತವರು! ತಮ್ಮ ಮೊಗಕ್ಕೆ ತಾವೇ ಆರತಿ ಬೆಳಗಿಕೊಳ್ಳುವುದರಿಂದ ಏನು ಭೂಷಣವೊ! ನಮ್ಮ ಜನಗಳು ಆಚರಿಸುತ್ತಿದ್ದುದು ನಿಜವಾದ ಧರ್ಮವೇ ಆಗಿದ್ದರೆ, ಅಧರ್ಮಾಚರಣೆಗೆ ದೊರೆಯತಕ್ಕ ಫಲಗಳನ್ನುಣ್ಣುವ ಪ್ರಸಂಗವು ನಮಗೆ ಬಂದುದೇಕೆ? ಮಾವಿನ ಬೀಜವನ್ನೆ ನೆಟ್ಟಿದ್ದರೆ ಅದಕ್ಕೆ ಬೇವಿನ ಕಹಿಹಣ್ಣು ಬರುವುದುಂಟೆ? ನಮ್ಮ ಇಂದಿನ ಪಾಡು ನಮ್ಮ ಯೋಗ್ಯತೆಯನ್ನೆ ಸೂಚಿಸುವುದಿಲ್ಲವೆ? ಎಲ್ಲಿಯೊ ನಾವು ತಪ್ಪುತ್ತಿರುವುದರಿಂದಲೆ ಜಗದ್ರಂಗದಲ್ಲಿ ನಾವು ಹಿಂದುಳಿದವರಾಗಿರಬೇಕಲ್ಲವೆ? ಹಾಗಾದರೆ ನಮ್ಮ ಆ ತಪ್ಪು ಯಾವುದು?

'ನೀನು ಯಾರು?' ಎಂದೊಡನೆ ಜಾತಿಯನ್ನು ನೆನೆದುಕೊಳ್ಳುವುದೇ ನಮ್ಮಲ್ಲಿ ವಾಡಿಕೆಯುಂಟಿದೆ. ಇದು ಬದಲಾಗಬೇಕು. ಇದೀಗ ಪ್ರಾಂತಭಾವನೆಯು ಸ್ವಲ್ಪಮಟ್ಟಿಗೆ ಆ ಸ್ಥಳದಲ್ಲಿ ಹಣೆಯಿಕ್ಕುತ್ತಿದೆ. ಆದರೆ ಇವೆಲ್ಲಕ್ಕಿಂತಲೂ ಮೊದಲು 'ನಾನು ಭಾರತೀಯ' ಹಿಂದುವೂ ಅಲ್ಲ; ಮಹಮ್ಮದೀಯನೂ ಅಲ್ಲ; 'ಭಾರತೀಯ' ಎಂಬ ನೆರೆನಂಬುಗೆಯು ನಮ್ಮ ನಾಡಿಗರಲ್ಲಿ ನೆಲೆಗೊಳ್ಳುವುದು ಅವಶ್ಯಕ. 'ಮೊದಲು ಭಾರತ; ಬಳಿಕ ನನ್ನ ಪ್ರಾಂತ; ಆ ಮೇಲೆ ನನ್ನ ಮತಧರ್ಮ' ಎಂಬ ತಾರತಮ್ಯ ಜ್ಞಾನವಿಲ್ಲದೆ ನಮ್ಮವರು ಬಹಳ ಹಾನಿಗೆ ಈಡಾಗಿದ್ದಾರೆ. 'ನಾನು ಮೊದಲು ಭಾರತೀಯನು' ಎಂಬ ನೆನಹು ನಮ್ಮ ರೋಮರೋಮಗಳಲ್ಲಿ ತುಂಬಿಕೊಂಡಲ್ಲಿ ಸಾರ್ವಜನಿಕ ಜೀವನದಲ್ಲಿ ಜಾತೀಯ ಪ್ರಶ್ನೆಯೆ ಮುಂದೆ ಬರಲಾರದು. ಪಕ್ಷಾಂಧತೆಯು ಕೂಡ ಹಿಮ್ಮೆಟ್ಟುವುದು. ಭಾರತದ ಹಿತವೇ ಹೆಗ್ಗುರಿಯಾಗಿ ಪ್ರಜಾಪ್ರಭುತ್ವವು ಯಶಸ್ವಿಯಾಗಬಲ್ಲದು.

---

# ಹಿಂದೂ ಎಂಬ ಸಮಾಜವು ಇದೆಯೆ ? ಆಗಬೇಕೆ ?

ಕೆಲದಿನಗಳ ಹಿಂದೆ ಒಂದು ಸುದ್ದಿ, ದಿನಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಅದನ್ನೋದಿ ನಮ್ಮ ಹಿರಿಯ ಮುಂದಾಳುಗಳೊಬ್ಬರು ತುಂಬ ಸಂತೋಷ ಪಟ್ಟುಕೊಂಡಿದ್ದರು. ಅವರು ನನ್ನನ್ನು ಕಾಣುತ್ತಲೆ ಎಂದರು: 'ಕಚ್ಛದಲ್ಲಿ ೮೦೦ ಜನ ಮುಸಲ್ಮಾನರು ಹಿಂದೂಗಳಾದರಂತೆ. ನಿಜವಾಗಿಯೂ ಬಹಳ ಆನಂದದ ಸಂಗತಿ; ಹೀಗೆಯೇ ಉಳಿದ ಭಾಗದಲ್ಲಿಯೂ ವಿಶೇಷತಃ ಉತ್ತರ ಹಿಂದುಸ್ತಾನದಲ್ಲಿ ಮುಸಲ್ಮಾನರು ಹಿಂದೂ ಧರ್ಮವನ್ನು ಸ್ವೀಕರಿಸಿದರೆ ಪಾಕಿಸ್ತಾನದ ಪ್ರಶ್ನೆಯೆ ಉಳಿಯುವುದಿಲ್ಲ....' ಎಂದು ಮುಂತಾಗಿ ತಮ್ಮ ವಾಕ್ ಪ್ರವಾಹವನ್ನು ನಡೆಸಿದರು.

ನನಗೆ ಅವರ ಈ ಮಾತುಗಳನ್ನು ಕೇಳುವಾಗ ತುಂಬ ದಿಗಿಲು. ಏನು ಹೇಳಬೇಕೊ ತಿಳಿಯದಾಯ್ತು. ಅವರಲ್ಲಿ ನನಗೆ ಅತ್ಯಂತ ಆದರ ಬೇರೆ. ಆದರೂ ಅವರ ವಿಚಾರಸರಣಿಯನ್ನು ಕಂಡು ದಿಗಿಲುಗೊಂಡು ನಾನು ಕೇಳಿದೆ: ಅಹುದು, ಆ ಸುದ್ದೀ ಓದಿ ನನಗೂ ಸಂತೋಷವಾಗಬಹುದಿತ್ತು. ಆದರೆ ಚಿಂತೆಯುಂಟಾಗಿದೆ. ನೀವು, ಎಲ್ಲರೂ ಹಿಂದೂ ಧರ್ಮಕ್ಕೆ ಬರಲೆಂದು ಹಾರಯಿಸಿದರಲ್ಲ, ಸರಿ; ಹಾಗೆ ಅವರು ಹಿಂದುಗಳಾದರೆಂದು ಬಗೆಯುವಾ. ನಮ್ಮ ಇಂದಿನ ಸಮಾಜದಲ್ಲಿ 'ಹಿಂದೂ' ಎಂದರೆ ಯಾರು ? ನಮ್ಮನ್ನು ಒಬ್ಬೊಬ್ಬರನ್ನೂ ಬಾರಿಸಿ ನೋಡಿದರೆ ಹೊರಡುವ ನಾದ ಏನು? ನಾನು ಬ್ರಾಹ್ಮಣ; ನಾನು ವೀರಶೈವ; ನಾನು ಮರಾಟ ಎಂಬೀ ಬಗೆಯದೆ ಅಲ್ಲವೆ ? ಈಗ ಮುಸಲ್ಮಾನಾದಿ ಧರ್ಮದಿಂದ ಮರಳಿ ಬಂದವರು 'ಹಿಂದೂ'. ಹಾಗಾದರೆ 'ಹಿಂದೂ' ಎಂದರೆ ಧರ್ಮಾಂತರ ಮಾಡಿ ಮರಳಿ ಬಂದವರೆ? 'ಹಿಂದೂ' ಎಂಬ ಹೊಸತೊಂದು ಜಾತಿಯು ನಿರ್ಮಾಣವಾಗಲಿ, ಎಂದು ನಿಮ್ಮ ಅರ್ಥವೊ? ಅವರು 'ಹಿಂದು'ಗಳು; ಸರಿ. ಹಾಗಾದರೆ ನಾವೂ ಹಿಂದುಗಳೊ ? ಅಥವಾ ಬ್ರಾಹ್ಮಣ, ಲಿಂಗಾಯತ, ಜೈನ, ಅಕ್ಕಸಾಲಿಗ....ರೊ ? ಅವರಿಗೆ ನೀವು ಯಾವ ಜಾತಿಯನ್ನು ಕಲ್ಪಿಸುವಿರಿ ? ಅಲ್ಲದೆ ಜಾತಿ ಮತ್ತು ವರ್ಣಗಳು ಹಿಂದೂಧರ್ಮದ ವೈಶಿಷ್ಟ್ಯವೆಂದು ನೀವೇ ಪ್ರತಿಪಾದಿಸುವಿರಲ್ಲವೆ ?

ಹೀಗೆಂದೊಡನೆ ಅವರಿಗೆ ತಮ್ಮ ವಿಚಾರಸರಣಿಯೊಳಗಿನ ಪರಸ್ಪರ

ವಿರೋಧವು ಹೊಳೆಯದೆ ಹೋಗಲಿಲ್ಲ. ಏಕೆಂದರೆ ಅವರು ಮೂಲತಃ ಸನಾತನಿಗಳು. ಜನ್ಮದಿಂದ ಬಂದ ಜಾತಿಮತಗಳಲ್ಲಿ ಅವರಿಗೆ ತುಂಬ ವಿಶ್ವಾಸ. ಆದರೂ ಅತ್ಯಂತ ರಾಷ್ಟ್ರೀಯ ವೃತ್ತಿಯವರು. ದೇಶದ ಸ್ವಾತಂತ್ರ್ಯದ ಬಗೆಗೆ ಅವರ ಹೃದಯವು ಕೊರಗಿ ಕಷ್ಟಪಟ್ಟಿದೆ. ಹಿಂದೂ ದೇಶ, ಹಿಂದೂ ಜನಾಂಗ ವೆಂದೊಡನೆ ಅವರ ಸದ್ಭಾವನೆಗಳು ಉಕ್ಕೇರಿ, ಉತ್ಸಾಹವು ಹೆಚ್ಚುವುದು. ಇಂತಹ ಉತ್ಸಾಹದ ಭರದಲ್ಲಿ ಅವರಾಡಿದ ಮಾತುಗಳವು.

ಇನ್ನೂ ಅನೇಕ ಸುಶಿಕ್ಷಿತರು ಹಿಂದೂ ಜನಾಂಗ, ಹಿಂದೂ ಸಮಾಜ ವೆಂಬ ಮಾತುಗಳನ್ನು ಹುಮ್ಮಸದಿಂದ ಆಡಿ ತಮ್ಮ ಅಭಿಮಾನವನ್ನು ವ್ಯಕ್ತ ಪಡಿಸುತ್ತಾರೆ. ಆದರೆ ತಾವು ಎಷ್ಟು ಸ್ಥೂಲವಾಗಿ ಮಾತನಾಡುತ್ತೇವೆಂಬ ಅರಿವು ಅವರಿಗೇ ಇರುವುದಿಲ್ಲ.

ನನ್ನ ತಿಳುವಳಿಕೆಯಂತೆ, ಹಿಂದೂ ಧರ್ಮವಾಗಲಿ, ಹಿಂದೂ ಸಮಾಜ ವಾಗಲಿ ಇನ್ನೂ ರೂಪಗೊಳ್ಳುವುದರಲ್ಲಿದೆ. ಅದು ಆಗಬೇಕಾಗಿದೆಯೆ ಹೊರತು ಈಗ ಇನ್ನೂ ಅಸ್ತಿತ್ವದಲ್ಲಿಲ್ಲ.

'ಹಿಂದೂ ಜಾತಿ' ಎಂಬ ಹೆಸರು ಕೇಳಬರುತ್ತಿರುವುದು ನಿಜ. ಆದರೆ ಅದು ಒಂದು ವಿಶಿಷ್ಟ ಹಿನ್ನೆಲೆಯಲ್ಲಿ ಮಾತ್ರ. ಪರಿಸ್ಥಿತಿಯ ಒತ್ತಾಯದಿಂದ 'ಹಿಂದೂ' ಎಂಬ ಜಾತಿಯ ಹೆಸರನ್ನು ಹೇಳಬೇಕಾಗುತ್ತಿದೆ. ಇಲ್ಲವಾದರೆ ನಮ್ಮ ನಾಡಿನಲ್ಲಿ 'ಹಿಂದೂ' ಎಂಬ ಮಾತಿಗೆ ಇಂಬಿದ್ದಂತಿಲ್ಲ. ನಮ್ಮಲ್ಲಿ ನಿಜವಾಗಿ ಎಲ್ಲೆಲ್ಲೂ ಬ್ರಾಹ್ಮಣಾದಿ ಹಲವು ಜಾತಿಗಳು ಇವೆ. 'ಹಿಂದೂ' ಎಂಬುದು ಮುಸಲ್ಮಾನರ ಹಿನ್ನೆಲೆಯಲ್ಲಿ ತಲೆದೋರಿದ ಮಾತು. ಮುಸಲ್ಮಾನರ ಭೀತಿಯ ಭೂತವು ಆವರಿಸದಿದ್ದರೆ 'ನಾವು ಹಿಂದೂ ಜನರು' ಎಂಬ ವಿಚಾರವು ನಮ್ಮ ಜನಗಳಲ್ಲಿ ತಲೆದೋರುತ್ತಿದ್ದಿತೆ ? ಎಂಬ ವಿಷಯಕ್ಕೆ ಸಂದೇಹವೆ ಇದೆ. 'ನಾವು ಹಿಂದೂ ಜನ; ಒಂದಾಗೋಣ; ನಮ್ಮ ಧರ್ಮ ಕಾಯ್ದುಕೊಳ್ಳೋಣ' ಎಂಬ ವಿಚಾರವು ಹೊಳೆದು ನಮ್ಮ ಜನಗಳ ತಲೆಯಲ್ಲಿ ಅದರ ಬೆಳಕು ಬೀಳಲಾರಂಭಿದುದು ಮುಹಮ್ಮದೀಯರ ಆಗಮ ನದ ನಂತರವೇ. ಅದಕ್ಕೂ ಮೊದಲು ಈ ಮಾತಿನ ಅವಶ್ಯಕತೆಯೆ ಇದ್ದಿಲ್ಲ.

ನಿಜವಾಗಿ ವಿಚಾರಿಸಿದರೆ ಇತ್ತೀಚೆಗೆ 'ಹಿಂದೂ' ಚಳವಳಿಯ ಪೋಷಕರು ಬ್ರಿಟಿಶ ಸರಕಾರದವರೇ ಆಗಿದ್ದಾರೆ. ಅವರು ಭೇದನೀತಿಯಿಂದ ಹಿಂದೂ

ದೇಶವನ್ನು ತಮ್ಮ ಅಂಕೆಯಲ್ಲಿರಿಸಿಕೊಳ್ಳಲು ಮುಸಲ್ಮಾನರನ್ನು ಒಲಿಸಿಕೊಳ್ಳು ವುದಕ್ಕೆ ಆರಂಭಿಸಿದರು. ಮುಸಲ್ಮಾನರಿಗೆ ತುಂಬ ಸವಲತ್ತು, ಹೆಚ್ಚಿನ ಅಧಿಕಾರಗಳು ಬ್ರಿಟಿಶರಿಂದ ದೊರೆಯುಹತ್ತಿದುವು. ಮುಸಲ್ಮಾನರು ಮುಸಲ್ಮಾ ನೇತರರೊಡನೆ ಉದ್ಧರುಟತನದಿಂದ ನಡಕೊಳ್ಳುವುದಕ್ಕೆ ಮೊದಲಾಯಿತು. ಒತ್ತಾಯದಿಂದ ಹೆಣ್ಣುಮಕ್ಕಳನ್ನೂ ಹುಡುಗರನ್ನೂ ಒಯ್ದು, ಆಮಿಷ ತೋರಿಸಿ ಮುಸಲ್ಮಾನರನ್ನಾಗಿ ಮಾಡಿಕೊಳ್ಳುವ ಕಾಯಕಕ್ಕೆ ಕಳೆ ಬಂತು.

ತಾವು ಹೆಚ್ಚು, ತಮ್ಮ ಜಾತಿ ಹೆಚ್ಚು, ಎಂಬೀ ಬಗೆಯ ಕುಲೀನತೆಯ ಹೆಮ್ಮೆಯ ಹಗಲುಗನಸುಗಳಲ್ಲಿ ಮೈಮರೆತಿದ್ದ ಮುಸಲ್ಮಾನೇತರ ಸಮಾಜವು ಬಡಿದೆಬ್ಬಿಸಿದಂತೆ ಎಚ್ಚೆತ್ತಿತು.

ಈ ದೇಶದ ಹೆಸರು ಹಿಂದೂ. ಆದಕಾರಣ ಈ ದೇಶದವರೆಲ್ಲ ಹಿಂದೂಗಳೆ; ಮುಸಲ್ಮಾನರೆಲ್ಲ ಪರಕೀಯರು ಎಂಬ ತರ್ಕಸರಣಿಗೆ ಎಡೆದೊರೆ ಯಿತು. ಈ ತರ್ಕ ಸರಣಿಯಲ್ಲಿ ಇದ್ದ ದೋಷವು ಮೊದಲು ಬಹಳ ಜನರ ಗಮನಕ್ಕೆ ಬರಲಿಲ್ಲ. ಹಿಂದೂತನದ ಆವೇಶದಲ್ಲಿ ಮುಸಲ್ಮಾನರನ್ನು ಪರಕೀಯರೆಂದು ಬಗೆವುದು ಸುಲಭವಾಯ್ತು. ಬ್ರಿಟಿಶ ಚಾಣಕ್ಯರಿಗೂ ಇದೇ ಬೇಕಾಗಿದ್ದಿತು. ಮುಸಲ್ಮಾನರಿಗೆ, ಅವರು ಎಲ್ಲರೂ ಭಾರತದ ಹೊರಗಣಿಂದ ಬಂದವರೆಂಬಂತೆ ಗಾಳಿ ತುಂಬಿಸಿದರು. ಮುಸಲ್ಮಾನರೂ ಗಾಳಿ ಬಡಿದವರಂತೆ ಮಕ್ಕಾ-ಮದಿನಾಗಳನ್ನು ಕನವರಿಸುತ್ತ ಭಾರತವನ್ನು ಕಡೆಗಣಿಸಿದರು. ತಾವು ನಿಂತ ಗಿಡವನ್ನೆ ಕಡಿಯುವುದಕ್ಕೆ ಹೇಸದಾದರು.

ಈ ಹಿನ್ನೆಲೆಯಲ್ಲಿ ಹಿಂದೂ ಸಮಾಜದ ಒಕ್ಕಟ್ಟಿನ ಅವಶ್ಯಕತೆಯು ದಿನ ದಿನಕ್ಕೂ ಹೆಚ್ಚು ಹೆಚ್ಚು ಅನುಭವಕ್ಕೆ ಬರಲಾರಂಭಿಸಿತು. ವೈದಿಕ ಧರ್ಮದ ತೀವ್ರ ಅಭಿಮಾನಿಗಳಾಗಿದ್ದ ಆರ್ಯಸಮಾಜದವರೇ, ಪರಿಸ್ಥಿತಿಗನುಸಿ ಹಿಂದೂ ಧರ್ಮಸಂಘಟನೆಯ ನೇತೃತ್ವವನ್ನು ಸ್ವೀಕರಿಸಿದರು. ಮುಸಲ್ಮಾನರ ಲೀಗು ಕಾಂಗ್ರೆಸ್ಸಿನಿಂದ ಬೇರೆಯಾಗಿ ತಮ್ಮ ಸ್ವಾರ್ಥವನ್ನೇ ಹೆಗ್ಗುರಿಯಾಗಿ ಇಟ್ಟುಕೊಂಡು ಚಳವಳಿಯನ್ನು ನಡೆಸುತ್ತಲೆ ಹಿಂದೂ ಮಹಾಸಭೆಯ ಅವ ಶ್ಯಕತೆಯೂ ಮಹತ್ವವು ಹೆಚ್ಚಾಯಿತು. ಆದರೆ ಆರ್ಯಸಮಾಜದವರಷ್ಟು ಹಿಂದೂ ಮಹಾಸಭೆಯಿಂದ ಹಿಂದೂಸಮಾಜ ಸಂಘಟನೆಯ ಕೆಲಸವು ಆಗಿಲ್ಲ ವೆಂದು ವಿಷಾದದಿಂದ ಹೇಳಬೇಕಾಗುತ್ತದೆ.

ಹಿಂದೂ ಸಮಾಜದ ಆಶೆ-ಆಕಾಂಕ್ಷೆಗಳನ್ನು ಹಿಂದೂ ಮಹಾಸಭೆಯು ಕೆಲವು ನೇತಾರರು ಜಗತ್ತಿನ ಎದುರು ಚೆನ್ನಾಗಿ, ತರ್ಕಶುದ್ಧವಾಗಿ ಮಂಡಿಸಿದ್ದೇನೊ ನಿಜ. ಆದರೆ ಅದರ ಮುಂದಾಳುಗಳಲ್ಲಿ ಕೆಲವರುನ್ನುಳಿದು ಬೇರೆಯವರೆಲ್ಲ ಇನ್ನೂ ತಮ್ಮ ವಿಶಿಷ್ಟ ಜಾತೀಯ ಅಭಿಮಾನದಿಂದ ಮುಕ್ತರಾಗಿರಲಿಲ್ಲ. ಅಸ್ಪೃಶ್ಯೋದ್ಧಾರದ ಠರಾವು ಪಾಸಾದರೂ ಕಾಂಗ್ರೆಸ್ಸಿನಷ್ಟು ಈ ಕೆಲಸದಲ್ಲಿ ಹಿಂದೂ ಮಹಾಸಭೆಯು ಮುಂದುವರಿದುದಿಲ್ಲ. ಕ್ರಾಂತಿವೀರ ಸಾವರಕರರು ಹಿಂದೂ ಮಹಾಸಭೆಯು ಅಧ್ವರ್ಯುಗಳಾಗಿ ಕೆಲದಿನ ಅದರಲ್ಲಿ ಜೀವಂತ ಕಳೆಯನ್ನು ಸ್ವಲ್ಪ ತಂದರು. ಆದರೆ ರಾಷ್ಟ್ರೀಯ ಮಹಾಸಭೆಯ ಹಿರಿಯ ಮುಂದಾಳುಗಳ ವಿಷಯಕ್ಕಿದ್ದ ತುಚ್ಛತೆಯ ಭಾವನೆಯು ಅವರಿಂದಾಗತಕ್ಕ ಮಹಾಕಾರ್ಯಕ್ಕೆ ಕುಂದನ್ನು ತಂದಿತು. ಹಿಂದೂ ಮಹಾಸಭೆಯು ನೇತಾರರೆಂದರೆ ಕಾಂಗ್ರೆಸ್ಸಿನ ಕಾರ್ಯಕ್ರಮದಲ್ಲಿ ಸ್ಥಾನ ದೊರೆಯದೆ ಅಸುಂತಷ್ಟರಾದ ಹಲಕೆಲವು ಮಹತ್ವಾಕಾಂಕ್ಷಿಗಳ ಗುಂಪು, ಎಂದು ಬಹು ಜನ ಸಮಾಜದ ಭಾವನೆಯಾಗುದು ಕಂಡುಬಂದಿತು. ಇದರಿಂದ ಹಿಂದೂ ಸಮಾಜ ನಿರ್ಮಾಣ ಕಾರ್ಯವು ಈ ಮಹಾಸಭೆಯಿಂದ ಆಗುವುದಕ್ಕೆ ತಡೆಯುಂಟಾಯಿತು. ಸ್ವನಾಮಧನ್ಯ ಪಂಡಿತ ಮಾಲವೀಯರು ಹಿಂದೂ ಮಹಾಸಭೆಯು ಕಾರ್ಯಕ್ಕೆ ಕೆಲದಿನ ಸ್ಫೂರ್ತಿಯನ್ನಿತ್ತರು. ವೇದಗಳನ್ನು ಪ್ರಮಾಣವೆಂದು ನಂಬಿದವರಷ್ಟೇ ಹಿಂದುಗಳು, ಎಂದು ಲೋಕಮಾನ್ಯರ ಕಾಲಕ್ಕೆ ಒಂದು ವ್ಯಾಖ್ಯೆಯು ಪ್ರಚಾರದಲ್ಲಿದ್ದಿತು. ಅದರಿಂದ ಜೈನ, ಬೌದ್ಧ ಮೊದಲಾದ ಸಮಾಜಗಳು ಹಿಂದೂಗಳಲ್ಲಿ ಒಳಗೊಳ್ಳುವುದಕ್ಕೆ ಅಡ್ಡಿಯಾಗಿತ್ತು. ಕಂನಾಡಿನ ವೀರಶೈವರಲ್ಲಿಯೂ ಕೆಲವರು ತಾವು ಹಿಂದುಗಳಲ್ಲವೆಂಬ ಪ್ರಚಾರಕ್ಕೆ ತೊಡಗಿದ್ದರು. ಪಂ. ಮಾಲವೀಯರು ಹಿಂದೂ ಮಹಾಸಭೆಯ ವ್ಯಾಸಪೀಠದಿಂದ ಉದ್ಘೋಷಿಸಿ ಹಿಂದೂ ಶಬ್ದದ ವ್ಯಾಖ್ಯೆಯನ್ನು ವಿಸ್ತರಿಸಿದರು. ಎಲ್ಲ ಭಾರತೀಯ ಧರ್ಮಮತಗಳ ಜನಗಳೂ ಹಿಂದೂಗಳೇ ಎಂದು ಪ್ರತಿಪಾದಿಸಿದರು. ಅಂದಿನಿಂದ ಬೌದ್ಧ, ಜೈನ ಮೊದಲಾದ ಸಮಾಜಗಳನ್ನೂ ಹಿಂದೂಗಳಲ್ಲಿ ಎಣಿಸಲಿಕ್ಕೆ ಆರಂಭವಾಯಿತು.

ಬ್ರಿಟಿಶ ರಾಜತಂತ್ರಜ್ಞರು, ಮುಸಲ್ಮಾನರನ್ನು ರಾಷ್ಟ್ರೀಯ ಸಭೆಯಿಂದ ಒಡೆದು ಬೇರೆಯಾಗಿ ನಿಲ್ಲಿಸುವ ಅವಸರದಲ್ಲಿ ಅವರಿಗೆ ಬೆಂಬಲವನ್ನು

ಕೊಡುವ ತಂತ್ರಗಾರಿಕೆಯಲ್ಲಿ ತೊಡಗಿದಾಗ ತಮಗೆ ಅರಿಯದೆಲೆಯೆ ಒಂದು ದೊಡ್ಡ ತಪ್ಪನ್ನು ಮಾಡಿದರು. 'ಮುಸಲ್ಮಾನರು ಒಂದು ಸ್ವತಂತ್ರ ಸಮಾಜ; ಇದೊಂದು ಪಂಗಡ ಬೇರೆ' ಎಂಬ ಮಾತನ್ನು ಹೇಳಬೇಕಾಗಿ ಬಂದಾಗ ಮುಸಲ್ಮಾನರನ್ನು ಹೊರತುಪಡಿಸಿ ಉಳಿದವರಿಗೆ ಸಾಮಾನ್ಯವಾಗಿ 'ಹಿಂದೂ'ಗಳು ಎಂದು ಒಂದೇ ಗುಂಪಿನಲ್ಲಿ ಸೇರಿಸಿದರು. ಹಿಂದೂ ಸಮಾಜ ವೆಂದು ಅವರು ಹೀಗೆ ನಾಮಕರಣ ಮಾಡಿದ ಸಮಾಜದಲ್ಲಿ ಒಂದುತರದ ಭಾವನೆಯು ತಲೆದೋರುವುದನ್ನು ಕಂಡೊಡನೆ, ಅದು ಬೇರು ಹಿಡಿಯದಂತೆ ಕೂಡಲೆ ಉಪಾಯಗಳನ್ನು ಯೋಜಿಸಲಿಕ್ಕೂ ಅವರು ಮರೆಯಲಿಲ್ಲ.

ಹಿಂದೂಗಳಲ್ಲಿ ಸ್ಪೃಶ್ಯ-ಅಸ್ಪೃಶ್ಯರೆಂದು ಬಣಗಳು ಇದ್ದುದನ್ನು ಕಂಡು ಹಿಡಿದು ಅದರ ಲಾಭ ಪಡೆಯಲು ಸನ್ನದ್ಧರಾದರು. ಬೌದ್ಧ. ಜೈನರನ್ನು ಅವರು ಸರಕಾರಿ ಕಾಗದಪತ್ರಗಳಲ್ಲಿ ಹಿಂದುಗಳಿಂದ ದೂರವಾಗಿಯೆ ಇಟ್ಟಿದ್ದರು. ಇಂಗ್ಲೆಂಡಿನ ಮ್ಯಾಕ್ಸಮುಲ್ಲರಾದಿಗಳು ನಮ್ಮ ದೇಶದ ಧರ್ಮ ಮತಗಳ ಸೂಕ್ಷ್ಮ ಅಭ್ಯಾಸ ಮಾಡಿ ಒಂದು ಬಗೆಯ ಆತ್ಮೀಯತೆಯಿಂದ ಎಲ್ಲವನ್ನೂ ಅರಿತುಕೊಂಡು ಮಹಾ ಮಹಾ ಗ್ರಂಥಗಳನ್ನು ಬರೆದರು. ಬ್ರಿಟಿಶ ರಾಜತಂತ್ರ ವಿಶಾರದರು ಅವರ ಅಭ್ಯಾಸದ ಲಾಭ ಪಡೆದು ನಮ್ಮೊಳಗಣ ಭೇದಾಭೇದಗಳ ಜ್ಞಾನ ಮಾಡಿಕೊಂಡರು.

'ಹಿಂದೂ'ಗಳ ಅಖಂಡವಾದ, ಅವಿಭಾಜ್ಯವಾದ ಏಕಜೀವ ಸಮಾಜ ವೊಂದು ಎಚ್ಚತ್ತರೆ ತಮ್ಮ ಇಲ್ಲಿಯ ಸುಲಿಗೆಗಾರಿಕೆಗೆ ಸೊನ್ನೆ ಬಿದ್ದೀತೆಂಬು ದನ್ನು ಬ್ರಿಟಿಶರು ಸರಿಯಾಗಿ ಅರಿತುಕೊಂಡಿದ್ದರು. ಆದುದರಿಂದಲೇ ಮಾಕ್ಸ ಮುಲ್ಲರಾದಿಗಳ ವೇದ, ಬ್ರಾಹ್ಮಣ ಗ್ರಂಥಗಳ ಅಭ್ಯಾಸದಿಂದ ಹೊರಬಂದ ಸಂಗತಿಗಳ ಆಧಾರದ ಮೇಲೆ ನಮ್ಮ ದೇಶದಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರ ಎಂಬ ಇನ್ನೂ ಒಂದು ಚಳವಳವು ತಲೆಯೆತ್ತಲು ಇಲ್ಲಿಯ ಬ್ರಿಟಿಶರ ಅಧಿಕಾರಿಗಳು ಅಲ್ಲಲ್ಲಿ ನೆರವಾದರು. ಮುಸ್ಲಿಂ ಲೀಗಿನವರು ರಾಷ್ಟ್ರೀಯ ಸಭೆಯ ಬಲ ಕುಗ್ಗಿಸುವ ಕೆಲಸದಲ್ಲಿ ಮೊದಲೆ ತೊಡಗಿದ್ದರು. ಅಸ್ಪೃಶ್ಯರಲ್ಲಿ ಅವರ ಸ್ವಾಭಿಮಾನವನ್ನು ಕೆಣಕಿ ಅವರು ಹಿಂದೂಗಳಿಂದ ದೂರಿರುವಂತೆ ವಾತಾವರಣವನ್ನು ನಿರ್ಮಿಸಲಾಗಿತ್ತು. ಮೇಲೆ ಇನ್ನೂ ಒಂದು ಈ ಬ್ರಾಹ್ಮಣ ಬ್ರಾಹ್ಮಣೇತರ ವಾದ!

ದಕ್ಷಿಣ ಭಾರತದಲ್ಲಿ ಈ ಬ್ರಾಹ್ಮಣ-ಅಬ್ರಾಹ್ಮಣ ವಾದವು ದ್ರಾವಿಡ ಸಂಘದ ಕಲ್ಪನೆಗೆ ಜನ್ಮಕೊಟ್ಟಿತು.

ದೂರದರ್ಶಿಗಳಾದ ಬ್ರಿಟಿಶರಿಗೆ, ಹಿಂದೂಸ್ತಾನವನ್ನು ಬಿಟ್ಟು ಒಂದಲ್ಲ ಒಂದು ದಿನ ತೆರಳಲೇಬೇಕಾಗುವುದೆಂದು ಎಂದೊ ಗೊತ್ತಿದ್ದಿತು. ಮೆಕಾಲೆ ಸಾಹೇಬನು ಈ ಮಾತನ್ನು ಕ್ರಿ. ಶ. ೧೮೩೩ರ ಸುಮಾರಿಗೇ ತನ್ನ ಒಂದು ಬರೆಹದಲ್ಲಿ ಕಾಣಿಸಿದ್ದಾನೆ. ಸೀಲ ಎಂಬವನು Expansion of British Empire ಎಂಬ ಗ್ರಂಥದಲ್ಲಿ ಈ ಸಂಗತಿಯನ್ನು ಮುಂಗಂಡು ಬರೆದಿಟ್ಟಿದ್ದಾನೆ. ಹಿಂದಿನ ಬ್ರಿಟಿಶ ರಾಜಕಾರಣಿಗಳ ಪರಂಪರೆಯಲ್ಲಿಯೆ ಬೆಳೆದು ಬಂದ ಇಂದಿನ ಅವರ ಧುರೀಣರೂ ಈ ವಿಷಯದಲ್ಲಿ ಮೈತುಂಬ ಕಣ್ಣುಗಳುಳ್ಳವರಾಗಿಯೆ ನಡೆದುಕೊಳ್ಳುತ್ತಲಿದ್ದಾರೆ.

ಹಿಂದುಸ್ತಾನವನ್ನು ಬಿಟ್ಟುಹೋಗುವುದು ನಿಜ. ಆದರೆ ಅದು ಅಖಂಡವಾಗಿ ಉಳಿಯದಂತೆ ಶಕ್ಯವಿದ್ದ ಎಲ್ಲ ಉಪಾಯಗಳನ್ನೂ ಯೋಜಿಸತಕ್ಕದ್ದೆಂದು ಅವರು ಮೊದಲಿನಿಂದಲೇ ನಿರ್ಧರಿಸಿ ಹಾಗೆ ನಡೆದುಕೊಳ್ಳುತ್ತ ಬಂದಿದ್ದಾರೆ. ಮುಸಲ್ಮಾನರ ವಿರುದ್ಧ ಹಿಂದೂಗಳು ಎಂದು ಹೇಳಿ ಇಬ್ಬರಲ್ಲಿ ಸ್ಪರ್ಧೆ ಬೆಳೆವಂತೆ ಮಾಡಿ ಅಷ್ಟಕ್ಕೆ ಅವರು ತೃಪ್ತರಾಗದೆ ಹಿಂದೂಗಳಲ್ಲಿಯೂ ಒಂದೇ ಒಂದು ಪಂಗಡವು ಆಗಿ ಬೆಳೆಯದಂತೆ ಈ ವರೆಗೆ ಜಾಗರೂಕರಾಗಿ ಕೆಲಸ ಮಾಡಿದ್ದಾರೆ. ಹಲವು ಒಳಜಾತಿ-ಮತಗಳಿಗೆ ಪದವಿ, ಪಟ್ಟ, ದುಡ್ಡು, ನೌಕರಿ, ಸ್ಕಾಲರಶಿಪ್ಪು ಮೊದಲಾದವುಗಳ ಆಶೆ ಹಚ್ಚಿ ಅವರೆಲ್ಲರೂ ತಮ್ಮ ತಮ್ಮ ಜಾತಿಗಳಿಗೇ ಅಂಟಿಕೊಂಡಿರುವಂತೆ ಪರಿಸ್ಥಿತಿಯನ್ನು ನಿರ್ಮಾಣ ಮಾಡಿದರು. ಅದರಿಂದ ಹಿಂದೂ ಸಮಾಜವೆಂಬುದು ಒಂದು ಕನಸಿನ ಕನವರಿಕೆಯಾಗಿದೆಯೆ ಹೊರತು ಇಂದಿನ ವ್ಯವಹಾರ ಲೋಕದಲ್ಲಿ ಕಣ್ಣಿಗೆ ಕಾಣುವ ಕಂಡಿತದ ಮಾತಾಗಲು ಸಾಧ್ಯವಾಗಿಲ್ಲ.

೧೯೨೭ರ ಅಸಹಕಾರದ ಆಂದೋಲನದ ಕಾಲಕ್ಕೆ ಈ ದೇಶಕ್ಕೆ ಇಂಗ್ಲಂಡಿನ ಪತ್ರಿಕಾ ಪ್ರತಿನಿಧಿಯಾಗಿ ಬಂದ ಮಿ. ಬ್ರೆಲ್ಸಫರ್ಡರು ಆಗಿನ ತಮ್ಮ ಲೇಖನಗಳಲ್ಲಿ ಒಂದು ಮಹತ್ವದ ಸಂಗತಿಯನ್ನು ಬಯಲಿಗೆಳೆದರು. ಹಿಂದೂ ದೇಶದಲ್ಲಿ ಒಂದು ಸೋಜಿಗದ ದೃಶ್ಯವು ಕಣ್ಣಿಗೆ ಬೀಳುತ್ತಲಿದೆ; ಬ್ರಿಟಿಶರು- ಸನಾತನ ಧರ್ಮರಕ್ಷಕರಾಗಿ ಕೆಲಸ ಮಾಡುತ್ತಲಿದ್ದಾರೆ. ಆದರೆ

ರಾಷ್ಟ್ರೀಯ ವೃತ್ತಿಯ ಮುಂದಾಳುಗಳು ತಮ್ಮೊಳಗಣ ಜಾತಿ ಪಂಥಗಳನ್ನು ಮುರಿದೊಗೆದು ಅಖಂಡ ಭಾರತದ ಒಂದೇ ಹಿಂದೀ ಸಮಾಜ ನಿರ್ಮಾಣವಾಗಬೇಕೆಂಬ ಹಂಬಲದವರಾಗಿದ್ದಾರೆ.

ಈ ಸೋಜಿಗದ ಸಂಗತಿಯು ಈ ವರೆಗೆ ಎಷ್ಟು ಜನರ ತಲೆಗೆ ನಿಲುಕಿದೆಯೊ ನಾಕಾಣೆ. ಬ್ರಿಟಿಶ ಚಕ್ರವರ್ತಿನಿಯು ಕ್ರಿ. ಶ. ೧೮೫೮ರಲ್ಲಿ 'ನಾನು ಹಿಂದುಸ್ತಾನದೊಳಗಣ ಜಾತಿ ಮತ ಪಂಥಗಳಲ್ಲಿ ಕೈಹಾಕುವುದಿಲ್ಲ;' ಎಂದು ಸಾರಿದಳು. ಮುಂದೆ ಸಂಪೂರ್ಣವಾಗಿ ಈ ವಚನ ಪಾಲಿಸಿದುದರ ಶ್ರೇಯಸ್ಸು ಬ್ರಿಟಿಶ ಸರಕಾರಕ್ಕಿದೆ! ವಚನಗಳನ್ನು ಬದಲಿಸುವುವರಲ್ಲಿ ಬ್ರಿಟಿಶರನ್ನು ಸರಿಗಟ್ಟುವವರು ಜಗತ್ತಿನಲ್ಲಿಯೇ ಯಾರೂ ಇಲ್ಲವೆಂದು ಲೋಕವೇ ಹೇಳುತ್ತಿದೆಯಾದರೂ, ಈ ಒಂದು ವಿಷಯದಲ್ಲಿ ಮಾತ್ರ ಬ್ರಿಟಿಶರು ಏಕನಿಷ್ಠರಾಗಿ ಉಳಿದು ನಮ್ಮ ಜಾತಿಮತಗಳನ್ನು ಸಂರಕ್ಷಿಸುವದಕ್ಕೆ ಎಂದೂ ತಪ್ಪಲಿಲ್ಲವೆಂದು ನಾಳಿನ ಇತಿಹಾಸಕಾರರು ಅವರಿಗೆ ಶಿಫಾರಸು ಪತ್ರವನ್ನು ಕೊಡಲೇ ಬೇಕಾಗುವುದು!

ಇಂತಹ ಪರಿಸ್ಥಿತಿಯಲ್ಲಿ ಎಲ್ಲಿಯ ಹಿಂದೂ ಸಮಾಜ? ಎಲ್ಲಿದೆ ಹಿಂದೂ ಸಮಾಜ! ದಕ್ಷಿಣ ಹಿಂದುಸ್ತಾನದಲ್ಲಿ ದ್ರವಿಡಸ್ತಾನವು ನಿರ್ಮಾಣವಾಗಲೇ ಬೇಕೆಂದು ಕೆಲವರ ಕೂಗು ಎದ್ದಿದೆ! ಜಾತಿ, ಧರ್ಮಗಳನ್ನೆಲ್ಲ ಒಂದುಗೂಡಿಸಿ ಏಕವರ್ಣ ಹಿಂದೂ ಸಮಾಜವನ್ನು ನಿರ್ಮಿಸುವ, ಎಂದು ನಡೆವ ಪ್ರಯತ್ನಕ್ಕೆ ಜಾತಿಗಳ ಹೆಸರಿನಲ್ಲಿ ಲಾಭ ಪಡೆಯುತ್ತಿರುವ ಪಲವು ಮುಂದಾಳುಗಳ ಕ್ಷುದ್ರ ಸ್ವಾರ್ಥವು ಅಡ್ಡಬರುತ್ತದೆ. ನಮ್ಮ ಜಾತಿ ಹಾಗೆಯೆ ಇರತಕ್ಕದ್ದೆ. ಅದಕ್ಕೆ ಸರಕಾರದಿಂದ ವಿಶೇಷ ಸವಲತ್ತು ದೊರೆಯಲೇಬೇಕೆಂದು ಹಟವಾದ ನಡೆದಿದೆ. ಇದೇನು ಹಿಂದೂ ಸಮಾಜದ ಅಖಂಡತನದ ಲಕ್ಷಣವೊ?

ಬ್ರಿಟಿಶರು, ಬಾದಶಹರ ಪ್ರತಿನಿಧಿಗಳಾದ ವೈಸರಾಯರು ಹಿಂದುಗಳನ್ನುದ್ದೇಶಿಸಿ ಮಾತನಾಡುವಾಗ Peoples of India ಎನ್ನುವರು. People of India ಎನ್ನುವುದಿಲ್ಲ! ನಮ್ಮೊಳಗಣ ಭೇದಗಳ ನೆನಪು ಅಡಿಗಡಿಗೆ ಆಗುವಂತೆ ಬ್ರಿಟಿಶ ಅಧಿಕಾರಿಗಳು ಸಾಧ್ಯವಿರುವ ಎಲ್ಲ ಪ್ರಯತ್ನಗಳನ್ನೂ ನಡೆಸಿದ್ದಾರೆ. ಈ ಹಿನ್ನೆಲೆಯಲ್ಲಿ ಹಿಂದೂ ಸಮಾಜವೆಂಬುದು ಒಂದುಗೂಡಿ ಎದ್ದು ನಿಲ್ಲಬೇಕಾಗಿದೆ!

ಇದಕ್ಕೆ ಇನ್ನೂ ಒಂದು ಹೆಚ್ಚಿನ ತೊಡಕು ಈಗ ಮುಂದೆ ಬರುವುದಿದೆ. ಈಗಣ ಯುಗ ಪ್ರಾದೇಶಿಕ ಅಭಿಮಾನಕ್ಕೆ ಅಗ್ರಸ್ಥಾನವಿರುವ ಯುಗ. 'ಹಿಂದೂಗಳು' ಎಂಬ ಮಾತು ಈ ದೃಷ್ಟಿಯಿಂದ ಇಂದು ಉಚಿತವೇ ಆಗಿದೆ. 'ಹಿಂದೂಗಳು' ಎಂಬುದು ಪ್ರಾದೇಶಿಕ ಹೆಸರಾಯಿತು. ಇಂಗ್ಲೆಂಡಿನಲ್ಲಿ ನೆಲಸಿದವರು ಆಂಗ್ಲರು; ಅಮೇರಿಕೆಯನ್ನು ನೆಲವೀಡು ಮಾಡಿಕೊಂಡವರು ಅಮೇರಿಕನ್ನರು; ಹಾಗೆ ಹಿಂದೂಸ್ತಾನವು ತಮ್ಮ ತಾಯ್ನಾಡು ಎಂಬವರೆಲ್ಲರೂ ಹಿಂದೂಗಳು ಎಂದು ಆಗಬಹುದಲ್ಲವೆ? ನಮ್ಮ ಘಟನಾ ಸಮಿತಿಯ ವಿಚಾರ ಸರಣಿಯು ಸುಮಾರಾಗಿ ಇದೇ ತೆರನಾಗಿದೆ ಆದರೆ ನಮಗೆಲ್ಲ ಅಂಟಿಕೊಂಡ ಹಳೆಯ ಚಟವು ಒಂದಿದೆ. ಅದು ಈ ಬಗೆಯ ವಿಚಾರಕ್ಕೆ ಅಡ್ಡಿಯನ್ನುಂಟು ಮಾಡುತ್ತಿದೆ. ಹುಟ್ಟಿನಿಂದ ಜಾತಿಮತಗಳನ್ನು ಹೇಳುವ ಅಭ್ಯಾಸವಿದ್ದ ನಾವು ಹಿಂದೂಗಳೆಂಬ ಮಾತಿಗೂ ಅದೇ ಬಗೆಯಾಗಿ ಅರ್ಥವನ್ನು ಕಲ್ಪಿಸುತ್ತಿದ್ದೇವೆ. ಹಿಂದೂ ಎಂಬ ಹೆಸರು ಪ್ರಾದೇಶಿಕ; ಆದರೆ ಅದಕ್ಕೆ ನಾವು ಅಂಟಿಸುವ ಅರ್ಥವು ಮಾತ್ರ ಧಾರ್ಮಿಕ! ಇದು ವಿಸಂಗತವಲ್ಲವೆ?

ಹಿಂದೂ ಸಮಾಜವೆಂಬ ನೆನಪು ನಮಗೆ ಆಗುವುದು ಯಾವಾಗ? ಮುಸಲ್ಮಾನರ ವಿರೋಧದ ಕಾಲಕ್ಕೆ ಅಥವಾ ತಾವು ಕಿರಿಸ್ತರಲ್ಲವೆಂದು ಸೂಚಿಸುವ ಕಾಲಕ್ಕೆ; ಆಯ್ತು. ಅದರ ಹೊರತುಪಡಿಸಿ ಉಳಿದ ಕಾಲದಲ್ಲಿ ನಾವು ನಮ್ಮ ವಿಶಿಷ್ಟ ಜಾತಿಯವರೆ! ಹೀಗಿದು ಹೆಸರಿಗೆ ಮಾತ್ರ ಹಿಂದೂ ಸಮಾಜವಾಗಿದೆ! "ಹಿಂದೂ" ಎಂಬುದು ಪ್ರಾದೇಶಿಕ ಶಬ್ದವಿದ್ದು ಅದಕ್ಕೆ ಧಾರ್ಮಿಕ ಅರ್ಥ ಅಂಟಿಸುವುದರಿಂದ ಒಂದು ಹಾನಿಗೆ ಒಳಗಾಗುತ್ತಿದ್ದೇವೆ. ನಮ್ಮ ನಾಡವರೇ ಆಗಿದ್ದೂ ಕೇವಲ ಧಾರ್ಮಿಕ ನಂಬುಗೆ ಬೇರೆಯಾಗಿರುವ ಕ್ರಿಸ್ತಿ ಹಾಗೂ ಮುಸಲ್ಮಾನರು ಈ ದೇಶದ ಅಭಿಮಾನವನ್ನು ವಹಿಸಿ ಈ ಈ ದೇಶದೊಡನೆ ಸಮರಸರಾಗಿ ಈ ದೇಶದ ಹೆಸರಿನಿಂದಲೆ ಕರೆದುಕೊಳ್ಳುವಲ್ಲಿ ಹೆಮ್ಮೆಪಟ್ಟುಕೊಳ್ಳಲು ನಾವೇ ಅವರಿಗೆ ತಡೆದುಹಿಡಿಯುತ್ತಿರುವೆವಲ್ಲವೆ? ವೈಯಕ್ತಿಕ ಧಾರ್ಮಿಕ ಸ್ವಾತಂತ್ರ್ಯವನ್ನು ಕೊಟ್ಟು ಹಿಂದೂ ದೇಶದೊಡನೆ ಒಂದು ಜೀವವಾದವರೆಲ್ಲ ಹಿಂದೂಗಳೇ ಎಂದು ಹೇಳಲು ಅಡ್ಡಿಯೇನು?

ಇನ್ನು, ಈ ಮುಂದಡಿಯ ವಿಚಾರವು ಹೋಗಲಿ, ಧಾರ್ಮಿಕ ಅರ್ಥವನ್ನೆ ಇಟ್ಟುಕೊಂಡರೂ ಹಿಂದೂ ಸಮಾಜವೆಂಬುದು ಅವಿಭಾಜ್ಯ, ಅಖಂಡ, ಏಕ

ಜೀವ ಸಮಾಜವಾಗಬೇಕಿದ್ದರೆ ನಮ್ಮೊಳಗೆ ಸ್ಪೃಶ್ಯಾಸ್ಪೃಶ್ಯ, ಬ್ರಾಹ್ಮಣ-ಅಬ್ರಾಹ್ಮಣ ಎಂಬೀ ಬಗೆಯ ವಾದಗಳಿಗೆ ಇಂಬು ದೊರೆಯದಂತೆ ನಮ್ಮ ಈಗಿನ ನಡೆವಳಿಯಲ್ಲಿ ಹಲವು ಮಹತ್ವದ ಬದಲಾವಣೆಗಳು ಆಗಲೇಬೇಕಲ್ಲವೆ? ಹಳೆಯ ನಾಲ್ಕು ವರ್ಣಾಶ್ರಮಗಳು ಮೂಲೆಗುಂಪಾಗಿ ಈಗ ಸಾವಿರಾರು ಜಾತಿಮತಗಳ ಸಂತೆ ನೆರೆದಿದೆ. ಈ ಅವ್ಯವಸ್ಥೆಯನ್ನು ಹೋಗಲಾಡಿಸಲು ಮಹಾತ್ಮಾಜೀಯವರು ಇತ್ತೀಚಿಗೆ ಸೂಚಿಸುತ್ತಿರುವಂತೆ ಹಿಂದೂಗಳೆಂಬವರೆಲ್ಲರೂ ಏಕವರ್ಣೀಯರೆಂದು ನಂಬಬೇಕು. ಇವರಲ್ಲಿ ಅನ್ನ-ಕನ್ಯಾ ವ್ಯವಹಾರಗಳಿಗೆ ಹಳೆಯ ರೀತಿಯ ಜನ್ಮ ಜಾತಿಯ ಮೂಲಕವಾದ ಯಾವ ಅಡೆತಡೆಗಳೂ ಉಳಿಯಲಾಗದು. ಸಮಾನ ಸಂಸ್ಕೃತಿಯವರೊಡನೆ ತಾವು ಅನ್ನ-ಕನ್ಯಾ ವ್ಯವಹಾರ ಮಾಡಲು ಸಿದ್ಧರೆಂಬ ತತ್ವವನ್ನು ಮಾನ್ಯ ಮಾಡಬೇಕಾಗುವುದು. ಸ್ಪೃಶ್ಯರು ಅಸ್ಪೃರಿಗೆ, ಅಸ್ಪೃಶ್ಯರೆಂದು ಊಟಕ್ಕಾಗಲಿ, ಮದುವೆಗಾಗಲಿ ಅಯೋಗ್ಯರೆಂದು ಭಾವಿಸಲಾಗದು. ಇನ್ನು ಮೇಲೆ ವಿವಾಹಗಳ್ಲಿ ಸಂಸ್ಕೃತಿಯ ಮಟ್ಟವು ಮುಖ್ಯವಾದ ವಿಚಾರವೇ ಹೊರತು ಜನ್ಮ-ಜಾತಿಯಲ್ಲ. 'ಶಿಕ್ಷಣ, ವಿಚಾರ, ಸಂಸ್ಕಾರಗಳಲ್ಲಿ ವ್ಯತ್ಯಾಸವು ಬಹಳವಿರುವುದರಿಂದ ತಾವು........ಇವರಿಗೆ ತಮ್ಮ ಬೀಗರೆಂದು ಮಾಡಿಕೊಂಡಿಲ್ಲ'? ಎನ್ನಬಹುದು. ಆದರೆ ಈ ಮಾತು ಜಾತಿಯ ಹೆಸರಿನಲ್ಲಿ ಮುಖ್ಯವಾಗಿ ಮುಂದೆ ಬರಲಾಗದು. ಶ್ರೀ ರಾಜಗೋಪಾಲಾಚಾರ್ಯ ಹಾಗೂ ಶ್ರೀ ಗಾಂಧಿಯವರು ಭಿನ್ನಜಾತಿಯವರಾದರೂ ಸಮಾನ ಸಂಸ್ಕೃತಿಯವರೆಂದು ಬೀಗರಾಗಲಿಲ್ಲವೇ? ಹೀಗೆ ಸಂಸ್ಕೃತಿಯ ಮಟ್ಟಕ್ಕೆ, ಜೀವನದ ಮೇಲ್ಮೆಗೆ ಮಹತ್ವವು ಕೊಡಲ್ಪಟ್ಟರೆ ನಮ್ಮ ಒಳ ಜಾತಿಗಳಲ್ಲಿ ಸುಧಾರಣೆಗಳು ತಾವೇ ಆಗಹತ್ತುವವು. ಇಂದಿನ ಭೇದಗಳು ಬೇಗನೆ ಕಡಿಮೆಯಾಗಿ 'ಒಳಪಂಗಡಗಳು ಕ್ರಮವಾಗಿ ಮಾಯವಾಗಲಾರಂಭಿಸುವವು.

ಇಂತೀ ಬಗೆಯಾಗಿ ಹಿಂದೂ ಸಮಾಜವೆಂಬುದು ಜನ್ಮತಾಳಿ, ಬೇಗನೆ ಒಳಗಣ ಅಂಗಾಂಗಗಳಲ್ಲಿ ಹೊಂದಿಕೊಂಡು ಪರಸ್ಪರ ಸಹಕಾರ, ಸಹಾನುಭೂತಿ ಆತ್ಮೀಯತೆಗಳಿಂದ ಪುಷ್ಟವಾಗಿ ಸತ್ವಶಾಲಿಯಾಗಿ ಜಗದ್ರಂಗದಲ್ಲಿ ಮುಂದುವರಿದು ಮೆರೆದೀತೆಂಬುದು ನನ್ನ ಕಂಡಿತ.

ಜ. ಶ. ಜುಲೈ ೧೯೪೭

ಹಿಂದೂ ಎನಿಸಿಕೊಳ್ಳುವ ಸಮಾಜಕ್ಕೆಲ್ಲ ಸಮಾನವಾದ ಕಾಯದೆ ಕಾನೂನಿನ ಗ್ರಂಥವು ಇನ್ನೂ ಆಗಿಲ್ಲ. ಒಂದೊಂದು ಪಂಗಡದವರಿಗೆ ಅನ್ವಯಿಸುವ ಕಟ್ಟಳೆಗಳೇ ಬೇರೆ ಬೇರೆ ! ಇದೀಗ ಕೇಂದ್ರಸರಕಾರವು, ರಾವಸಮಿತಿಯವರು ಸೂಚಿಸಿದ ಕ್ರಮದಲ್ಲಿ ಅಖಿಲ ಹಿಂದೂ ಸಮಾಜವೆಲ್ಲ ಒಂದೇ ಬಗೆಯ ಕಾನೂನುಗಳಿಂದ ಬದ್ಧವಾಗಿರಬೇಕೆಂದು, ಒಂದು ಯೋಜನೆಯನ್ನು ಹಿರಿಯೋಲಗದಲ್ಲಿ ವಿಚಾರಿಸಲು ಮಂಡಿಸಿದೆ. ಈ ಸಂಗತಿಯಿಂದಲೂ ಹಿಂದೂ ಎಂಬ ಸಮಾಜವು ಈಗ ಒಂದು ಎರಕದಲ್ಲಿ ರೂಪಗೊಳ್ಳುತ್ತಲಿದೆ, ಎಂಬುದೇ ಸಿದ್ಧವಾಗುತ್ತದೆ.

ಬ್ರಿಟಿಶರು ಮನಸುಮಾಡಿದ್ದರೆ, ಒಳಜಾತಿಮತಗಳು ಏನೇ ಇರಲಿ; 'ಹಿಂದುಸ್ಥಾನದ ನಾಗರಿಕರೆಲ್ಲರೂ ಹಿಂದೂ' ಎಂದು ವ್ಯಾಖ್ಯೆಮಾಡಿ ಅದಕ್ಕನುಗುಣವಾಗಿ ಶಿಕ್ಷಣಕೊಟ್ಟು ದೇಶಾಭಿಮಾನವನ್ನು ಜಾಗೃತಗೊಳಿಸಿ ದೇಶದೊಳಗೆ ಐಕ್ಯವನ್ನುಂಟು ಮಾಡಬಹುದಿತ್ತು. ನಮ್ಮೊಳಗಿನ ಒಳಬಣಗಳೆಲ್ಲ ಒಂದಾಗಿ ಸ್ವಾರ್ಥಕ್ಕಾಗಿ ಒಂದರೊಡನೊಂದು ಕಲಹಗಳನ್ನು ನಡಸದೆ ಇದ್ದರೆ ಬ್ರಿಟಿಶರಿಗೆ ಇದಕ್ಕೂ ಮೊದಲೇ ಎಂದೊ ಕಾಲುಕಿತ್ತ ಬೇಕಾಗುತ್ತಿತ್ತು. ಭೇದಬುದ್ಧಿಯ ತಾವು ನಿಂತ ಕೊಂಬೆಯನ್ನು ತಾವೇ ಕತ್ತರಿಸುವಷ್ಟು ಬುದ್ಧಿಹೀನರೆ ಬ್ರಿಟಿಶ ರಾಜಕಾರಣಿಗಳು ?

ಹಿಂದೂ ಎಂಬ ಪದವು ೧೨ನೆಯ ಶತಮಾನದ ಮೊದಲು ಅಷ್ಟು ಪ್ರಚಾರದಲ್ಲಿ ಬಂದಿರ ಬಹುದೆಂದು ತೋರುವುದಿಲ್ಲ. ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ಈ ಪದವು ಕಾಣಿಸಿಕೊಳ್ಳುವುದಿಲ್ಲ. 'ಭರತವರ್ಷೇ, ಭರತಖಂಡೇ'....ಎಂದು ಭಾರತದ ಹೆಸರೇ ಪುರಾತನವಾದುದು.

ಸುಲ್ತಾನರು ಮುಸಲ್ಮಾನರ ರಾಜರು; ತಾವು ಮುಸಲ್ಮಾನರಲ್ಲದ ಇನ್ನೊಂದು ಸಮಾಜದ ಸುಲ್ತಾನರು ಎಂಬರ್ಥದಲ್ಲಿ ವಿಜಯನಗರದ ರಾಜರು ತಮ್ಮನ್ನು 'ಹಿಂದುರಾಯ ಸುರತ್ರಾಣ'ರೆಂದು ವಿಶೇಷಿಸಿಕೊಂಡುದು ಕಂಡು ಬರುತ್ತದೆ. ಹಿಂದೂಸ್ಥಾನವೆಂಬ ಹೆಸರು ಬಳಕೆಯಲ್ಲಿ ಬಂದುದು ಪರಕೀಯರಾದ ಮುಹಮ್ಮದೀಯರಿಂದಲೇ. ಸಿಂಧೂದೇಶವೆಂದು ಆ ನದಿಯಾಚೆಯವರು ಈ ದೇಶಕ್ಕೆ ಕರೆವ ವಾಡಿಕೆಯಿತ್ತು. ಸಿಂಧೂ ಶಬ್ದವು ಮುಹಮ್ಮದೀಯರ ಬಾಯಲ್ಲಿ ಹಿಂದೂವಾಗಿ ಪರಿಣಮಿಸಿತು. ಇದು ಹಿಂದೂದೇಶ. ಈ

ದೇಶದಲ್ಲಿ ವಾಸಿಸುವವರು ಹಿಂದುಗಳು; ದೇಶವಾಚಕ ಅರ್ಥದಿಂದಲೇ ಹಿಂದೂಜನವೆಂಬ ಮಾತು ಮೊದಲು ತಲೆದೋರಿತು. ಆ ಮೇಲೆ ಕ್ರಮವಾಗಿ ಲಕ್ಷಣಾರ್ಥದಿಂದ ಧರ್ಮವೆಂಬ ಅರ್ಥವೂ ಹಿಂದೂ ಪದಕ್ಕೆ ಬಂದಿದೆ

ಈ ಐತಿಹಾಸಿಕ ಹಿನ್ನೆಲೆಯನ್ನು ಗಮನಿಸಿದರೆ, ಹಿಂದೂ ದೇಶದ ನಾಗರಿಕರಾದ ಬಳಿಕ ಮುಸಲ್ಮಾನಾದಿ ಎಲ್ಲ ಜನಗಳೂ ಹಿಂದುಗಳೇ ಆಗುವುದಿಲ್ಲವೆ? ಆದರೆ ಬ್ರಿಟಿಶರ ಭೇದ ನೀತಿಯ ದುಷ್ಪರಿಣಾಮಗಳ ಫಲವಾಗಿ ಹಿಂದೂ ಎಂಬುದಕ್ಕೆ ಒಂದು ಜಾತಿ ಎಂಬ–ಎಲ್ಲಿ ಈ ವರೆಗೆ ಒಂದೇ ಜಾತಿಯಾಗಿಲ್ಲವೊ, ಒಂದು ಧರ್ಮಗ್ರಂಥ ಇಲ್ಲ, ಕಾನೂನ ಇಲ್ಲವೊ ಅವರಿಗೆ ಒಂದು–ಜಾತಿ, ಎಂಬ ಸಂಕುಚಿತಾರ್ಥವು ಅಂಟಿಕೊಂಡಿತು! ಅದರಿಂದ ಮುಸಲ್ಮಾನರು ಹಿಂದೂದೇಶದವರಲ್ಲವೆಂಬ ದುರ್ವಿಚಾರಕ್ಕೆ ಬೇರು ಹಿಡಿಯಲು ಇಂಬು ದೊರೆತಿತು.

ಧಾರ್ಮಿಕ ಹುಚ್ಚಿನಲ್ಲಿ ನಾವು ಈ ಭೇದ ನೀತಿಗೆ ಬಲಿಯಾದೆವು. ಮುಸಲ್ಮಾನರನ್ನು ಅರಗಿಸಿಕೊಳ್ಳುವ ಬಗೆಯನ್ನು ಕಂಡು ಹಿಡಿಯುವುದು ಒತ್ತಟ್ಟಿಗೆ ಉಳಿಯಿತು. ಅವರಿಗೆ ಸ್ವತಂತ್ರ ಮತದಾರ ಸಂಘ, ಸ್ವತಂತ್ರಪ್ರತಿನಿಧಿತ್ವದ ಹಕ್ಕುಗಳನ್ನು ಕೊಡಮಾಡಿದ ಬ್ರಿಟಿಶರ ತಂತ್ರವನ್ನು ವಿರೋಧಿಸದೆ ಆ ದಿಕ್ಕಿನಲ್ಲಿಯೆ ದಿನದಿನಕ್ಕೂ ಮುಂದೆ ಸಾಗಿ ಅಂತ್ಯವು ಸಮೀಪಿಸಿದಾಗ, 'ಇದು ಹೀಗಾಗಬಾರದಾಗಿದ್ದಿತು; ಹೀಗಾಗಲೇ ಕೂಡದು' ಎಂದು ಕೂಗಾಟ; ಮಿಡುಕಾಟಕ್ಕೆ ಆರಂಭವಾಯ್ತು।

ಮಹಾತ್ಮಾಜೀಯವರು ಖಿಲಾಫತ ಚಳವಳಿಯ ಕಾಲದಲ್ಲಿ ಮುಸಲ್ಮಾನರ ಧರ್ಮಾಭಿಮಾನದ ಬಂಡವಾಳವನ್ನು ಬಳಸಿ, ಅದನ್ನು ಇಮ್ಮಡಿಸಿದರು! ರಾಜಕಾರಣದಲ್ಲಿ ಧಾರ್ಮಿಕವಿಚಾರಕ್ಕೆ ಇಂಬುಗೊಡಲಾಗದೆಂದು ಅವರೇ ಮುಂದೆ ಬಹಳ ಜಾಗೂಕರಾಗಿ ಪ್ರತಿಪಾದಿಸಿದ್ದೇನೋ ನಿಜ. ಆದರೆ ೧೯೨೦ರಲ್ಲಿ ಬಂದ ಕಟು ಅನುಭವದಿಂದಲೇ ಅವರು ಎಚ್ಚತ್ತಿರಬೇಕು. ಖಿಲಾಫತ ಚಳವಳಿಯ ಮೂಲಕ ಮೌಲಾನಾಗಳಂತಹ ಧಾರ್ಮಿಕರದು ಅಲ್ಲದೆ, ಜನಸಾಮಾನ್ಯದ ದೃಷ್ಟಿಯೂ ಕೂಡ ಸಂಪೂರ್ಣವಾಗಿ ಬಹಿರ್ಮುಖವಾಯಿತು. ತಮ್ಮ ಜೀವಾಳದ ಸ್ಥಾನಗಳು ಭಾರತದಲ್ಲಿಲ್ಲ; ಖಲೀಫನು ತಮ್ಮ ನೇತಾರ; ಮಕ್ಕಾ–ಮದೀನಾ ತಮ್ಮ ಪಂಚಪ್ರಾಣದಂತಿರುವ

ಕ್ಷೇತ್ರಗಳು. ಹೀಗೆ ಇವರ ದೃಷ್ಟಿ ತುರ್ಕಸ್ತಾನ, ಅರಬಸ್ತಾನಗಳ ಕಡೆಗೆ ನೆಟ್ಟಿತು. ಹಿಂದುಸ್ತಾನದಿಂದ ತಾವು ಭಿನ್ನರೆಂಬ ವಿಷವು ಖಿಲಾಫತ ಚಳವಳಿಯಿಂದ ಬಹುತರ ಮುಸಲ್ಮಾನರ ದೇಹದಲ್ಲಿ ಚೆನ್ನಾಗಿ ವ್ಯಾಪಿಸಿತು. ಪಾಕಿಸ್ತಾನದ ಪೂರ್ವಪೀಠಿಕೆಯು ಇಂತು ಗಾಂಧಿಜೀಯವರಿಂದಲೆ ಆಯಿತು ! ಇದುವೆ ಕಾಲನ ವಿಚಿತ್ರಲೀಲೆ. 'ಉದ್ಧರೇತ್ ಆತ್ಮನಾತ್ಮಾನಂ; ಆತ್ಮಾನಮವಸಾದಯೇತ್' ಎಂಬ ಎರಡೂ ದಿವ್ಯ ವಚನಗಳಿಗೆ ದಿವ್ಯವಾದ ದೃಷ್ಟಾಂತವಿಲ್ಲಿದೆ.

ಈಗ ಮತ್ತೆ ಆ ಮೂಲ ಪ್ರಶ್ನೆಯೆ ತಲೆದೋರಿದೆ. 'ಇನ್ನುಳಿದ ಮುಸಲ್ಮಾನರಾದರೂ ಹಿಂದೂ ದೇಶದ ನಾಗರಿಕರಾಗುವರೆ ?' ಹಿಂದುಸ್ತಾನದ ನಾಗರಿಕರೆಲ್ಲ ಹಿಂದುಗಳು, ಎಂದು ಎಲ್ಲರಿಗೂ ಹಿಂದುಗಳನ್ನಲು, ಹಿಂದೂ ಶಬ್ದಕ್ಕೆ ಮಧ್ಯಕಾಲದಲ್ಲಿ, ದೊರೆಕೊಂಡಿರುವ ಸಂಕುಚಿತಾರ್ಥವು ಅಡ್ಡ ಬರುತ್ತದೆ. ಹಿಂದೂ ಎಂದೊಡನೆ ಮುಖ್ಯವಾಗಿ ಮುಸಲ್ಮಾನರನ್ನುಳಿದ ಕೆಲವೊಂದು ವಿಶಿಷ್ಟ ಜನವೆಂಬ ಅರ್ಥವು ಈಗ ರೂಢವಾಗಿದೆ;ಎಂದು ಕೆಲವರು ಆಕ್ಷೇಪಿಸಲು ಅವಕಾಶವಿದೆಯಾದರೂ ಈ ಆಕ್ಷೇಪಣೆಯಲ್ಲಿ ವಿಶೇಷ ಹುರುಳಿಲ್ಲ. ಇದು ಜಾತ್ಯತೀತವಾದ ಕೇವಲ ಪ್ರಾದೇಶಿಕ ಅರ್ಥದ ಪದವಾಗಿದ್ದು ಎಲ್ಲರೂ ಹಾಗೆ ಅದನ್ನು ಬಳಸಲು ತೊಡಗಿದರೆ, ಎಲ್ಲವೂ ಸರಿಹೋಗುವುದು. ಅಮೇರಿಕೆಯಲ್ಲಿ ಹಿಂದುಸ್ತಾನದವನೆಂಬರ್ಥದಲ್ಲಿ 'ಹಿಂದೂ' ಎಂಬ ಪದವೇ ಬಳಕೆಯಲ್ಲಿ ಇಲ್ಲವೆ ? 'ಇಂಡಿಯನ್' ಎಂದರೆ ರೆಡ್‌ಇಂಡಿಯನ್‌ರೆಂಬ ಕಾಡಾಡಿಗಳ ಹೆಸರು ಅಲ್ಲಿ !

ಆದರೆ, ಬ್ರಿಟಿಶರ ಕೈವಾಡದಿಂದಲೂ, ಮತ್ತು ಮುಸಲ್ಮಾನರ ಲೀಗಿನ ವಿರುದ್ಧ ಹಿಂದೂ ಮಹಾಸಭೆಯು ಸ್ಥಾಪಿತವಾಗಿ, ನಡೆದ ಹಿಂದೂಸಂಘಟನೆಯು ಚಳವಳಿಯಿಂದಲೂ ಹಿಂದೂ ಶಬ್ದವು ಮುಸಲ್ಮಾನರ ಭಾವನೆಗಳನ್ನು ಉದ್ರೇಕಿಸುವ ಒಂದು ಪದವಾಗಿ ಬಿಟ್ಟಿತು. ಈ ಕಾರಣದಿಂದಲೇ ಇಂದು ಭಾರತದ ಸಂಘ ರಾಜ್ಯಕ್ಕೆ 'ಹಿಂದೂ ಸಂಘರಾಜ್ಯ' ವೆಂಬ ಹೆಸರಿನಿಂದ ಕರೆಯಲು ಪಂ. ಜವಾಹರಲಾಲರಂತಹರ ವಿರೋಧವು ಕಂಡು ಬರುತ್ತಿದೆ. 'ಹಿಂದೂಸಂಘರಾಜ್ಯ'ವೆಂಬ ದೇಶೀಯ ಹೆಸರಿನ ಸ್ಥಳದಲ್ಲಿ 'ಇಂಡಿಯನ್' ಎಂಬ ಪರಕೀಯ ಪದವನ್ನೇ ಕೇಂದ್ರ ಸರಕಾರವು ಬಳಸುತ್ತಲಿದೆ !

ಹಾಗಾದರೆ, 'ಇಂಡಿಯನ್' ಎಂಬುದಕ್ಕೆ ಸಮಾನವಾದ ಹಿಂದೂ ದೇಶದ ಜನಗಳು, ಎಂಬ ಭಾವದ ಜಾತ್ಯತೀತವಾದ ಅರ್ಥದ ಒಂದು ದೇಶೀಯ ಪದದ ಅವಶ್ಯಕತೆಯಂತೂ ಉಂಟಷ್ಟೆ? 'ಇಂಡಿಯನ್' ಎಂಬುದು ಇಂಗ್ರೇಜಿ ಭಾಷೆಯಲ್ಲಿ ಮಾತ್ರ ರೂಢವಾಗಿದೆ. ದೇಶ ಭಾಷೆಗಳಲ್ಲಿ ಇದು ಇನ್ನೂ ಶಿಷ್ಟ ಸಂಮತವಾದ ಮಾತಾಗಿಲ್ಲ. 'ಹಿಂದೀ'ಯರು ಎನ್ನುವುದರಿಂದ 'ಇಂಡಿಯನ್' ಎಂಬ ಸಾಮಾನ್ಯವಾದ ಅರ್ಥವು ಈಗ ಧ್ವನಿತವಾಗುತ್ತಲಿದೆ. 'ಹಿಂದೂ' ಪದಕ್ಕೆ ಇರುವ ಸಂದಿಗ್ಧತೆಗೆ ಇಲ್ಲಿ ಅವಕಾಶವಿಲ್ಲ. ಹಿಂದೀಯರು ಎಂಬಲ್ಲಿ ಮುಸಲ್ಮಾನರು, ಮುಸಲ್ಮಾನೇತರರು ಹಿಂದೂ ದೇಶದ ಎಲ್ಲ ಜನವೆಂಬ ಅರ್ಥವು ಈಗ ರೂಢವಾಗುತ್ತಲಿದೆ. ಹಿಂದೂ ದೇಶದ ಜನರು ಹಿಂದೀಯರು; ಅವರ ರಾಷ್ಟ್ರಭಾಷೆ ಹಿಂದೀ, ಎಂಬ ಮಾತುಗಳು ಈಗ ಬಳಕೆಯಲ್ಲೂ ಉಂಟು.

ಆದರೆ ಹಿಂದೀಯರೆಂಬುದುಕ್ಕೆ ಒಂದು ದೊಡ್ಡ ಆಕ್ಷೇಪವಿದೆ. ಪರ ರಾಷ್ಟ್ರಗಳಲ್ಲಿ ನಮ್ಮವರನ್ನು ನಮ್ಮ ರಾಷ್ಟ್ರದ ಹೆಸರಿನಿಂದಲೇ ಗುರುತಿಸುವ ಅವಶ್ಯಕತೆಯ ಮಹತ್ವವನ್ನು ಬೇರೆ ಹೇಳಬೇಕಾಗಿಲ್ಲ. ನಮ್ಮ ರಾಷ್ಟ್ರಭಾಷೆ ಇಂಗ್ರೇಜಿಯಲ್ಲ; ನಮ್ಮ ಸ್ವಂತದ ರಾಷ್ಟ್ರಭಾಷೆಯೊಂದಿದೆ, ಎಂಬ ಹೆಮ್ಮೆಯನ್ನು ತಾಳುವ ನಮ್ಮ ಮುಂದಾಳುಗಳು, ತಮ್ಮ ರಾಷ್ಟ್ರಕ್ಕೆ ಮಾತ್ರ ಇನ್ನೂ 'ಇಂಡಿಯಾ' ಎಂತಲೇ ಕರೆದುಕೊಳ್ಳುತ್ತಿರುವುದು ಅವರ ಸ್ವಾಭಿಮಾನಕ್ಕೇ ಕುಂದು. ತಮ್ಮ ಜಾತ್ಯತೀತನದ ಪ್ರದರ್ಶನದಲ್ಲಿ ಬಹುಸಂಖ್ಯಾಕರು ನಿರ್ದೇಶಿಸಲ್ಪಡುವ 'ಹಿಂದೂ' ಎಂಬ ಹೆಸರನ್ನೆ ಒರಸಿಬಿಡುವ ಎತ್ತುಗಡೆಯಲ್ಲಿದ್ದಾರೆ. ಸಹಜ ಸುಲಭವಾದ 'ಹಿಂದೀ' ಎಂಬುದರ ಬದಲು ಭಾಷೆಗೆ 'ಹಿಂದುಸ್ತಾನೀ' ಎಂದು ಉಚ್ಚರಿಸಲು ಉದ್ದವಾದ ಪದವನ್ನು ರೂಢಿಸ ಬೇಕೆಂದಿದ್ದಾರೆ. ದ್ವಿರಾಷ್ಟ್ರವಾದದ ನಂಜು ನಮ್ಮ ನಾಡಿನಲ್ಲಿ ಉಳಿಯಲಾಗದೆಂದು ಆವೇಶದಿಂದ ಹೇಳುತ್ತಾರೆ. ಆದರೆ ದೇವನಾಗರಿಯೊಡನೆ ಉರ್ದೂಲಿಪಿಯನ್ನೂ ಕಲಿಸುವ ಒತ್ತಾಯದ ವಿಚಾರ ನಡಸಿದ್ದಾರೆ! ಹಿಂದೂ ದೇಶದಲ್ಲಿ ನೆಲಸಿದವರೆಲ್ಲರೂ ಹಿಂದೂಗಳೇ, ಎಂಬ ಸರಲವಾದ ವ್ಯಾಖ್ಯೆಮಾಡಿದರೆ ಎಲ್ಲ ಜನಗಳಿಗೂ ಜಾತ್ಯತೀತ ದೃಷ್ಟಿಯನ್ನು ತಂದುಕೊಳ್ಳುವ ಅವಶ್ಯಕತೆಯುಂಟಾಗುತ್ತದೆ. 'ಹಿಂದೂ' ಎಂಬ ಹೆಸರು ಯಾವ ಧರ್ಮದವರ ಸೊತ್ತಲ್ಲ. ಇದು ದೇಶವಾಚಕ

ಪದವೆಂಬುದು ನಿಶ್ಚಿತವಿದೆ. ಆದರೆ ಹಿಂದಿಯರೆನ್ನುವುದರಿಂದಲೇ ಹಿಂದೂ ಮತ್ತು ಮುಸಲ್ಮಾನರೆಂಬ ವಿಷಬೀಜದ ನೆನಹನ್ನು ಸ್ಥಿರವಾಗಿ ಉಳಿಸಿಕೊಂಡು ನಾವು ಹೊರಡುತ್ತಲಿದ್ದೇವೆ. ಮುಸಲ್ಮಾನರು ತಾವು ಬೇರೆ, ಎಂಬುದಕ್ಕೆ ಎಲ್ಲಿಯೂ ಇಂಬು ಉಳಿಯದಂತೆ ಜಾಗರೂಕತೆಯಿಂದ ಮುಂದೆ ಸಾಗುವುದೇ ಜಾಣ್ಮೆಯಲ್ಲವೊ ?

ಹಿಂದೂ ದೇಶದ ನಾರಿಕರಿಗೆ ಹಿಂದುಗಳೆನ್ನಲು ಒಪ್ಪದೆ ಹೋದರೆ ಬಹು ಸಂಖ್ಯಾಕರ ಹೆಸರನ್ನೆ ಮೂಲೆ ಗುಂಪುಮಾಡಿ ಪ್ರಜಾಪ್ರಭುತ್ವದ ತತ್ವಕ್ಕೆ ಅರದಾಳ ಹಚ್ಚಿದಂತಾಗುವದಿಲ್ಲವೆ? 'ಹಿಂದುಸ್ತಾನದ ನಾಗರಿಕರಿಗೆ ಹಿಂದೂ ಗಳೆಂದು ಕರೆಯುವುದಕ್ಕೆ ಹಿಂದೆಗೆಯುವ ಮನಃಪ್ರವೃತ್ತಿಯನ್ನು ಪೃಥಕ್ಕರಿಸಿ ವಿಚಾರಿಸಿದರೆ ಅಲ್ಲಿ ಏನು ಕಂಡು ಬರುವುದು? ಮುಸಲ್ಮಾನರು ಅಸಂತುಷ್ಟರಾದ ರೆಂಬ ಹೆದರಿಕೆ ! ತಮ್ಮ ದಾರಿಬಿಟ್ಟು ಹೋಗಿ ಮುಸಲ್ಮಾನರನ್ನು ಸಂತುಷ್ಟ ಗೊಳಿಸುವ ಪ್ರಯತ್ನಗಳಿಂದ ಬಂದಿರುವ ಈ ವರೆಗಿನ ಕಟು ಅನುಭವಗಳು ಸಾಕಾಗಿಲ್ಲವೆ? ಹಿಂದೀ, ಹಿಂದೂ ಎಂಬ ಎರಡು ಜಾತಿವಿಭಾಗಗಳಿಂದ ದೇಶ ದಲ್ಲಿ ಜಾತೀಯತೆಯ ವಿಷದ ಬೇರುಗಳನ್ನು ಇನ್ನೂ ಉಳಿಸಿಕೊಂಡಂತಾಗಲಿ ಲ್ಲವೆ? ಅದರಿಂದ ಮುಸಲ್ಮಾನರ ಜಾತ್ಯಂಧತೆಯ ವಿಷವೃಕ್ಷವು ಮತ್ತೆ ಚಿಗು ರುವ ಹೆದರಿಕೆಯು ಉಳಿಯಲಿಲ್ಲವೆ ?

ಅಖಿಲ ಹಿಂದೂ ಸಮಾಜಕ್ಕೆ ಅನ್ವಯಿಸುವ ಒಂದೇ ಬಗೆಯ ಕಾನುನು ಗಳನ್ನು ರಚಿಸುವ ಸ್ತುತ್ಯವಾದ ಉಪಕ್ರಮವು ಇದೀಗ ನಡೆದಿದೆಯಷ್ಟೆ. ಈ ಸಂದರ್ಭದಲ್ಲಿ 'ಸಂಯುಕ್ತ ಕರ್ನಾಟಕ'ದ ಸಂಪಾದಕರು ಇನ್ನೂ ಒಂದು ಅಡಿ ಮುಂದಿಟ್ಟು ವಿಚಾರಾರ್ಹವಾದ ಬಹಳ ಮಹತ್ವದ ಒಂದು ಸೂಚನೆ ಯನ್ನು ಮಾಡಿದ್ದಾರೆ. ಹಿಂದೂ ದೇಶದ ನಾಗರಿಕರಿಗೆಲ್ಲ ಒಂದೇ ಸ್ಮೃತಿ ಗ್ರಂಥ (ಕಾಯಿದೇ ಪುಸ್ತಕ) ಇರುವುದೇ ನ್ಯಾಯವಾದುದು. ಹಿಂದೂ ಕಾಯಿದೆ, ಮುಸಲ್ಮಾನ ಕಾಯಿದೆ, ಕ್ರಿಸ್ತೀಕಾಯಿದೆ, ಫಾರ್ಸಿಕಾಯಿದೆ ಹೀಗೆಲ್ಲ ಬೇರೆ ಬೇರೆ ಕಾಯಿದೆಗಳನ್ನು ಚಲಾವಣೆಯಲ್ಲಿ ಉಳಿಸಿಕೊಂಡು ಹೊರಡುವುದು ಭಾರತೀಯ ಸಂಘರಾಜ್ಯದಲ್ಲಿ ಜಾತ್ಯತೀತವಾದ ಒಂದೇ ಜನಾಂಗವು ರೂಪಗೊಳ್ಳಬೇಕೆಂಬ ಮೂಲೋದ್ದೇಶಕ್ಕೇ ಬಾಧಕವಾಗುತ್ತದೆ. ಆದಕಾರಣ-ಹಿಂದೂ ದೇಶದ ನಾಗರಿಕರಿಗೆಲ್ಲ ಒಂದೇ ಸ್ಮೃತಿಯನ್ನು ಅನುಸರಿ

ಸುವ ಅವಶ್ಯಕತೆಯಿದೆ. “ಹಿಂದುಸ್ತಾನವು ಸ್ವತಂತ್ರ ಜಾತ್ಯತೀತ ರಾಷ್ಟ್ರವೆಂದು ರಾಷ್ಟ್ರೀಯ ಸರಕಾರವು ತನ್ನ ಗುರಿಯನ್ನು ಸಾರಿದೆ. ಈ ಘೋಷಣೆಯ ಮೇರೆಗೆ ಹಿಂದುಸ್ತಾನವಲ್ಲಿರುವ ಎಲ್ಲ ಜಾತಿಯವರಿಗೂ ಒಂದೆ ಬಗೆಯ ಕಾಯಿದೆ ಕಾನೂನುಗಳಿರುವಂತೆ ಏರ್ಪಡಿಸುವುದು ಸರಕಾರದ ಕರ್ತವ್ಯವಾಗಿದೆ.” (೧೩-೪-೪೮). ಹಿರಿಬರೆಹದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯವು ಅತ್ಯಂತ ಗಮನನೀಯವಾಗಿದೆ.

ಹೊಸ ಹಿಂದೂ ಕಾಯಿದೆಯ ಮೇರೆಗೆ ಒಬ್ಬನಿಗೆ ಒಬ್ಬಳೇ ಮಡದಿಯಿರತಕ್ಕದ್ದು. ಆದರೆ ಮುಸಲ್ಮಾನ ಕಾಯಿದೆಯಂತೆ ಒಂದಕ್ಕಿಂತ ಹೆಚ್ಚು ಹೆಂಡಂದಿರು ಇರಲು ಅಡ್ಡಿಯಿಲ್ಲ! ಹಿಂದೂ ವಿಲಾಸಿಯೊಬ್ಬನು ಒಬ್ಬಳಿಗಿಂತ ಹೆಚ್ಚು ಮದುವೆಯಾಗುವ ಅಪೇಕ್ಷೆಯುಳ್ಳವನಾದರೆ, ಅಥವಾ ಯಾರಿಗಾದರೂ ಒಬ್ಬ ಹೆಂಡತಿಯಿರುವಾಗ ಇನ್ನೊಬ್ಬಳನ್ನೂ ಕೈಹಿಡಿವ ಅನಿವಾರ್ಯ ಪ್ರಸಂಗವು ಉದ್ಭವಿಸಿದಾಗ ಇಂತಹರು ಹಿಂದೂ ಧರ್ಮದಲ್ಲಿ ಇರುವುದಕ್ಕಿಂತ ಮುಸಲ್ಮಾನನಾಗುವುದು ಲೇಸೆಂದು ಬಗೆಯ ಬಹುದಾಗಿದೆ. ಬಹುದಿನ ಮಾತು ಏತಕ್ಕೆ? ಈ ಕಾರಣಕ್ಕಾಗಿಯೆ ಜಾತಿಯನ್ನು ತೊರೆದವರ ಉದಾಹರಣಗಳು ಬೇಕಾದಷ್ಟಿವೆ. ಬೇರೆ ಬೇರೆ ಕಾನೂನುಗಳು ಇದಲ್ಲಿ ಇಂತಹ ಸಂಗತಿಗಳು ಸಂಭವಿಸಿ ಹಿಂದು-ಮುಸಲ್ಮಾನರಲ್ಲಿ ಮತ್ತೆ ಜಾತಿ ಜಾತಿಗಳೊಳಗಿನ ಹಗೆತನವು ಮೊತ್ತಿ ಬೆಳೆಯದೆ ಇರಲಾರದು.

ಇಂದಿನ ವಿಶೇಷ ಪರಿಸ್ಥಿತಿಯು ಕಾವಿನಲ್ಲಿ ಕರಗಿ ಎಲ್ಲವೂ ಒಂದು ರೂಪವನ್ನು ತಾಳುವುದರಲ್ಲಿದೆ. ಈ ಸಂದರ್ಭದ ಲಾಭಪಡೆದು ರಾಷ್ಟ್ರೀಯ ಸರಕಾರದವರು ಹಿಂದೂ ದೇಶಕ್ಕೆಲ್ಲ ಅನ್ವಯಿಸುವ ಒಂದೆ ಬಗೆಯ ಕಾಯಿದೆ ಕಾನೂನುಗಳನ್ನು ಮಾಡುವುದು —ಹಿಂದೂ ದೇಶದ ನಾಗರಿಕರನ್ನೆಲ್ಲ ಹಿಂದುಗಳೆಂದು ಸಾರುವುದು ಸಮಂಜಸವಾಗಿದೆ. ಹಿಂದುಗಳೆಂಬ ಪದವನ್ನು ಬಳಕೆಯಲ್ಲಿ ತರುವುದಕ್ಕಾಗಿ ಮುಸಲ್ಮಾನರೂ ಮುಸಲ್ಮಾನೇತರರು ಎಲ್ಲರೂ ಒಂದು ಬಗೆಯ ತ್ಯಾಗಕ್ಕೆ ಸಿದ್ಧರಾಗಿ ಹಳೆಯ ಸಂಕುಚಿತ ಭಾವನೆಗಳ ಕೊಳೆಯನ್ನು ತೊಳೆದು ಶುಚಿಯಾಗಿ ತಾವು ನೆಲಸಿದ್ದು ಹಿಂದೂ ದೇಶದಲ್ಲಿ; ಹಿಂದೂ ದೇಶದ ನಾಗರಿಕರೆಲ್ಲ ಹಿಂದುಗಳು ಎಂಬ ಸಿದ್ಧಾಂತಕ್ಕೆ ಬರುವುದು ಅವಶ್ಯಕವಿದೆ. ರಾಷ್ಟ್ರೀಯ ಅಖಂಡತೆಗೆ, ಜನಾಂಗದ ಒಂದು ತನದ ಸಿದ್ಧಿಗೆ ಇದೇ ಉತ್ತಮ ಉಪಾಯವು.

# ಮುಸಲ್ಮಾನರ ತೊಡಕು

ಖಿಲಾಪತಿನಂತಹ ಧಾರ್ಮಿಕ ಆಂದೋಲನಕ್ಕೆ ಉತ್ತೇಜನಕೊಟ್ಟ ಮಾತುಗಳನ್ನು ಬಿಟ್ಟರೂ ಮಹಾತ್ಮಾಜೀಯವರು ೧೯೪೭ನೆಯ ಅಗಷ್ಟಿನವರೆಗೆ ಹಿಂದೂ ಮುಸಲ್ಮಾನರ ಒಕ್ಕಟ್ಟಿನ ವಿಷಯವಾಗಿ ಮಾಡುತ್ತಿದ್ದ ಉಪದೇಶದ ತಾತ್ವಿಕ ಭೂಮಿಕೆಯನ್ನು ಸಮಂಜಸರಾದವರು ಯಾರಾಗಲಿ ಒಪ್ಪಲೇ ಬೇಕಾಗುತ್ತಿತ್ತು. ಆದರೆ ೧೯೪೭ನೆಯ ಅಗಷ್ಟಿನ ನಂತರದ ಸ್ಥಿತಿಯು ತೀರ ಬದಲಾಗಿದೆ.

ಭಾರತವು ಒಂದೇ ರಾಷ್ಟ್ರ, ಅದರಲ್ಲಿ ನೆಲಸಿದವರೆಲ್ಲರೂ ಯಾವ ಧರ್ಮದವರೇ ಇರಲಿ ಒಂದು. ಇವರಲ್ಲಿ ಐಕ್ಯ ಸೌಹರ್ದಗಳು ನೆಲೆಗೊಳುವುದು ಅವಶ್ಯ. ಆದಕಾರಣ ಮುಸಲ್ಮಾನರೊಡನೆ ಹೊಂದಿಸಿಕೊಂಡಿರುವದು ಬಹುಸಂಖ್ಯಾಕರಾದ ಹಿಂದುಗಳ ಕರ್ತವ್ಯವೇ ಆಗಿತ್ತು. ಅಲ್ಪ ಸಂಖ್ಯಾಕರಿಗೆ ತಮ್ಮ ಬದುಕು, ಬಾಳು, ಏಳ್ಗೆಗಳು ಇಲ್ಲಿ ಯಾವ ಅಡೆತಡೆಗಳಿಲ್ಲದೆ ಸುಸೂತ್ರ ಸಾಗುವುವು ಎಂಬ ವಿಶ್ವಾಸವುಂಟಾಗುವಂತಹ ವಾತಾವರಣವನ್ನು ಕಲ್ಪಿಸಿಕೊಡುವುದು ಬಹುಸಂಖ್ಯಾಕರ ಆದ್ಯಕರ್ತವ್ಯ. ಈ ದೃಷ್ಟಿಯಿಂದ ಮಹಾತ್ಮಾಜೀಯವರು ಆಗ ಮಾಡುತ್ತಿದ್ದ ಉಪದೇಶವು ಸರಿಯಾದುದೇ ಆಗಿದ್ದಿತು.

ಆದರೆ, ಧರ್ಮಾಭಿಮಾನದ ಅತಿರೇಕದಲ್ಲಿ ಮುಸಲ್ಮಾನ ಸಮಾಜವು ಪಾಕಿಸ್ತಾನದ ಆರ್ಭಟೆಯನ್ನು ಹೆಚ್ಚಿಸುತ್ತಲೇ ಹೋಗಿ ೧೯೪೭ನೆಯ ಅಗಷ್ಟಿಗೆ ಅದರ ಪರಮಾವಧಿ ದುರಂತವೂ ಆಯಿತು. ಹಿಂದೂ ದೇಶವು ತುಂಡರಿಸಲ್ಪಟ್ಟು, ಮುಸಲ್ಮಾನರಿಗಾಗಿ ಒಂದು ಸ್ವತಂತ್ರ ರಾಜ್ಯವನ್ನು ನಿರ್ಮಿಸಿಕೊಟ್ಟಂತಾಯಿತು.

ಇಳಿಗಾಲದೊಳಗಿನ ಹಿಂದು ಸಮಾಜದ, ವಿಶೇಷತಃ ಉಪಾಧ್ಯಾಯ-ಪುರೋಹಿತ ವರ್ಗದ ಸಂಕುಚಿತ ಧಾರ್ಮಿಕದೃಷ್ಟಿ, ವಿಚಿತ್ರ ಮಡಿವಂತಿಕೆಯ ಕಲ್ಪನೆಯ ಮೂಲಕ ಈ ದೇಶದಲ್ಲಿ ಮುಸಲ್ಮಾನರ ಜನಸಂಖ್ಯೆಯು ವಿಪರೀತವಾಗಿ ಬೆಳೆದಿತು. ಜೀವಂತವಿದ್ದಾಗ ಯಾವ ಹಿಂದೂ ಸಮಾಜವು ಅಂದು ಒಳನುಗ್ಗಿ ಬಂದ ಆಭೀರ, ಹೂಣ ಮೊದಲಾದವರನ್ನು ತನ್ನಲ್ಲಿ ಅರಗಿಸಿಕೊಂಡಿತೊ ಅದುವೆ ಕ್ರಿ. ಶ. ದ ೭-೮ನೆಯ ಶತಮಾನದಿಂದ ಮುಂದೆ ಮುಸಲ್ಮಾನರನ್ನು ಪಚನ ಮಾಡಿಕೊಳ್ಳಲು ಸಮರ್ಥವಾಗಲಿಲ್ಲ.

ಆದರೂ ತಮ್ಮ ರಾಜ್ಯವನ್ನು ನೆಲಕ್ಕುರುಳಿಸಿ ಬ್ರಿಟಿಶರು ತಾವೇ ರಾಜರಾಗಿ ಮೆರೆಯಲಾರಂಭಿಸಿದುದು ಹಿಂದುಗಳಿಗೂ ಮುಸಲ್ಮಾನರಿಗೂ ಸಹನವಾಗಲಿಲ್ಲ. ಹಿಂದಿನದೆಲ್ಲ ಆಯ್ತು; ಹೋಯ್ತು. ನಮ್ಮಿಬ್ಬರಿಗೂ ಬ್ರಿಟಿಶರೇ ಸಾಮಾನ್ಯ ಶತ್ರುಗಳು. ಅವರನ್ನು ಹೊರಗೆ ಅಟ್ಟುವುದು ನಮ್ಮ ಕರ್ತವ್ಯ; ಇದಕ್ಕಾಗಿ ನಾವೆಲ್ಲ ಒಂದುಗೂಡಲೇ ಬೇಕು, ಎಂಬೀ ಬಗೆಯ ವಿಚಾರಗಳು ಎರಡೂ ಸಮಾಜದಲ್ಲಿ ಬ್ರಿಟಿಶರ ಆಡಳಿತವು ಆರಂಭವಾದೊಡನೆ ಆಗ ತಲೆದೋರಿದುವು. ೧೮೫೭ರ ಸ್ವಾತಂತ್ರ್ಯ ಯುದ್ಧ ಈ ಬಗೆಯ ವಿಚಾರದ ತಳಹದಿಯಿಂದಲೇ ಆರಂಭವಾಯಿತು. ೧೮೮೫ರಲ್ಲಿ ರಾಷ್ಟ್ರೀಯ ಮಹಾಸಭೆಯನ್ನು ಸ್ಥಾಪಿಸುವುದಕ್ಕಾಗಿ ಹಿಂದೂ ಮುಸಲ್ಮಾನ (ಪಾರ್ಸಿ, ಕ್ರಿಸ್ತಿಗಳು ಕೂಡ) ಈ ಭಾವದಿಂದಲೇ ಮುಂದುವರಿದರು.

ಹೀಗೆ ಹೊಸ ಪರಿಸ್ಥಿತಿಯಲ್ಲಿ, ಬ್ರಿಟಿಶರು ಹಿಂದೂ–ಮುಸಲ್ಮಾನರಿಬ್ಬರಿಗೂ ಹೊರಗಿನ ಸಾಮಾನ್ಯ ಶತ್ರುಗಳೆಂಬ ಭಾವವು ಬಲಿಷ್ಠವಾಗಿ, ಅವರು ಒಂದುಗೂಡಲಾರಂಭಿಸಿದರು. ಆದರೆ ಬ್ರಿಟಿಶ ರಾಜತಂತ್ರ ಪ್ರವೀಣರು ಇದನ್ನು ಮುಂಗಂಡು ಮೆಲ್ಲನೆ ಹಲವು ಬಗೆಯ ಕುಯುಕ್ತಿಗಳಿಂದ ಇವೆರಡೂ ಸಮಾಜದಲ್ಲಿ ಕಲಕಲ, ಕಾದಾಟಗಳು ತಲೆದೋರುವಂತೆ ಮಾಡಿದರು. ೧೮೯೩ರಿಂದ ಹಿಂದೂ—ಮುಸಲ್ಮಾನ ದೊಂಬಿಗಳು ಆರಂಭವಾದುವು. ಇದರ ಸಂಪೂರ್ಣ ಇತಿಹಾಸವನ್ನು ಸಾಧಾರವಾಗಿ ಡಾ. ರಾಜೇಂದ್ರ ಪ್ರಸಾದರು India Divided ಎಂಬ ತಮ್ಮ ಅಮೌಲಿಕವಾದ ಗ್ರಂಥದಲ್ಲಿ ವಿವರಿಸಿದ್ದಾರೆ. ಬ್ರಿಟಿಶರು ಅಂದು ಬಿತ್ತಿದ ವಿಷಬೀಜವು ಮೊಳೆತು, ಮರವಾಗಿ ಹಣ್ಣಾಲು ೫೦ ವರುಷಗಳು ಬೇಕಾದುವು. ನಂಜಿನ ಆ ಹಣ್ಣೇ ಇಂದಿನ ಪಾಕಿಸ್ತಾನ.

ಪಾಕಿಸ್ತಾನವನ್ನು ಕೊಟ್ಟುಬಿಟ್ಟರೆ ಹಿಂದೂ–ಮುಸಲ್ಮಾನರ ತೊಡಕು ಬಿಟ್ಟು ಹೋಗುವುದೆಂದು ಕೆಲವರಿಗೆ ಭ್ರಮೆಯಿದ್ದಿತು. ಅದು ಈಗ ಬಯಲಾಗಿದೆ. ಆ ತೊಡಕು ಇನ್ನಿಷ್ಟು ಬಿಗಿಯಾದುದು ಅನುಭವಕ್ಕೆ ಬಂದಿದೆ.

ಅಖಂಡ ಹಿಂದುಸ್ಥಾನವಿದ್ದು ಇಂದಿನ ಸ್ವಾತಂತ್ರ್ಯ ದೊರೆತಿದ್ದರೆ, ಜಾತಿ ಧರ್ಮದ ಬಂಧನಗಳನ್ನೂ ಬಿಟ್ಟು ಮುಸಲ್ಮಾನರೊಡನೆ ಒಂದುಗೂಡುವವರೆಗೆ ಮನಸಿನ ಸಿದ್ಧತೆಯುದ್ದ ಹಿಂದುಗಳಿದ್ದರು. ಆದರೆ ಪಾಕಿ

ಸ್ತಾನವೆಂಬ ಮುಸಲ್ಮಾನರ ಒಂದು ಸ್ವತಂತ್ರ ರಾಜ್ಯವೇ ತಲೆ ಎತ್ತಿದ್ದರಿಂದ ಇಂದು ಪರಿಸ್ಥಿತಿ ಎಲ್ಲವೂ ತಿರುವು ಮುರುವಾಗಿದೆ!

ಭಾರತವನ್ನು ಅಖಂಡವಾಗಿ ಉಳಿಸುವ ಮನಸು ಮಾಡಿದ್ದರೆ ಬ್ರಿಟಿಶರಿಗೆ ಅದು ಅಸಾಧ್ಯವೂ ಇದ್ದಿಲ್ಲ. ಹಿಂದೀ ಘಟನಾಸಮಿತಿಯಲ್ಲಿ ಬರಲು ಸಿದ್ಧರಿಲ್ಲದ ಜಿನ್ನಾ ಪಕ್ಷವನ್ನು ಕಡೆಗಣಿಸಿ ಸ್ವತಂತ್ರ ಭಾರತದ ಘಟನೆಯನ್ನು ಸಿದ್ಧಪಡಿಸಲು ಕಾಂಗ್ರೆಸ್ಸಿನವರಿಗೂ ಉಳಿದ ಮುಸಲ್ಮಾನರಿಗೂ ಬ್ರಿಟಿಶರೂ ಅನುಮತಿಸಬೇಕಾಗಿತ್ತು. ದೊಂಬಿಯುದ್ಧವನ್ನು ಸದೆಬಡಿದು ಈ ಕೆಲಸವನ್ನು ಕೊನೆಗಾಣಿಸ ಬಹುದಿತ್ತು. ಹಿಟ್ಲರನನ್ನು ನಿರ್ನಾಮಮಾಡಿ ನಾಜಿಗಳನ್ನು ಮಣ್ಣು ಮುಕ್ಕಿಸಿದ ಬ್ರಿಟಿಶರಿಗೆ ಜಿನ್ನಾಗಳನ್ನು ಬಗ್ಗಿಸುವುದು ಅಸಾಧ್ಯವಿದ್ದಿಲ್ಲ. ಆದರೆ ಬ್ರಿಟಿಶರಿಗೆ ಭಾರತವು ಅಖಂಡವಿರುವುದು ಬೇಕಾಗಿದ್ದಿಲ್ಲ. ಆದುದರಿಂದ ಪಾಕಿಸ್ತಾನಿಗಳಿಗೆ ಪ್ರೋತ್ಸಾಹಿಸಿ ಅವರದೊಂದು ಸ್ವತಂತ್ರ ಸಂಗಡ ಹೂಡಿದರು. ಅವರಿಗೆ ಬೇರೆ ರಾಜ್ಯ ಕಟ್ಟಿ ಕೊಟ್ಟರು.

ಆದುದೆಲ್ಲವೂ ಒಳಿತೇ ಆಯಿತು. ಏಕೆಂದರೆ ಮುಸಲ್ಮಾನರಿಗೆ ಈಗ ನಿಜವಾದ ಪರಿಸ್ಥಿತಿಯು ಅರಿವು ಉಂಟಾಗತೊಡಗಿದೆ. ಪಾಕಿಸ್ತಾನದಿಂದ ಸಿಂಧ—ಪಂಜಾಬದ ಮುಸಲ್ಮಾನರಿಗೆ—ಬಹುಸಂಖ್ಯಾಕ ಮುಸಲ್ಮಾನರಿಗಂತೂ ನಿಜ, ಅದರಿಂದ ಹಾನಿಯೆ ಆಗಿದೆಯೆಂದು ಅವರೇ ಒಪ್ಪುತ್ತಿದಾರೆ. ಹಿಂದುಗಳೊಡನೆ ಒಂದುಗೂಡುವ ಮಾತನ್ನಾಡುತ್ತಿದ್ದಾರೆ!

ಆದರೆ ಇದೀಗ ಮುಖ್ಯ ಪ್ರಶ್ನೆ ಬೇರೆಯೆ ಇದೆ. ಯಾವ ಮುಸಲ್ಮಾನರು ಲೀಗಿನ ಕೂಗಿಗೆ ದನಿಗೂಡಿಸಿ 'ಲಢಕೇ ಲೇಂಗೇ ಪಾಕಿಸ್ತಾನ'! ಎಂದು ಊರೂರಿಗೆ ಗುಂಪುಗಟ್ಟಿಕೊಂಡು ಹೆದರಿಕೆ ಬೆದರಿಕೆಯ ಮಾತುಗಳನ್ನಾಡುತ್ತಿದ್ದರೊ ಅವರೇ, ಈಗ ಜಿನ್ನಾಸಾಹೇಬರ ಬೆಂಬಲವು ತಮಗೆ ದೊರೆಯುವುದು ಸಾಧ್ಯವಿಲ್ಲವೆಂದು ಮನವರಿಕೆಯಾದೊಡನೆ ತಮ್ಮ ವೇಷಬದಲಿಸಿ ಭಾರತಾಭಿಮಾನವನ್ನು ತೋರ್ಪಡಿಸಲಾರಂಭಿಸಿರುವರು! ಇಂತಹರ ಮಾತನ್ನು ಭಾರತವು ಎಷ್ಟರ ಮಟ್ಟಿಗೆ ನಂಬಬೇಕು?

ಸಂಯುಕ್ತಪ್ರಾಂತದ ಮುಖ್ಯ ಮಂತ್ರಿಗಳಾದ ಶ್ರೀ ವಲ್ಲಭಪಂತರು ಹಿಂದುಸ್ತಾನದಲ್ಲಿ ಉಳಿದಿರುವ ಮುಸಲ್ಮಾನರನ್ನು ಉದ್ದೇಶಿಸಿ ಒಂದು ಸವಾಲು ಹಾಕಿದ್ದರು. 'ನಾಳೆ ಪಾಕಿಸ್ತಾನದೊಡನೆ ಯುದ್ಧವು ಆರಂಭ

ವಾದರೆ ಇಲ್ಲಿಯ ಮುಸಲ್ಮಾನರು ಅವರೊಡನೆ ಕಾದಲು ಸಿದ್ಧರೆ ?' ಎಂಬ ಈ ಪ್ರಶ್ನೆಗೂ ಕೆಲವು ಮುಸಲ್ಮಾನ ಮುಂದಾಳು ಅಂತೂ ತಮ್ಮ ಒಪ್ಪಿಗೆಯನ್ನೂ ಸೂಚಿಸುವ ಹೊತ್ತು ಬಂದಿದೆ !

ಹೀಗೆ ಹಿಂದುಗಳು ಕೇಳಿದ ಯಾವ ಕರಾರಿಗೂ ಒಪ್ಪಲು ಸಿದ್ಧರಾದ ಮುಸಲ್ಮಾನರ ಇಂದಿನ ಈ ಮಾತುಗಳನ್ನು ಹಿಂದಿನ ಅವರ ನಡೆವಳಿ ತಿಳಿದವರು ನಂಬುವುದು ಕಷ್ಟ! ನಂಬಲಿಕ್ಕಾಗುವುದಿಲ್ಲವೆಂಬುದೂ ಕಷ್ಟ! ಏಕೆಂದರೆ ನಿಮಗೆ 'ಶರಣು' ಎಂದವನನ್ನು ಶಂಕಿಸುವುದು ಸಭ್ಯತೆಗೆ ಒಪ್ಪುವುದಿಲ್ಲ.

ಆದರೆ, ನಂಬಬೇಕೇ ? ಅದಕ್ಕೆ ಅನೇಕ ಅಡ್ಡಿ ಆತಂಕಗಳಿವೆ. ಕುತ್ತಿನಲ್ಲಿದ್ದಾಗ ಶರಣೆಂದು ಹೇಳಿ, ಆ ಪ್ರಸಂಗದಿಂದ ಪಾರಾದೊಡನೆ ತಿರುಗಿ ಬಿದ್ದು ಕೃತಘ್ನರಾದ ಉದಾಹರಣಗಳು ಮುಸಲ್ಮಾನರ ಇತಿಹಾಸದಲ್ಲಿ ಹಲವಾರು ಇವೆ. ಪೃಥ್ವಿರಾಜ ಚವ್ಹಾಣನ ಕೈಯಲ್ಲಿ ಸೋತು ಸಿಕ್ಕಿಬಿದ್ದಾಗ ಶರಣೆಂದು ಹೇಳಿ ಓಡಿ ಹೋದ ಘೋರಿ ಮಹಮ್ಮದನು ಮತ್ತೆ ಮರಳಿಬಂದು ಪೃಥ್ವಿರಾಜನನ್ನು ಸೆರೆಹಿಡಿದುಕೊಂಡು ಹೋದನು. ಅಲ್ಲಾವುದ್ದೀನ ಖಿಲಜಿಯು ಭೀಮದೇವನಲ್ಲಿ ಜೀವದಾನ ಬೇಡಿ, ಮರಳಿ ದಿಲ್ಲಿಗೆ ಹೋದವನು, ಮತ್ತೆ ಆತನ ಮೇಲೆ ಹೊತ್ತು ಸಾಧಿಸಿ ಏರಿಬಂದು ರಾಜಪೂತ ರಾಜ್ಯವನ್ನು ಸೂರೆಗೆಯ್ದನು.

ವಿಜಯನಗರದವರ ಕಾಲದಲ್ಲಿ ಬಂದ ಅನುಭವವು ಇದಕ್ಕಿಂತ ಬೇರೆಯಾಗಿಲ್ಲ; ರಾಮರಾಜನು ಯಾರನ್ನು ತನ್ನ ಮಗನೆಂದು ಬೆಳಸಿದ್ದನೊ ಆ ವಿಜಾಪುರದ ಅದಿಲ್‌ಶಹನೆ ಆತನ ಚೆಂಡಾಡಿದನಂತೆ. ಪೇಶವರ ದಂಡಿನ ತೋಫಖಾನೆಯ ಮುಹಮ್ಮದೀಯರು ಕೊನೆಯ ಪಾನಿಪತ್ತಿನ ಕಾಳಗದಲ್ಲಿ ಮಹಮ್ಮದಶಹಾ ಅಬ್ದಾಲಿಯೊಡನೆ ಕಾದುವಾಗ ವಿಶ್ವಾಸಘಾತಮಾಡಿದುದಾಗಿ ಇತಿಹಾಸವು ಹೇಳುತ್ತದೆ.

ಹಳೆಯ ಕಾಲದಲ್ಲಿ ಆದುದು ಹಿಂದೆ ಆಗಿಹೋಯ್ತು, ಅದು ಸಟೆಯೊ ದಿಟವೋ, ಹೋಗಲಿ; ಬಿಡಿ, ಎಂದು ಅದನ್ನು ಮರೆತು ಬಿಡಬೇಕೆಂದರೆ ಮುಹಮ್ಮದೀಯ ಹಲವು ಮುಂದಾಳುಗಳ ಇಂದಿನ ನಡೆವಳಿಯೂ ಭಾರತೀಯ ರಾಷ್ಟ್ರೀಯತ್ವಕ್ಕೆ ಪೋಷಕವಾಗಿದೆಯೆಂದು ಕಣ್ಣುಮುಚ್ಚಿ ನಂಬುವುದು

ಘೋರ ಪರಿಣಾಮಕ್ಕೆ ಕಾರಣವಾಗುವಂತಿದೆ. ಏಕೆಂದರೆ ಅವರಲ್ಲಿ ಚಿಕ್ಕಂದಿನಿಂದಲೂ ಕಲಿಸಲ್ಪಡುವ ವಿಚಾರಗಳ ರೀತಿಯೇ ಹಾಗಿದೆ. 'ಇಸ್ಲಾಮು ಧರ್ಮವು ಗಂಡಾಂತರದಲ್ಲಿದೆ; ಎದ್ದೇಳಿ' ಎಂದು ಹುಯಿಲು ಎದ್ದರೆ ಅವರೊಳಗಿನ ಒಂದು ಚಿಳ್ಳೆಯಾದರೂ ರಾಷ್ಟ್ರೀಯತ್ವಕ್ಕೆ ಏನಾದರೂ ಬೆಲೆ ಕೊಟ್ಟೀತೇ ? ಎಂಬುದೇ ಸಂದೇಹಾಸ್ಪದವಿದೆ.

ರಾಷ್ಟ್ರೀಯತ್ವವೆಂಬ ವಸ್ತುವು ಮುಸಲ್ಮಾನರಿಗೆ ತೀರ ಹೊಸದು. ರಾಷ್ಟ್ರವೋ, ಧರ್ಮವೋ ಯಾವುದು ನಿಮಗೆ ಮಹತ್ವದ್ದು ? ಎಂದು ಕೇಳಿದರೆ ಅವರೆಲ್ಲ ಧರ್ಮವೆಂದೇ ಹೇಳತಕ್ಕವರು. ಅಲ್ಲೀ ಬಂಧುಗಳಲ್ಲಿ ಮಹಮ್ಮದಲ್ಲಿಯವರು ಬ್ಯಾರಿಸ್ಟರರು; ಕೆಂಬ್ರಿಜ್ ಎಂ. ಎ. ಆದವರು. ಅವರಿಗೆ ಕೂಡ ರಾಷ್ಟ್ರೀಯತ್ವವು ಧರ್ಮಕ್ಕಿಂತ ಕಡಿಮೆಯದೆನಿಸುತ್ತಿತ್ತು. ಮನುಷ್ಯರೆಲ್ಲ ಸಮಾನ ಯೋಗ್ಯತೆಯುವರೆಂಬ ಸಾಮಾನ್ಯ ವಿಚಾರವೂ ಅವರಿಗೆ ಮಾನ್ಯವಿದ್ದಿಲ್ಲ. ಇಸ್ಲಾಮು ಧರ್ಮದವರು ಲೋಕದಲ್ಲಿ ಮಿಗಿಲಾದವರೆಂದು ಅವರ ನೆರೆನಂಬುಗೆ ! ಮುಸಲ್ಮಾನ್ ಒಂದು ಕ್ಷುದ್ರ ವ್ಯಕ್ತಿ ಮತ್ತು ಮಹಾತ್ಮಾಗಾಂಧಿ ಇವರಲ್ಲಿ ನಿಮಗೆ ಯಾರ ಆತ್ಮದ ಯೋಗ್ಯತೆ ಹೆಚ್ಚಿನದೆಂದು ಎನಿಸುವುದು ? ಎಂದು ಕೇಳದಾಗ ಮಹಮ್ಮದಲ್ಲಿ ಕೊಟ್ಟ ಉತ್ತರವೇನು ? 'ಮುಸಲ್ಮಾನ ವ್ಯಕ್ತಿಯು ಕ್ಷುದ್ರವಾಗಿದ್ದರೂ ಅವರ ಆತ್ಮದ ಯೋಗ್ಯತೆ ಹಿರಿದಾದು; ಮೋಕ್ಷಕ್ಕೆ ಅರ್ಹವಾದ ಆತ್ಮವು ಅದು; ಮುಸಲ್ಮಾನ ಧರ್ಮಕ್ಕೆ ಬಾರದೆ ಮಹಾತ್ಮಾಜಿಯವರಿಗೂ ಪರಗತಿ ದೊರೆಯಲಾರದು.' ! ಇಂಗ್ಲಂಡಿನ ಅತ್ಯಾಧುನಿಕ ಶಿಕ್ಷಣ ಪಡೆದ ಮಹಮ್ಮದಲ್ಲಿ ಬ್ಯಾರಿಷ ರರ ವಿಚಾರಗಳಿವು ! ಇನ್ನು ಉಳಿದವರ ಮಾತೇನು ?

ಆದಕಾರಣ, ಜಿನ್ನಾರ ಬೆಂಬಲವು ತಪ್ಪಿದ್ದರಿಂದ ಗಾಬರಿಗೊಂಡ ಸ್ಥಿತಿಯಲ್ಲಿ, ಮುಸಲ್ಮಾನರು ಭಾರತದೊಡನೆ ಒಂದುಗೂಡುವ ಮಾತುಗಳನ್ನಾಡುತ್ತಿದ್ದರೂ ಅದು ಅವರ ತ್ರಿಕರ್ಣಪೂರ್ವಕವಾದ ಪ್ರಾಮಾಣಿಕ ವಚನವೆಂದು ನಂಬಿಬಿಡುವುದಕ್ಕೆ ಹೆದರಿಕೆಯುಂಟಾಗುತ್ತದೆ.

ಜಿನ್ನಾ ಸಾಹೇಬರು ಪಾಕಿಸ್ತಾನದಿಂದ ಇದ್ದ ಬಿದ್ದ ಹಿಂದುಗಳನ್ನೆಲ್ಲ ಹರಳು ಆರಿಸಿದಂತೆ ಕೂಡಿಸಿ ಒಳದು ಹೊರಗೆ ತಳ್ಳಿದರು; ತಳ್ಳುತ್ತಿರುವರು. ಆದರೆ ಇಲ್ಲಿ ಭಾರತದಲ್ಲಿ ಮಹಮ್ಮದೀಯರು ಸ್ಥಿರವಾಗಿ ಉಳಿಯುವಂತೆ

ವಾತಾವರಣವನ್ನು ಕಲ್ಪಿಸಿಕೊಡುವಲ್ಲಿ ಮಹಾತ್ಮಾಜೀಯವರು ತಮ್ಮ ಜೀವ ವನ್ನು ಪಣಕ್ಕೆ ಹಚ್ಚಿ ಪ್ರಯತ್ನಿಸುತ್ತಿರುವರು !

ಮುಸಲ್ಮಾನರು ಹಿಂದುಗಳ ಮನೆಗಳನ್ನು ಕೊಳ್ಳೆಯಿಟ್ಟು, ಸೂರೆ ಮಾಡಿ, ಅವರ ಮಕ್ಕಳು ಮರಿಗಳನ್ನು ತುಂಡರಿಸಿ, ಹೆಂಗಸರನ್ನು ಓಡಿಸಿ ಕೊಂಡೊಯ್ದು ಅಮಾನುಷ ಕೃತ್ಯಗಳನ್ನು ಮಾಡಿದರು. ಅದಕ್ಕೆ ಪ್ರತಿಯಾಗಿ ಭಾರತದಲ್ಲೂ ಕೆಲವೆಡೆಗೆ ಅದೇ ಬಗೆಯ ಸೇಡಿನ ಹೀನ ಕೆಲಸಗಳಾದುವು. ಹೀಗೆ ಸೇಡು ತೀರಿಸುವುದಕ್ಕಾಗಿ, ಇಲ್ಲಿ ನೆಲಸಿರುವ ಮುಸಲ್ಮಾನರ ಕೊಲೆ ಸುಲಿಗೆ ಮಾಡುವುದು ಮಾನವತೆಗೆ ಒಪ್ಪದ ಕೆಲಸ; ಹಿಂದೂ ಸಂಸ್ಕೃತಿಗೆ ಅದದೊಂದು ಕಲಂಕ; ಎಂಬಲ್ಲಿ ಸಂದೇಹವಿಲ್ಲ.

ಹಾಗಾದರೆ ಈ ಧರ್ಮಸಂಕಟದೊಳಗಿಂದ ಪಾರಾಗಲು ದಾರಿಯಾವುದು? ಪಾಕಿಸ್ತಾನವಾದೀ ಮುಸಲ್ಮಾನರನ್ನು ಹಾಗೆಯೇ ತನ್ನಲ್ಲಿ ಉಳಿಯಗೊಟ್ಟರೆ ಭಾರತದ ಸ್ವಾತಂತ್ರ್ಯವು ಯಾವ ಕ್ಷಣಕ್ಕೆ ನಾಶವಾಗುವದೋ ಹೇಳುವುದಕ್ಕೆ ಸಾಧ್ಯವಿಲ್ಲ. ಬದಿಗೆ ಪಾಕಿಸ್ತಾನದ ಸ್ವತಂತ್ರ ರಾಜ್ಯವಿದ್ದು, ಅವರು ಭಾರತ ವನ್ನು ಗೆದ್ದು ಹಿಂದೆ ಮೊಗಲರು ಕಳೆದುಕೊಂಡ ಮುಸಲ್ಮಾನೀ ರಾಜ್ಯವನ್ನು ಮರಳಿ ಇಲ್ಲಿ ಸ್ಥಾಪಿಸುವ ಕಣಸು ಕಾಣುತ್ತಲಿದ್ದಾರೆ. ಪಾಕಿಸ್ತಾನದೊಳಗಿನ ಮುಸಲ್ಮಾನರು ಭಾರತದ ಮೇಲೆ ದಾಳಿಯಿಟ್ಟಾಗ ಇಲ್ಲಿಯ ಮುಸಲ್ಮಾನರು— ಇವರ ಇಂದಿನ ಮನೋವೃತ್ತಿ ಹಾಗೆಯೇ ಉಳಿದರೆ,—ಅವರಿಗೆ ಪಂಚಮ ದಳದವರಾಗಿ ನೆರವಾಗುವರೆಂಬಲ್ಲಿ ಸಂದೇಹವೇ ಇಲ್ಲ. ಆದಕಾರಣ, ಪಾಕಿ ಸ್ತಾನವಾದಿ ಮುಸಲ್ಮಾನರು ಹಿಂದೂ ದೇಶದಿಂದ ಪಾಕಿಸ್ತಾನಕ್ಕೆ ಬೇಗನೆ ಹೋಗಿ ಬಿಡುವಂತೆ ಶಾಂತವಾದ ಆದರೂ ಪರಿಣಾಮಕಾರಿಯಾದ ಉಪಾಯ ಗಳನ್ನು ಕಂಡು ಹಿಡಿಯುವುದು ಭಾರತೀಯ ಮುಖಂಡರ--ಹಿಂದೂ ಸ್ವಾತಂತ್ರ್ಯವನ್ನು ಪ್ರೀತಿಸುವ ಪ್ರತಿಯೊಬ್ಬ ವ್ಯಕ್ತಿಯ ಆದ್ಯ ಕರ್ತವ್ಯವಲ್ಲವೆ?

ರಾಷ್ಟ್ರೀಯ ವೃತ್ತಿಯ ಪ್ರೊ. ಅಬ್ದುಲ್ ಮಜೀದರಂತಹ ಕೆಲವು ಮುಸಲ್ಮಾನರೂ ಈ ಮಾತುಗಳನ್ನು ಜಾಹೀರ ರೀತಿಯಿಂದ ಹೇಳುತ್ತಿದ್ದಾರೆ. ಪಾಕಿಸ್ತಾನವಾದಿಗಳು ಇಲ್ಲಿಂದ ಬೇಗನೆ ತೊಗಲಿ, ಎಂದು ಪಂ. ಜವಾಹ ರರೂ ಮೊದಲು ಸಾರಿರುವರು. ಆದರೆ ಇದೀಗ ಇಲ್ಲಿ ಒಂದು ಸೂಕ್ಷ್ಮ ತೊಡಕು ಬರಲಿದೆ. 'ಪಾಕಿಸ್ತಾನಕ್ಕಾಗಿ ಪ್ರಾಣತ್ಯಾಗ ಮಾಡುವಾ' ಎಂದು ಕೂಗು

ತ್ತಿದ್ದ ತಲೆತಿರುಕ ಮುಸಲ್ಮಾನರೇ ಈಗ ಹೊತ್ತು ಬದಲಾದುದನ್ನು ನೋಡಿ ತಾವೂ ರಾಷ್ಟ್ರೀಯ ಮುಸಲ್ಮಾನರೆಂಬಂತೆ ಸೋಗು ಹಾಕುತ್ತಿದ್ದಾರೆ! ಯಾವ, ಮುಸಲ್ಮಾನರು ಪಾಕಿಸ್ತಾನವಾದಿ, ಎಂಬುದನ್ನು ನಿರ್ಣಯಿಸುವುದು ಇನ್ನು ಮೇಲೆ ತುಂಬ ಗಡಚಾದ ಕೆಲಸವಾಗಿದೆ. ಅಲ್ಲದೆ ಲೀಗಿನವರು, ಮುಸಲ್ಮಾನರಿಗೆ ಗುಪ್ತ ಅಜ್ಞಾಪತ್ರಗಳನ್ನು ಕಳಿಸಿ, ನೀವು ಭಾರತದಲ್ಲಿಯೆ ಉಳಿದು ಅಲ್ಲಿಂದಲೇ ಪಾಕಿಸ್ತಾನಕ್ಕೆ ನೆರವಾಗಿರೆಂದು ಕಿವಿಯೂದಿದ್ದಾರಂತೆ!

ಆದಕಾರಣ, ಭಾರತವು ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕಾದರೆ ಹಿಂದೂ ದೇಶದಲ್ಲಿ ಒಂದೂ ಮುಸಲ್ಮಾನ ಪಿಳ್ಳೆ ಉಳಿಯದಂತೆ ಮಾಡದೆ ಭಾರತಕ್ಕೆ ಬೇರೆ ಗತಿಯಿಲ್ಲ ಎಂಬ ಆತ್ಯಂತಿಕವಾದ ಒಂದೇ ದಾರಿಯೆ ಇನ್ನು ಉಳಿದಂತಾಯಿತೆ?

ಆದರೆ ಎಲ್ಲ ಮುಸಲ್ಮಾನರನ್ನೂ ಹಿಂದೂ ದೇಶದಿಂದ ತಳ್ಳಿಬಿಡುವುದು ಸಾಧ್ಯವೆ? ಪರಶುರಾಮನು ೨೧ ಬಾರಿ ನಿಃಕ್ಷತ್ರಿಯ ಪೃಥ್ವಿಮಾಡಿನಂತೆ! ಆದರೆ ಮತ್ತೆ ಕ್ಷತ್ರಿಯರು ಉಳಿಯದೆ ಹೋಗಲಿಲ್ಲ!

ಜೀವಂತ ವ್ಯಕ್ತಿಯು, ತಾನು ಹೊಟ್ಟೆಯಲ್ಲಿ ತಕ್ಕೊಂಡುದನ್ನು ಬಲವಿದ್ದರೆ ಅರಗಿಸಿಕೊಳ್ಳುವುದು. ಅರಗಿ ವೈಗೂಡದೆ ಹೊಟ್ಟೆಯಲ್ಲಿ ಹಾಗೆಯೆ ಉಳಿಯಲಾರಂಭಿಸಿದರೆ ಅದನ್ನು ಔಷಧಿಯ ಸಹಾಯದಿಂದ ವಾಂತಿ ಅಥವಾ ಭೇದಿಯ ರೂಪದಿಂದ ಹೊರಗೆ ಹಾಕುವುದು. ಇದಾವುದೂ ಆಗದೆ ಹಾಗೆ ಸಲ್ಲವಾಗಿ ಗಂಟಾಗಿ ಉಳಿಯಲಾರಂಭಿಸಿದರೆ ಶಸ್ತ್ರವೈದ್ಯನಿಂದ ಅಷ್ಟು ಭಾಗವನ್ನು ಕತ್ತರಿಸಿಕೊಳಲು ಸಿದ್ಧವಾಗಬೇಕಾಗುವುದು.

ಈಗ ಭಾರತವು ತನ್ನ ಒಡಲಲ್ಲಿ ಬೆಳೆದ ಪಾಕಿಸ್ತಾನದ ಗಂಟನ್ನು ಕೊಯ್ದುಕೊಂಬ ಪ್ರಾಣಾಂತಿಕ ದುಃಖದ ವೇದನೆಗಳನ್ನು ತಾಳಿಕೊಂಡಿತು. ಆದರೂ ಬೇನೆಯು ಮಾತ್ರ ಇನ್ನೂ ಪೂರ್ಣಹೋಗಲಿಲ್ಲ!

ಈಗ ಉಳಿದ ಮುಹಮ್ಮದೀಯರನ್ನು ಹೇಗೆ ಅರಗಿಸಿಕೊಳ್ಳುವುದು ಸಾಧ್ಯ ಎಂಬುದನ್ನು ಹಿಂದೂ ಸಮಾಜವು ಬೇಗನೆ ವಿಚಾರಿಸಲಿ. ಇಲ್ಲವಾದರೆ ಇದು ಇನ್ನೂ ಹೆಚ್ಚಿನ ಒಂದು ಗಂಡಾಂತರದ ಸ್ವರೂಪವನ್ನು ತಾಳದೆ ಇರದು.

ಇನ್ನು ಈ ಅರಗಿಸಿಕೊಂಬ ವಿಧಾನದಲ್ಲಿ ಎರಡು ರೀತಿ. ಅವರಿಗೆ ಸಂಸ್ಕಾರಕೊಟ್ಟು ಹಿಂದೂಗಳೆಂದು ಅವರನ್ನು ಸ್ವೀಕರಿಸುವುದು ಒಂದು; ಅಥವಾ ಮುಸಲ್ಮಾನರ ಇಂದಿನ ತೀವ್ರ ಧರ್ಮಭಾವನೆಗಳಿಗೆ ಕಾರಣವಾಗುವ ಅವರ ತತ್ವಜ್ಞಾನ ಹಾಗೂ ನಡೆವಳಿಯ ರೀತಿಗಳನ್ನು ಬದಲಿಸುವಂತೆ ಅವರ ಧಾರ್ಮಿಕ ವಿಧಿವಿಧಾನಗಳಲ್ಲಿಯೇ ಬದಲಾವಣೆಗೆ ಅವರು ಸಿದ್ಧರಾಗಬೇಕು. ಇಂತಹ ಶಿಕ್ಷಣಯೋಜನೆಯನ್ನು ಸಿದ್ಧಪಡಿಸಬೇಕು. ಮುಸಲ್ಮಾನರೆಂದು ಈಗ ಅವರಿಗೆ ಇರುವ ವಿಶೇಷ ಹಕ್ಕುಗಳನ್ನು ಇನ್ನು ಮುಂದೆ ಉಳಿಯಗೊಡ ಲಾಗದು. ಹಿಂದುಗಳೊಳಗಿನ ಅನೇಕ ಪಂಗಡಗಳಂತೆ, ಅವರೂ ಇನ್ನೂ ಒಂದು ಪಂಗಡದ (ಜಾತಿ) ಜನಗಳಂತೆ ಎಲ್ಲರೊಡನೆ ಕೂಡಿ ನಡೆಯಲು ಸಿದ್ಧರಾಗಬೇಕು.

ಈ ಯಾವ ಮಾರ್ಪಾಟು ಆಗಬೇಕಾದರೂ ಹಿಂದೂ ಸಮಾಜದೊಳಗಿನ ಬ್ರಾಹ್ಮಣಾದಿ ಜಾತಿಗಳ ಇಂದಿನ ಮಡಿವಂತಿಕೆಯ ಕಲ್ಪನೆಗಳಲ್ಲಿ ಬದಲಾ ವಣೆಯು ಅಗತ್ಯವಾಗಿದೆ. ಮುಲ್ಮಾನರಿಗೆ ಸಂಸ್ಕಾರ ಕೊಟ್ಟು ಹಿಂದುಗಳೆಂದು ಅವರನ್ನು ಒಳಗೆ ತಕ್ಕೊಳ್ಳುವ ಉಪಾಯವು ಅನೇಕ ಹಿಂದೂ ಜನರಿಗೆ ಮೇಲ್ನೋರಿಕೆಯಲ್ಲಿ ಹಿಗ್ಗಿನದೆನಿಸುವಂತಿದೆ. ಆದರೆ ಸಂಸ್ಕಾರ ಹೊಂದಿ ಹಿಂದೂವಾದ ಮುಸಲ್ಮಾನನು, ಸುಶಿಕ್ಷಿತನೂ ಸುಸಂಸ್ಕೃತನೂ ಇದ್ದರೂ ಬ್ರಾಹ್ಮಣಾದಿಗಳು ಆತನೊಡನೆ ಅನ್ನ-ಕನ್ಯಾ ವ್ಯವಹಾರಕ್ಕೆ ಸಿದ್ಧರಾಗದೆ ಇದ್ದರೆ ಆತನಾಗಲಿ, ಬೇರ ಮುಸಲ್ಮಾನರಾಗಲಿ ಹಿಂದುಗಳಾಗಲು ಏಕ ಸಿದ್ಧ ರಾದಾರು ? ಒಂದು ವೇಳೆ ಪರಿಸ್ಥಿತಿಯ ಒತ್ತಾಯಕ್ಕೆ ಹಿಂದುಗಳು ಹೇಳಿದ ಸಂಸ್ಕಾರಕ್ಕೆ ಒಪ್ಪಿ ಹಿಂದುವೆನಿಸಿ ಇದ್ದರೂ ಆತನು ಇಲ್ಲಿ ಬೇರೆಯಾಗಿಯೇ ದೂರ ಇರುವುದರಿಂದ ಹೊತ್ತು ಬರುತ್ತಲೆ ತನ್ನ ವೇಷ ಬದಲಿಸಿ ಮುಸಲ್ಮಾನ ನಾಗುವ ಸಂಧಿಯನ್ನು ಆತನು ಕಳೆದುಕೊಳ್ಳಲಾರನು. ಮೇಲಿನ ಜಾತಿ ಯವರೆನಿಸಿದ ಹಿಂದೂಗಳ ವರ್ಣಾಶ್ರಮದ ಹೆಮ್ಮೆಯ, ತಿರಸ್ಕಾರದ ಮತ್ತತೆಯ ನಡೆವಳಿಯ ಮೂಲಕವಾಗಿಯೇ ಹಲವು ಎಡಗೈಕುಲದವರು ಮುಸಲ್ಮಾನರೂ ಕ್ರಿಸ್ತಿಗಳೂ ಆಗಲಿಲ್ಲವೆ ? ಈಗ ಮತ್ತೆ ವರ್ಣಾಶ್ರಮಿಗಳು ತಮ್ಮ ನಡತೆ ಬದಲಿಸದೆ ಹೋದರೆ ಹಿಂದೂಧರ್ಮದಲ್ಲಿ ಬರಲು ಯಾರು ತಾನೆ ಸಿದ ರಾದಾರು ?

ರಾಷ್ಟ್ರೀಯ ವೃತ್ತಿಯುವರೆಂದು ಹೇಳಿಕೊಂಡು, ಪಾಕಿಸ್ತಾನವು ತಮಗೆ ಮಾನ್ಯವಿಲ್ಲವೆಂದು ಸಾರಿ ದೂರಿ, ಇಲ್ಲಿಯೆ ನೆಲಸಲಿಚ್ಛಿಸುವ ಮುಸಲ್ಮಾನರನ್ನು ಹಿಂದೂ ದೇಶದಿಂದ ತೊಲಗಿಸುವುದು ಕಷ್ಟವಾಗಿದೆ—ಅಸಾಧ್ಯವಾಗಿದೆ. ಇವರೆಲ್ಲರೂ ಪ್ರಾಮಾಣಿಕರೇ ಎಂದು ಕ್ಷಣಹೊತ್ತು ಕಲ್ಪಿಸಿದರೂ ನಾಳೆ ಇವರ ಸಂತತಿಯುವರ ಮನೋವೃತ್ತಿ ಏನಾಗುವುದೆಂಬದನ್ನು ಹೇಗೆ ಹೇಳ ಲಿಕ್ಕಾದೀತು ?

ಮುಸಲ್ಮಾನರ ಓಣಿಗಳು ಬೇರೆ, ಮುಸಲ್ಮಾನರ ಗುಡಿಗಳು ಬೇರೆ, ಮುಸಲ್ಮಾನರ ಶಾಲೆಗಳು ಬೇರೆ. ಅವರಲ್ಲಿ ಬೇರೆ ಯಾರೂ ಬೆರೆಯುವಂತಿಲ್ಲ; ಎಂಬ ಇಂದಿನ ತೆರನಾದ ನಡೆವಳಿಯನ್ನೆ ಮುಂದೆಯೂ ಇಟ್ಟುಕೊಂಡರೆ ಅಥವಾ ಉಳಿಯುಗೊಟ್ಟರೆ ಅದು ಹಿಂದೂ ಸಮಾಜಕ್ಕೂ, ಹಿಂದೂ ಸ್ವಾತಂತ್ರ್ಯಕ್ಕೂ ಸಂಕಟದಲ್ಲಿ ನೂಕದೆ ಇರಲಾರದು.

ಆದಕಾರಣ ನಾಳಿನ ನಮ್ಮ ಸ್ವಾತಂತ್ರ್ಯದ ಸ್ಥಿರತೆಗಾಗಿ, ಇಲ್ಲಿ ತಾವು ಭಾರತದ ರಾಷ್ಟ್ರೀಯ ನಾಗರಿಕರಿಗಾಗಿ ಬಾಳಲು ಸಿದ್ಧರಿದ್ದೇವೆಂಬ ಮುಸಲ್ಮಾನ ರನ್ನು ಒಂದು ಗುಂಪಾಗಿ ಒಂದೆಡೆಗೇ ಮನೆಕಟ್ಟಿಕೊಂಡು ಇರುವಂತೆ ಮಾಡ ಲಾಗದು. ಇನ್ನು ಮುಂದಿನ ನಮ್ಮ ನಗರ ರಚನೆಯೂ ಬದಲಾಗಬೇಕಾ ಗಿದೆ. ಒಂದೊಂದು ಜಾತಿಯುವರ ಒಂದೊಂದು ಓಣಿಯಿರುವದು ಒಳಿತಲ್ಲ. ಅದು ಇನ್ನು ಮುಂದಿನ ನಮ್ಮ ಸ್ವತಂತ್ರ ಭಾರತದ ಅಭಿವೃದ್ಧಿಯ ದೃಷ್ಟಿ ಯಿಂದ ತೀರ ಹಾನಿಗೆ ಕಾರಣವಾಗುವುದಿದೆ. ಮುಸಲ್ಮಾನರನ್ನು ಹಿಂದೂ ವಸತಿಯ ಓಣಿ ಓಣಿಗಳಲ್ಲಿ ಹಂಚಿ ಒಬ್ಬೊಬ್ಬನಂತೆ ನೆಲಸಲು ಹಚ್ಚಬೇಕು. ವಿಚಾರ, ಸಂಸ್ಕೃತಿ, ಉದ್ಯೋಗ, ವ್ಯವಹಾರಾದಿಗಳಲ್ಲಿ (ಭಿನ್ನ ಜಾತಿಯುವ ರಾದರೂ) ಹತ್ತಿಗೆ ಇರುವ ಜನಗಳು ಒಂದೊಂದು ಓಣಿಗಳಲ್ಲಿ ನೆರೆ ಮನೆಯುವರಾಗಿ ಬಾಳುವುದಕ್ಕಾರಂಭವಾಗಬೇಕು.

ಧಾರ್ಮಿಕ ಸ್ವಾತಂತ್ರ್ಯವು ಎಲ್ಲರಿಗೂ ಅವಶ್ಯ. ಹರಿಜನರಿಗೆ ಅಷ್ಟೇ ಗುಡಿಯಲ್ಲಿ ಪ್ರವೇಶದ ಚಳವಳಿಯು ಇನ್ನು ಸಾಕು. ಭಾರತದಲ್ಲಿ ಯಾವುದೇ ಧರ್ಮದ ದೇವಾಲಯಗಳು ಇರಲಿ, ಅಲ್ಲಿಗೆ ಭಕ್ತಿಭಾವದಿಂದ ಬರಲು ಒಪ್ಪಿದ ಯಾವನಿಗಾಗಲಿ ಪ್ರವೇಶವು ಇರುವುದು ಅತ್ಯವಶ್ಯಕವಾಗಿದೆ. ಮುಸಲ್ಮಾ ನರು ಹಿಂದೂ ದೇವಾಲಯಗಳಿಗೆ ಬರಲಿ, ಹಿಂದುಗಳು ಪ್ರಾರ್ಥನೆಗಾಗಿ

ಮಶೀದಿಗಳಿಗೆ ಹೋಗಲಿ. ಇದರಿಂದ ಒಬ್ಬರೊಬ್ಬರ ಒಳ್ಳೆಯ ಗುಣಗಳ ಪರಿಚಯವಾಗಿ ಸಹಾನುಭೂತಿ ಬೆಳೆಯುವದು. ಧರ್ಮಾಂಧತೆಯಲ್ಲಿ ತಮ್ಮವರಿಗೆ ಮಾಡುವ ಹೀನಮಾರ್ಗದ ಉಪದೇಶ, ದೊಂಬಿ ಏಳುವುದಕ್ಕೆ ಕೊಡುವ ಉತ್ತೇಜಕ ಭಾಷಣಗಳಿಗೆ ತಡೆಯಾಗುವುದು.

ಶಾಲೆ, ವಿದ್ಯಾರ್ಥಿನಿಲಯಗಳು ಬೇರೆಯಾಗಿರುವದರಿಂದಲೂ ಇದೇ ಬಗೆಯ ಹಾನಿಗಳಾಗಿವೆ. ಇಂದಿನ ರಾಷ್ಟ್ರೀಯ ಸರಕಾರವು ಬೇಗನೆ ಎಚ್ಚೆತ್ತು, ಎಲ್ಲ ಸಮಾಜಗಳು ಬೆರೆತು ಒಂದೇ ಭಾರತಸಮಾಜವು ತಲೆದೋರುವುದಕ್ಕೆ ಅವಶ್ಯಕವಾದ ವಾತಾವರಣವನ್ನು ನಿರ್ಮಿಸುವ ಕಟ್ಟಳೆಗಳನ್ನು ಮಾಡುವುದು ಅವಶ್ಯಕವಾಗಿದೆ.

ಮತ್ತು, ಇತ್ತ ಹಿಂದೂ ಸಮಾಜವೂ ಎಚ್ಚೆತ್ತು ಅತ್ಯಂತಿಕ ಧರ್ಮಾಭಿಮಾನಿಗಳಾದ ಮುಸಲ್ಮಾನರಿಗೆ ಶಾಂತವಾಗಿ ಬುದ್ಧಿಗಲಿಸುವಂತೆ ತನ್ನ ಸಂಘಟನೆಯನ್ನು ಮಾಡಿಕೊಳ್ಳಬೇಕು. ಈ ಸಂಘಟನೆಯು ಹಿಂದೂ ಧರ್ಮಾಂಧತೆಯ ಅತಿವಾದಿಗಳ ಕೈಯಲ್ಲಿ ಹೋದರೆ ಅದು ಹಾನಿಗೆ ಕಾರಣವಾಗುವಂತಿದೆ. ರಾಷ್ಟ್ರೀಯ ದೃಷ್ಟಿಯವರು ಈ ಸಂಘಟನೆಯ ನೇತಾರರಾಗಿದ್ದಲ್ಲಿ ಚೆನ್ನಾಗುವದು. ಧರ್ಮವು ಸಂಘಟನೆಯ ಗುರಿಯಲ್ಲ. ರಾಷ್ಟ್ರೀಯ ಸ್ವಾತಂತ್ರ್ಯ ರಕ್ಷಣೆಯೇ ಗುರಿ. ಆದಕಾರಣ ಜಾತಿಸೂಚಕ ಧಾರ್ಮಿಕ ಚಿಹ್ನಗಳಿಗೆ, ಆಚಾರಗಳಿಗೆ ಪ್ರಾಶಸ್ತ್ಯವು ಇರಕೂಡದು. ಧರ್ಮವು ವ್ಯಕ್ತಿಯ ಆಂತರಿಕ ಒಂದು ನಿಷ್ಠೆಯಾಗಿರಬೇಕೆ ಹೊರತು, ಯಾವುದೊಂದು ಗುಂಪಿನ ಅಥವಾ ಸಂಘದ ಸಾಮೂಹಿಕ ಪ್ರತಿಷ್ಠೆಗೆ ಕಾರಣವಾಗುವ ಒಂದು ಸಾಧನವಾಗ ಕೂಡದು.

ಇನ್ನು ಬೇಗನೆ ಉಡುಪು, ತೊಡಪು, ಅಥವಾ ಬೇರೆ ಹೊರಗಿನ ಯಾವ ಚಿಹ್ನಗಳಿಂದಲೂ ಒಮ್ಮೆಲೆ ಜಾತಿ, ಪಂಥವನ್ನು ಹೇಳಲು ಸಾಧ್ಯವಾಗದಂತೆ ನಮ್ಮ ನಡೆವಳಿ ನುಡಿಗಳಲ್ಲಿ ಮಾರ್ಪಾಟುಗಳು ನಡೆಯಬೇಕು. ಹೆಸರುಗಳನ್ನು ಇಟ್ಟುಕೊಂಬಲ್ಲಿ ಕೂಡ ಈ ಮಾರ್ಪಾಟವಾಗುವದು ಅವಶ್ಯವಿದ್ದರೂ ಅದಕ್ಕೆ ಕೆಲವೊಂದು ಹೆಚ್ಚು ಕಾಲವು ಹಿಡಿಯಬಹುದೆಂದು ತೋರುತ್ತದೆ.

ಅಮೇರಿಕೆಯಲ್ಲಿ (ಸಂಯುಕ್ತ ಸಂಸ್ಥಾನ) ಬೇರೆ ಬೇರೆ ದೇಶದ ಬೇರೆ ಜಾತಿ ಮತಗಳ ಜನಗಳು ಬಂದು ಒಕ್ಕಲಾಗುವರು. ಆದರೆ ಅವರೆಲ್ಲರಲ್ಲಿ ಅಮೇರಿಕೆಯ ಅಭಿಮಾನವು ಅಂಕುರಿಸಿ, ಅದರ ಸ್ವಾತಂತ್ರ್ಯಕ್ಕಾಗಿ ಪ್ರಾಣಾ

ರ್ವಣ ಮಾಡಲು ಅವರು ತ್ರಿಕರಣ ಪೂರ್ವಕವಾಗಿ ಹೇಗೆ ಸಿದ್ಧರಾದಾರೆಂಬ ದನ್ನು ಕುರಿತು ಆ ಸರಕಾರವು ತುಂಬ ಯೋಚನೆ ಮಾಡಿದೆ. ಯೋಜನೆ ಮಾಡುತ್ತಲಿದೆ. Immigration and Assimilation ವನ್ನು ಕುರಿತು ಅಲ್ಲಿಯ ಶಿಕ್ಷಣ ಶಾಸ್ತ್ರಜ್ಞರೂ ಆಳವಾಗಿ ವಿಚಾರಿಸಿ ಗ್ರಂಥ ರಚನೆ ಮಾಡಿದ್ದಾರೆ. ಅಲ್ಲಿಯ ಸರಕಾರಕ್ಕೆ ಸಲಹೆಗಳನ್ನೀಯುತ್ತಲಿದ್ದಾರೆ. ಆ ಬಗೆಯ ಯೋಚನೆ ಯೋಜನೆಗಳು ನಮ್ಮಲ್ಲಿಯೂ ನಡೆಯಲಾರವೇ ?

ಈ ದೃಷ್ಟಿಯಿಂದ ನನಗೆ ಹೊಳೆದ ನಾಲ್ಕು ಮಾತುಗಳನ್ನು ಬಲ್ಲಿದರ ಎದುರು ಇರಿಸಿದ್ದೇನೆ. ಇವು ಕೊನೆಯ ನಿರ್ಣಯುಗಳೆಂತಲ್ಲ. ಅಂತಹ ನಿರ್ಣಯಕ್ಕೆ— ಚರ್ಚೆಗೆ ಸಹಾಯಕವಾಗಲೆಂದು ಬರೆದಿರುವೆನು. ಅನುಕೂಲ ಪ್ರತಿಕೂಲ ಚರ್ಚೆಯಾಗಿ ಇದರ ಕೂಲಂಕಷ ವಿಚಾರವಾದೀತೆಂದು ಹಾರಯಿಸಿದ್ದೇನೆ. —ಜ. ಕ. ನವೆಂಬರ ೧೯೪೭

ಪಾಕಿಸ್ತಾನದಲ್ಲಿ ಮುಸಲ್ಮಾನರು ಅತ್ಯಾಚಾರಗಳನ್ನು ನಡಿಸಿದ ಕಾಲದಲ್ಲಿ, ಹಿಂದುಸ್ತಾನದಲ್ಲಿ ಮಹಾತ್ಮಾಜೀಯವರು ಮುಸಲ್ಮಾನರ ಜೀವಿತ ವಿತ್ತಗಳ ರಕ್ಷಣೆಗಾಗಿ ತಮ್ಮ ಪುಣ್ಯವನ್ನೆಲ್ಲ ಸೂರೆಮಾಡಿದರು. ಹಾಗೆ ಮಾಡದೆ ಗಾಂಧೀಜಿಯವರು ಕೆಲಹೊತ್ತು ಸುಮ್ಮನಿರಬೇಕಾಗಿತ್ತು. ಸುಮ್ಮನಿರದೆ, ಪಾಕಿಸ್ತಾನಿಗಳ ಅತ್ಯಾಚಾರ, ಹತ್ಯಾಕಾಂಡದ ನಿಮಿತ್ತದಿಂದ ಹಿಂದೂ ದೇಶದಲ್ಲಿದ್ದ ಮುಸಲ್ಮಾನರೆಲ್ಲರ ನಿರ್ಮೂಲನಮಾಡಿಬಿಡಲು ಪ್ರಾಪ್ತವಾದ ಒಳ್ಳೇ ಬಂಗಾರದಂತಹ ಸಂಧಿಯನ್ನು ಕಳೆದರು. ರಾಜಕಾರಣಿಗಳಾಗಿ ಮುಸಲ್ಮಾನರ ಮುಳ್ಳು ತೆಗೆದೊಯ್ಯಲು ಗಾಂಧೀಜಿಯವರು ಇಂತಹ ಅಪೂರ್ವ ಪ್ರಸಂಗದ ಲಾಭಪಡೆಯ ಬೇಕಾಗಿತ್ತು. ಧರ್ಮಾತ್ಮರಾಗಿ ಲೋಕಕ್ಕೆ ಶಾಂತಿಪಾಠ ಹೇಳಹೊರಟುದು ತಪ್ಪು, ಎಂಬ ಒಂದು ವಾದವಿದೆ.

'ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ, ತಾತ ಗಚ್ಛತಿ' । ಕಲ್ಯಾಣವನ್ನು ಮಾಡಿ ಕೇಡಿಗೀಡಾದವರಿಲ್ಲ, ಎಂಬುದು ಪುರಾತನ ಆದ್ಯರ ವಚನ. ಇದು ಭಾರತ ಸಂಸ್ಕೃತಿಯ ಸಾರ. ಪ್ರಪಂಚದಲ್ಲಿ ಜಾಗತಿಕ ಯುದ್ಧಗಳು ನಿಂತು, ಶಾಂತಿಸೌಖ್ಯವು ನೆಲಸಲು ಏನಾದರೊಂದು ದಾರಿಯಿದ್ದರೆ ಅದು, ಇದುವೆ ಒಂದು. ಮತ್ತು ಕೇವಲ ತರ್ಕಗಮ್ಯವಾದುದಲ್ಲ. ಮನೆಯ ಪ್ರಪಂಚ

ದಲ್ಲಿ ಮನಗಂಡ ಮಾತು. ನಿತ್ಯ ಸತ್ಯವಚನವು. ಒಳ್ಳಿತ್ತಿಗೆ ಕೆಡುಕಿನ ಫಲವು ದೊರೆಯುವುದಾದರೆ ಲೋಕಕ್ಕೆ ಬಾಳ್ವ ಆಶೆ ಯಾವುದು ? ಬಿತ್ತಿದ ಗೋದಿ ಸೀಗೆಬಳ್ಳಿಯಾಗುವುದಾದರೆ ಜನದ ಬಾಯಿಗೆ ಮಣ್ಣೇ ಸರಿ! ಆದ ಕಾರಣ, ಈ ಮೂಲಶ್ರದ್ಧೆಯನ್ನು ನಾಶಮಾಡಿಕೊಳ್ಳುವವರು, ಮೊದಲು ತಮ್ಮ ಸುತ್ತಲಿನವರ ಸುಖವನ್ನೂ ಹಾಳುಮಾಡುವರು.

ಭಾರತವು ಈ ವರೆಗೆ ಬಾಳಿ ಒಳ್ನಡೆಯಲ್ಲಿ ತಿಳಿನಡೆಯಲ್ಲಿ ಲೋಕದ ಗುರುವೆಂದು ಹೆಸರಾಗಿದೆ. ಅದಕ್ಕೆ ನಮ್ಮ ನಾಡಿಗರ ಮೇಲಣ ಬಗೆಯು ಶ್ರದ್ಧೆಯೆ ಮುಖ್ಯವಾದ ಕಾರಣ. ಭಾರತವು ನಡುವೆ ಕಳೆದುಕೊಂಡಿದ್ದ ತನ್ನ ಹಿರಿಮೆಯನ್ನು ಮಹಾತ್ಮಾಜೀಯವರು ಈ ಮೂಲ ಶ್ರದ್ಧೆಯ ಅನುಷ್ಠಾನ ದಿಂದಲೆ ಮರಳಿ ದೊರಕಿಸಿಕೊಟ್ಟಿದ್ದಾರೆ.

ಇದು ಬರಿ ಗೊಡ್ಡು ವೇದಾಂತ; ವ್ಯವಹಾರಿಕ ಸತ್ಯವಲ್ಲವೆಂದು ವಾದಿ ಸುವರನ್ನು ನಾನು ಬಲ್ಲೆ. ಅವರೇ ಒಂದು ಕ್ಷಣ ವಿಚಾರಿಸಿ ನೋಡಲಿ; ಮಹಾತ್ಮಾಜೀಯವರು ಸುಮ್ಮನಿದ್ದು, ಪಾಕಿಸ್ತಾನದಲ್ಲಿ ಹಿಂದೂ ಜನರ ಕೊಲೆ ಸುಲಿಗೆಗಳು ನಡೆದಿರುವಂತೆ, ಹಿಂದುಸ್ತಾನದಲ್ಲಿ ಮುಸಲ್ಮಾನರ ಹುಟ್ಟಡಗಿಸುವ ದೊಂಬಿಗಳಿಗೆ ಇಂಬುಗೊಟ್ಟಿದ್ದರೆ ಏನಾಗಬಹುದಿತ್ತು ? ದೇಶದ ಆದ್ಯಂತವೂ ಕೋಲಾಹಲ; ಹೆಣಗಳರಾಸಿ, ನೆತ್ತರದ ಕಾಲುವೆ. ಹಿಂಸೆ ! ನೆತ್ತರ ! ಎಂದು ಮುಂತಾಗಿ ನುಡಿದು ಜುಗುಪ್ಸೆಯನ್ನುಂಟುಮಾಡಿ ಅಹಿಂಸೆಯ ಹೇಡಿತನದ ಪಾಠಹೇಳಲು ಹೊರಟಿರುವೆನೆಂದು ರಾಷ್ಟ್ರೀಯ ಸೇವೆಯ ಗಡಿಬಿಡಿಯ ತರು ಣರು ತಪ್ಪು ಭಾವಿಸಬಾರದು. ಹೇಡಿತನಕ್ಕೆ ಕಾರಣವಾಗುವ ಅಹಿಂಸೆಯನ್ನು ಭಾರತ ಧರ್ಮವು ಎಂದೂ ಒಪ್ಪಿಕೊಂಡಿಲ್ಲ. ಹಿಂದುಸ್ತಾನದಲ್ಲಿ ಮುಸಲ್ಮಾನರ ಸಂಹಾರವನ್ನು ಆರಂಭಿಸಿದ್ದರೆ ಅದು ಯಶಸ್ವಿಯಾಗಬಹುದಿತ್ತೇ ? ಭಾರತಕ್ಕೆ ಕಲ್ಯಾಣಕಾರವೆ ? ಎಂಬುದನ್ನು ಕೇವಲ ವ್ಯವಹಾರಿಕ ಲೆಕ್ಕಾಚಾರದಿಂದಲೂ ವಿಚಾರಿಸಿ ನೋಡಬಹುದು.

ಮುಸಲ್ಮಾನರನ್ನು ಹೇಳಹೆಸರಿಲ್ಲದಂತೆ ಮಾಡುವ ನಿಮಿತ್ತದಿಂದ ಆರಂಭವಾಗುವ ದೊಂಬಿಗಳು ಕೇವಲ ಮುಸಲ್ಮಾನರ ಮಟ್ಟಿಗೇ ಉಳಿಯ ಬಹುದೇ ? ಆ ದ್ವೇಷಾಗ್ನಿಯು ಊರಲ್ಲಿ ಒಮ್ಮೆ ಹೊತ್ತಿ ಉರಿಯಲಾರಂಭಿ ಸಿದರೆ ಇಡಿಯ ಊರನ್ನೇ ಸುಡದೆ ಇದ್ದೀತೇ ? ಒಂದು ಮನೆಗೆ ಬೆಂಕಿ

ಹತ್ತಿದರೆ ನೆರೆಹೊರೆಯ ಮನೆಗಳಿಗೂ ಅದು ಹಬ್ಬದೆ ಇರುವುದೆ? ಸುಡು ಸುಡುತ್ತಿರುವ ಮನೆಯ ಸಂಬಂಧ ತಪ್ಪಿಸಲು ಹೊಂದಿಕೊಂಡ ಮನೆಯು ತಮ್ಮ ಭಾಗವನ್ನು ಕೆಡಹಿ ಕೆಲವೊಂದು ಹಾನಿಗಾದರೂ ಒಳಗಾಗಬೇಕ ಲ್ಲವೇ ? ಆತ್ಮಹಾನಿ-- ಸ್ವಂತದ ಹಾನಿ ಮಾಡಿಕೊಳ್ಳದೆ ಇನ್ನೊಬ್ಬರಿಗೆ ಕೇಡನ್ನು ಬಗೆಯುವುದೇ ಸಾಧ್ಯವಿಲ್ಲವೆಂಬ ಮಾತು ಇದರಿಂದ ಸಿದ್ಧವಾಗುವು ದಿಲ್ಲವೆ ?

೧೯೪೨ರ ಚಳವಳಿಯಲ್ಲಿ ಬ್ರಿಟಿಶಸರಕಾರದ ಟಪ್ಪಾಲಿನ ಲೂಟಿ, ಕಚೇರಿ ಗಳ ಮೇಲಿನ ದಾಳಿಗಳು ಮೊದಲು ಬಹಳ ಪ್ರಾಮಾಣಿಕ ರೀತಿಯಲ್ಲಿ ಆರಂಭ ವಾದುವು. ಆದರೆ ಅಲ್ಲಿ ಸಿಕ್ಕ ಬೆಲೆಯುಳ್ಳ ಆಕರ್ಷಕ ವಸ್ತುಗಳಿಂದಲೂ ದ್ರವ್ಯದಿಂದಲೂ ಚಂಚಲವಾಗ ತೊಡಗಿದ ಮನಸು, ಮುಂದೆ ಆ ಜನರಲ್ಲಿ ಹಲವರನ್ನು ಅಲ್ಲದ ದಾರಿಗೆ ಒಯ್ದಿತು. ದೇಶಭಕ್ತರ ಸೋಗಿನಲ್ಲಿ ಅನೇಕ ಕಳ್ಳರೂ ಪೋಲಿಗಳೂ ಆ ಸುಲಿಗೆಯ ಕಾರ್ಯಕ್ರಮದಲ್ಲಿ ಕ್ರಮವಾಗಿ ಬಂದು ಕೂಡಿದರು. ಅಥವಾ ಈ ಬಗೆಯ ಕೊಳ್ಳಿ ಹೊಡೆಯುವುದರಲ್ಲಿ ತಮ್ಮನ್ನು ತರಬೇತು ಮಾಡಲು ದೇಶಭಕ್ತರೇ ತಮ್ಮೊಳಗೆ ಅವರನ್ನು ಔತಣಕೊಟ್ಟು ಕರೆದುಕೊಂಡರು. ಆಗ, ಇಂತಹ ‘ ದೇಶಭಕ್ತ ’ ತುಡುಗರ ಕೈಯ್ಯಿಂದ ನಮ್ಮನ್ನು ಹೇಗಾದರೂ ಉಳಿಸಿರೆಂದು ಕಾಂಗ್ರೆಸ್ಸ ವರಿಷ್ಠರಿಗೂ, ಬ್ರಿಟಿಶ ಸರ ಕಾರಕ್ಕೂ ಕೂಡಿಯೆ ಜನತೆ ಮೊರೆಯಿಟ್ಟಿತು ! ರಾಜ್ಯಕ್ರಾಂತಿಯ ಧ್ಯೆಯುವ ನ್ನಿಟ್ಟುಕೊಂಡ ಬಂಗಾಲದ ಗುಪ್ತಸಂಘಗಳು ತಮ್ಮ ಕಾರ್ಯಕ್ಕಾಗಿ ಧನಸಂಗ್ರಹಿ ಸಲು ಕನ್ನಹಾಕುವುದು ನ್ಯಾಯವೆಂದು ಬಗೆದಿದ್ದುವು. ಆದರೆ ಅಲ್ಲಿಯೂ ಮೇಲಣ ತೆರನಾದ ಅನುಭವವೇ ಬಂದಿತು.

ಕೊಲೆ, ಸುಲಿಗೆ ಮೊದಲಾದ ಅನಾಚಾರ, ಸ್ವೈರಾಚಾರಗಳಿಗೆ ಒಮ್ಮೆ ಆರಂಭವಾಯಿತೆಂದರೆ ಅವನ್ನು ತಡೆದು ಹಿಡಿಯುವುದು ಅಸಾಧ್ಯವಾಗುತ್ತದೆ. ಪಾಕಿಸ್ತಾನದಲ್ಲಿ ಜಿನ್ನಾಸಾಹೇಬರಿಗೆ ಶಾಂತಿಸ್ಥಾಪನೆಯು ಅಸಾಧ್ಯವಾಗಿದ್ದೇಕೆ ಮತ್ತೆ ? ಹಿಂದೂ ದೇಶವೂ ಪಾಕಿಸ್ತಾನದಂತೆ ಅಶಾಂತಿಯ ತವರ್ಮನೆಯಾಗ ಬೇಕೆಂದು ಹಾರಯಿಕೆಯೆ ?

ಹೋಗಲಿ; ಇಷ್ಟಕಾರ್ಯವು ಸಂಪೂರ್ಣವಾಗಿ ನಿಶ್ಚಿತವಾಗಿಯೂ ಕೈಗೂಡು ತ್ತಿದ್ದರೆ, ಕೆಲಕಾಲ ಅಶಾಂತಿ, ಅಸ್ಥಿರತೆಯ ಕಷ್ಟಗಳನ್ನು ಅನುಭವಿಸಲಿಕ್ಕೂ

ಅಡ್ಡಿಯಿಲ್ಲ. ಆದರೆ ದೇಶದಲ್ಲಿ ಒಬ್ಬ ಮುಹಮ್ಮದೀಯನೂ ಉಳಿಯದಂತೆ ಅವರನ್ನು ತಳ್ಳಿ ಬಿಡಲು ಸಾಧ್ಯವೇ? ಅಥವಾ ನಾಶಮಾಡಲು ಶಕ್ಯವೆ ?

ಈ ಕೆಳಗಣ ಕಾರಣಗಳಿಗಾಗಿ ಮುಸಲ್ಮಾನರನ್ನು ನಿರ್ಮೂಲನ ಗೊಳಿಸುವೆವೆಂಬ ವಿಚಾರವು ಕೇವಲ ಭಾವನಾತ್ಮಕ ಅವಿಚಾರ; ಅಸಂಭಾವ್ಯ ಅಸಂಬದ್ಧ ಕಲ್ಪನೆ.

೧. ಕಾಶ್ಮೀರವು ಒಂದು ಕಾಲಕ್ಕೆ ಭಾರತ ಸಂಸ್ಕೃತಿಯ ಆಗರ. ಚೆಲುವಿನ ನೆಲೆವೀಡು. ಅದು ಭಾರತದಲ್ಲಿಯೇ ಉಳಿಯಬೇಕೆಂದು ಹಾರಯಿಸಿದರೆ, ಅಲ್ಲಿ ಇರುವ ೧೦೦ಕ್ಕೆ ೯೦ ರಷ್ಟು ಮುಸಲ್ಮಾನರನ್ನು ನಾವು ಒಲಿಸಿಕೊಳ್ಳಲೆ ಬೇಕಷ್ಟೆ ? ೧೦೦ಕ್ಕೆ ೯೦ರಷ್ಟು ಜನರನ್ನು ಹಗೆಗಳೆಂದು ಎಣಿಸಿದರೆ ಆ ದೇಶದ ಹಂಬಲವೇತಕ್ಕೆ ಹಾಗಾದರೆ !

೨. ಕಾಂಗ್ರೆಸ್ಸಿನವರು ಪಾಕಿಸ್ತಾನಕ್ಕೆ ಒಪ್ಪಿದ್ದೂ, ಗಾಂಧಿಜೀಯವರು ತಮಗೆ ಒಪ್ಪಿಗೆಯಿಲ್ಲದಿದ್ದರೂ ಆಗ ಕಾಂಗ್ರೆಸ್ಸಿಗೆ ವಿರೋಧಿಸದೆ ಸುಮ್ಮನೆ ಇದ್ದುದೂ ತಪ್ಪೆಂದು ಪ್ರತಿಪಾದಿಸುವ ಹಿಂದೂ ಅಭಿಮಾನದ ಅಖಂಡ ಭಾರತ ವಾದಿಗಳು ಸಿಂಧ, ಪಂಜಾಬ, ಬಂಗಾಲಗಳಲ್ಲಿರುವ, ಮುಸಲ್ಮಾನರು ಬಹು ಸಂಖ್ಯಾಕರಾಗಿರುವ ಭಾಗಗಳನ್ನು ಹೇಗೆ ಅರಗಿಸಿಕೊಳಲಿದ್ದರು ? ಎಲ್ಲಿ ನೂರಕ್ಕೆ ೫೦ಕ್ಕಿಂತ ಹೆಚ್ಚು ಜನವು ಒಂದು ಆಡಳಿತವನ್ನು ವಿರೋಧಿಸುವುದೊ ಅಲ್ಲಿ ರಾಜ್ಯವನ್ನು ಆಳುವುದು ಯಾರಿಂದಲಾದರೂ ಸಾಧ್ಯವೊ ? ದಿನಾಲು ಜನರಿಗೆ ಸೆರೆಮನೆ ಅಥವಾ ಗುಂಡಿಕ್ಕಿ ಕೊಲ್ಲುವ ಹೆದರಿಕೆ ಹಾಕುವ ಆಡಳಿತವು ಏಸುದಿನ ನಡೆದೀತು ?

೩. ' ನಮಗೆ ಮುಸಲ್ಮಾನರು ಬಹುಸಂಖ್ಯಾಕರಾಗಿರುವ ಪ್ರದೇಶವು ಬೇಡವೇ ಬೇಡ; ಹಿಂದುಗಳು ಬಹುಸಂಖ್ಯೆಯಲ್ಲಿರುವ ಭಾರತದೊಳಗಿಂದ ಅವರ ಹುಟ್ಟಡಗಿಸುವುದೇ ತಮ್ಮ ಗುರಿ,' ಎಂದು ಕೆಲವರು ಉಸಿರಬಹುದು.

ಆದರೆ ಇದೂ ಭದ್ರವಾದ ವಿಚಾರವಲ್ಲ. ಯಾವುದೇ ಒಂದು ಬಗೆಯ ದೇಶಾಭಿಮಾನದ ಅಥವಾ ಧಾರ್ಮಿಕ ಭಾವನೆಯ ಅತಿರೇಕದ ಆವೇಶದಲ್ಲಿ ಮೂಲಭೂತವಾದ ಮಾನವ ಸ್ವಭಾವವನ್ನೇ ಈ ಜನವು ಮರೆತು ಬಿಡುತ್ತದೆ.

(ಅ) ಮುಸಲ್ಮಾನರೆಲ್ಲರೂ ನೀಚರು; ದುಷ್ಟರು ಎಂದು ಒಂದು

ಸಾಮಾನ್ಯ ಸಿದ್ಧಾಂತವನ್ನು ಕಲ್ಪಿಸುವುದೇ ಮೊದಲು ತಪ್ಪು. ಮನುಷ್ಯ ಮಾತ್ರರೆಲ್ಲ ಸುಷ್ಟ-ದುಷ್ಟ ಭಾವಗಳ ಸಮ್ಮಿಶ್ರಣ. ಯಾವುದೊಂದು ಜನ ಪಕ್ಷ-ಪಂಗಡ ಅಥವಾ ಜಾತಿಯವರೆಲ್ಲರೂ ಸಜ್ಜನರು, ಶ್ರೇಷ್ಠರು, ಅಥವಾ ಪವಿತ್ರರು ಎಂದು ಬಗೆಯುವುದು ವಾಸ್ತವವಲ್ಲ. ಯಾರನ್ನಾಗಲಿ ಹಾವು ಎಂದಾಗಲಿ ಇಲ್ಲವೆ ದೇವನೆಂದಾಗಲಿ ನೆರೆನಂಬುವುದು ವಾಸ್ತವ ಸತ್ಯದಿಂದ ದೂರ; ಬಹುದೂರ. ಮುಸಲ್ಮಾನರಲ್ಲಿಯೂ ಕಬೀರ, ಶರೀಫಸಾಹೇಬ ರಂತಹ ಸಾಧುಗಳು ಆಗಿದ್ದಾರೆ. ಸತ್ಪುರುಷರಿದ್ದಾರೆ; ಸಜ್ಜನರೂ ಉಂಟು. ಪಾಕಿಸ್ತಾನದಲ್ಲಿ ಹಿಂದುಗಳ ಹತ್ಯಾಕಾಂಡದ ಕಾಲಕ್ಕೆ ಅವರಿಗೆ ತಮ್ಮ ಮನೆಗಳಲ್ಲಿ ಆಶ್ರಯವನ್ನಿತ್ತು ಕಾಪಾಡಿದಂತಹ ಮುಸಲ್ಮಾನ ಮಹನೀಯರು ಇಲ್ಲವೆಂತಲ್ಲ. ಇವರ ಜೊತೆಗೆ ಹಿಂದುಸ್ತಾನದಲ್ಲನೇಕ ಪ್ರಾಮಾಣಿಕರಾದ ರಾಷ್ಟ್ರೀಯ ಮುಸಲ್ಮಾನರನ್ನೂ ನೆನೆದುಕೊಳ್ಳಿ.

(ಆ) ಹಿಂದೂಗಳೆಂಬವರೆಲ್ಲ ಸಜ್ಜನರು; ಅವರಲ್ಲಿ ಒಕ್ಕಟ್ಟಿದೆ; ಇವರೆಲ್ಲ ಒಂದು ಎಂಬಿವೇ ಮೊದಲಾದ ಗ್ರಹಿಕೆಗಳು ಬಹಳ ಸಂಶಯಾಸ್ಪದವಾಗಿವೆ.

ವಿಜಯನಗರದ ಕಾಲದ ಮಾತು ಅದಂತಿರಲಿ; ಹಿಂದವೀ ಸ್ವರಾಜ್ಯ ಸಂಸ್ಥಾಪನೆಗೆ ಹೊರಟ ಶಿವಾಜಿಗೆ ಹಗೆಗಳಾಗಿ ಮುಸಲ್ಮಾನ ರಾಜರಿಗೆ ಸಹಾಯಕರಾದಂತಹ ಹಿಂದುಕುವರರಿದ್ದಾರೆ.

ಶಾಂತಿನಿಕೇತನದ ಪ್ರಿನ್ಸಿಪಾಲರಾಗಿರುವ ಶ್ರೀ ಕ್ಷಿತಿಮೋಹನ ಸೇನರು ಹಿಂದೂ ದೇಶದ ಜನ ಮತ್ತು ಮತಗಳನ್ನು ಕುರಿತು ಒಂದು ಗ್ರಂಥ ಬರೆ ದಿರುವರು. ಅದರಲ್ಲಿ ಅವರುಕಾಣಿಸಿರುವ ಒಂದು ಪ್ರಸಂಗದ ವರ್ಣನೆಯು ಉದ್ಬೋಧಕವಾಗಿದೆ.

ಗಡಿನಾಡ ಪ್ರಾಂತದ ಕೆಲವು ಪಠಾಣರು ಒಂದು ಊರ ಹಿಂದೂ ಓಣಿಯಲ್ಲಿ ಹೊಕ್ಕು ಒಂದು ಮನೆಯನ್ನು ನುಗ್ಗಿದರು. ಆ ಮನೆಯವನ ಕೋಲಾಹಲವನ್ನು ಕೇಳಿ ಓಣಿಯ ಹಿಂದೂಗಳೆಲ್ಲ ಹೊರಗೆ ಒಂದೆಡೆಗೆ ನೆರೆ ದರು. ಅಷ್ಟರಲ್ಲಿ ಪಠಾಣರು ಆ ಮನೆಯಿಂದ ಒಂದು ಕೊಡುಗೂಸನ್ನು ಎತ್ತಿಕೊಂಡು ಓಡಿದರು. ಆ ಹುಡುಗೆಯು ಹಿಂದೂ ಸಮಾಜದ ಬನಿಯಾ ಜಾತಿಯವಳಿರಬೇಕು. ಅದನ್ನು ಕಂಡು ಅಲ್ಲಿ ಸೇರಿದ ನೆರವಿಯ ಜನಗಳು ‘ ಅದೇನ್ನು? ಆ ಜಾತಿಯ ಹುಡುಗೆಯನ್ನೋಡಿಸಿಕೊಂಡೊಯ್ದರೆ ನಾವೇಕೆ

ಪಠಾಣರ ಮೇಲೇರಿ ಹೋಗಿ ಸಂಕಟವನ್ನು ಮೈಮೇಲೆ ಹಾಕಿಕೊಳ್ಳಬೇಕು!' ಎಂದು ಆ ಹುಡುಗಿಯ ಜಾತಿಯವರಲ್ಲದ ಆ ಗಂಡಸರು ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರಂತೆ !

ಇಂತಿದು ಹಿಂದೂ ಜನ! ಎಲ್ಲಿದೆ ಹಿಂದೂ ಎಂಬ ಜನ? ನಮ್ಮಲ್ಲಿ ಬ್ರಾಹ್ಮಣ, ವೀರಶೈವ, ರೆಡ್ಡಿ, ಕುರುಬಾದಿ ಜಾತಿಗಳು ಮಾತ್ರ ಇವೆ. ಹಿಂದೂ ಎಂಬುದು ಇನ್ನೂ ಆಗಬೇಕಾಗಿದೆ. ಒಳಜಾತಿಗಳು ಈಗಿನ ಸ್ವರೂಪ ದಲ್ಲಿ ಎಂದರೆ ಜನ್ಮದಿಂದ ಜಾತಿ ಎಂಬುದನ್ನೇ ಉಳಿಸಿಕೊಳ್ಳುವುದಾದರೆ ಹಿಂದೂ ಎಂಬ ಸಮಾಜ ಎಂದೂ ತಲೆದೋರಲಾರದು.

ದುಡ್ಡಿನ ಆಸೆಯಿಂದ, ಹೆಣ್ಣಿನ ಆಸೆಯಿಂದ ಮುಸಲ್ಮಾನರಾದ ಹಿಂದೂ ಸದ್ಗೃಹಸ್ಥರುಂಟು. ಪಾಕಿಸ್ತಾನಕ್ಕೆ ಕಳ್ಳತನದಿಂದ ಸರಕುಗಳನ್ನು ಕಳಿಸಿ ಧನ ಸಂಪಾದಿಸಲು ಆತುರರಾದ ಹಿಂದೂ ವರ್ತಕರು ಭಾರತದಲ್ಲಿಯೇ ಈ ಕ್ಷಣಕ್ಕೂ ದೊರೆಯುತ್ತಲಿದ್ದಾರೆ; ಇಷ್ಟು ನಮ್ಮ ರಾಷ್ಟ್ರೀಯತ್ವ!

(ಇ) ಹಿಂದೂ ಅಥವಾ ಮುಸಲ್ಮಾನವೆಂಬ ಧಾರ್ಮಿಕ ಕೃತ್ರಿಮಭಾವನೆಗಳು ಮಿತಿಮೀರಿ ಸಮಾಜವು ಎಷ್ಟೇ ಧರ್ಮಾಂಧವಾದರೂ ಅದರೊಳಗಿನ ಒಬ್ಬಿಬ್ಬ ಸಜ್ಜನರಲ್ಲಾದರೂ ಮಾನವತೆಯು ಜಾಗೃತವಾಗಿ ಧರ್ಮದ ಹೆಸರಿನಲ್ಲಿ ನಡೆವ ಘೋರ ಕೃತ್ಯಗಳನ್ನು ವಿರೋಧಿಸುವ ಪ್ರಯತ್ನಗಳು ನಡೆಯತಕ್ಕುವೇ; ಆರಂಭದಲ್ಲಿ ಇವು ಅಲ್ಪವಾಗಿದ್ದರೂ ಕೊನೆಗೆ ಇವಕ್ಕೆ ಜಯವು ನಿಶ್ಚಿತ. ಹಿಂದೂ, ಮುಸಲ್ಮಾನ, ಫಾರ್ಶಿ, ಕ್ರಿಸ್ತಿ ಎಂಬಿವೆಲ್ಲವು ನಾವು ಮಾಡಿಕೊಂಡ ಭೇದ ಭಾವಗಳು. ಜೀವನದ ವಿಕಾಸವಾಗಲೆಂದು ಧರ್ಮವೆಂಬುದು ನಿರ್ಮಾ ಣವಾಯಿತು. ನಾವೆಲ್ಲ ಮೊತ್ತ ಮೊದಲಲ್ಲಿ ಮಾನವರು. ಹಿಂದೂ ಮುಸಲ್ಮಾ ನಾದಿ ಹೆಸರುಗಳು ನಾನು ಮನುಷ್ಯನೆಂಬುದನ್ನೇ ಮರೆಯಿಸುತ್ತಿದ್ದರೆ, ಧರ್ಮದ ಹೆಸರಿನಲ್ಲಿ ಮಾನವನು ಕಾಡುಕ್ರೂರ ಮೃಗಗಳ ಸಾಲಿಗೆ ನಿಲ್ಲುವಂತಹ ಕೃತಿಗಳನ್ನು ಮಾಡಬೇಕಾಗುತ್ತಿದ್ದರೆ ನಾನು ಆ ಹಿಂದುವೂ ಅಲ್ಲ; ಅಥವಾ ಆ ಮುಸಲ್ಮಾನನೂ ಅಲ್ಲ....ಎಂದು ಲೋಕಕ್ಕೆಸಾರಿ, ಹತ್ಯಾಕಾಂಡವನ್ನು ನಿಲ್ಲಿ ಸಲು ಆ ಮಹಾನುಭಾವರು ತಮ್ಮ ಬಲಿದಾನಮಾಡಲಿಕ್ಕೂ ಹಿಂಜರಿಯರು.

ದ್ವೇಷ, ಅಸೂಯಾದಿ ವಿಘಾತಕ ಗುಣಗಳು ಮಾನವನ ಮೂಲ ಸಬಾವವಲ; ವಿಘ್ನಗಳನ್ನು ನೆನೆದುಕೊಂಡು ಹೆದರಿ, ಅವುಗಳ ನಿವಾರಣೆಗಾಗಿ

ಉತ್ಪನ್ನವಾಗುವ ಮನೋಭಾವಗಳು ಇವು ಪ್ರೀತಿಯ ವಿಧಾಯಕ ಗುಣ. ಪ್ರೀತಿಯಲ್ಲಿ ಮನುಷ್ಯನಿಗೆ ಆತನ ಆತ್ಮಾನುಭವವು ದೊರೆಯುತ್ತದೆ. ಆತ್ಮ ವಿಕಾಸವಾಗುತ್ತದೆ. ಪ್ರೀತಿಮಾಡುವಲ್ಲಿ, ಪ್ರೀತಿಯನ್ನು ಮಾಡಿಸಿಕೊಂಬು ವಲ್ಲಿಯೆ ಆತನಿಗೆ ಕೃತಾರ್ಥತೆಯ ಅನುಭವವು ಉಂಟಾಗುವುದು. ಧನ್ಯತೆ ಯೆನಿಸುವುದು. ಕೊಲೆ ಸುಲಿಗೆಗಳಿಂದ ನಿಜವಾದ ಸಂತೃಪ್ತಿಯನ್ನು ಪಟ್ಟವ ರಾರೂ ಇಲ್ಲ.

ಆದುದರಿಂದ ಒಂದು ಜಾತಿಗೆ ಜಾತಿಯನ್ನೇ ನಾಶಮಾಡಬೇಕೆಂದು ಮಾಡುವ ಪ್ರತಿಜ್ಞೆಯು ಅಥವಾ ನಿಶ್ಚಯವು ಸಂಪೂರ್ಣವಾಗಿ ಕೊನೆಗಾಣು ವುದೇ ಸಾಧ್ಯವಿಲ್ಲ. ಪರಶುರಾಮನು ಕ್ಷತ್ರಿಯರನ್ನು ೨೧ಬಾರಿ ನಿರ್ನಾಮ ಮಾಡಿದನೆಂದು ಪುರಾಣಗಳು ವರ್ಣಿಸಿದುದರಲ್ಲಿಯೇ ಒಂದು ಕಟಕಿ ಇದೆ. ವ್ಯಂಗ್ಯವಿನೋದವಿದೆ. ಇಂತಹ ಆತ್ಯಂತಿಕ ಕೃತಿ ಅಸಾಧ್ಯವೆಂಬ ಧ್ವನಿಯಿದೆ. ಜ್ಯೂಗಳ ಬೇಟೆಯಾಡಹೊರಟ ಹಿಟ್ಲರನು ಸರ್ವ ಸಮರ್ಥನಾಗಿದ್ದರೂ ಅದು ಅವನಿಂದ ಸಾಧ್ಯವಾಯಿತೆ ?

೪. ಮುಸಲ್ಮಾನರ ಸಂಪೂರ್ಣನಾಶವು ಸಾಧ್ಯವಿಲ್ಲವಾದರೆ ಹೋಗಲಿ, ಶಕ್ಯವಿದ್ದ ನಾಶಮಾಡುವ ಪ್ರಯತ್ನವಾದರೂ ಏಕೆ ಆಗಬಾರದೆಂದು ಗೊಣಗು ವವರೂ ಇದ್ದಾರೆ.

ಆಗಲಿ; ಈ ಬಗೆಯ ಪ್ರಯತ್ನಗಳಿಗೆ ಆರಂಭವಾಗಿದ್ದಿತೆಂದು ತಿಳಿ ಯೋಣ. ಅಯೋಧ್ಯಾಪ್ರಾಂತ, ಬಿಹಾರಗಳಲ್ಲಿ ನಡೆದ ಮುಸಲ್ಮಾನರ ಮೇಲೆ ಮುಯ್ಯ ತೀರಿಸಿಕೊಳ್ಳುವ ಪ್ರಯತ್ನಗಳು ಇನ್ನುಳಿದ ಪ್ರಾಂತಗಳಿಗೂ ಹಬ್ಬಿದ್ದುದಾದರೆ ಯಾವ ಪರಿಣಾಮಗಳು ಆಗ ಬಹುದಿತ್ತು, ಗೊತ್ತೆ ?

(ಅ) ಮುಸಲ್ಮಾನರ ಮೇಲೆ ಕೈಮಾಡ ಹೋಗಲು ಅವರೂ ಪ್ರತಿ ಯಾಗಿ ಹಿಂದುಗಳ ನಾಶಮಾಡದೆ ಇರುತ್ತಿದ್ದಿಲ್ಲ.

(ಆ) ಮುಸಲ್ಮಾನರಲ್ಲಿಯೂ ಧೂರ್ತರೂ ಬುದ್ಧಿವಂತರೂ ಉಂಟು. ಅವರು ತಮ್ಮ ರಕ್ಷಣೆಗಾಗಿ, ಹಿಂದುಗಳೊಳಗಿನ ಒಳಜಾತಿಗಳಲ್ಲಿರುವ ಮತ ದ್ವೇಷ, ಅಸೂಯಾದಿಗಳ ಲಾಭಪಡೆಯದೆ ಇರುತ್ತಿದ್ದಿಲ್ಲ.

ಕೊಲ್ಹಾಪೂರ, ಮಿರ್ಜಿ, ಸಾಂಗಲಿ, ಸಾತಾರಾ ಭಾಗದಲ್ಲಿ ಕಳೆದ ಫೆಬ್ರುವರಿಯಲ್ಲಾದ ದೊಂಬಿಗಳಲ್ಲಿ ಮಹಾತ್ಮಾಜೀಯವರ ಕೊಲೆಗಾಗಿ

ರಾಷ್ಟ್ರೀಯ ಸ್ವಯಂಸೇವಕ ಸಂಘದ ಸೇಡುತೀರಿಸಿಕೊಳ್ಳುವ ಸೋಗಿನಲ್ಲಿ ಬ್ರಾಹ್ಮಣರ ಮನೆಗಳ ಕೊಳ್ಳೆ ಹೊಡೆಯಲಾಯಿತು. ಅದರಲ್ಲಿ ಹಿಂದುಗ ಳೆಂದು ಕರೆಯಲ್ಪಡುವ ಕೆಲವು ಒಳಜಾತಿಗಳೇ ಬ್ರಾಹ್ಮಣರ ಮೇಲೆ ಮುನಿ ದುದು ಕಂಡುಬಂತು. ಮುಸಲ್ಮಾನರೂ ಹಲವರು ರಾ. ಸ್ವ. ಸೇವಕರ ಮೇಲಿನ ತಮ್ಮ ಕುನಸು ತೀರಿಸಲು ಈ ಸಂಧಿಯನ್ನು ಉಪಯೋಗಿಸಿ ಕೊಳ್ಳದೆ ಬಿಡಲಿಲ್ಲ.

ಕಳೆದ ನವಂಬರ ತಿಂಗಳಲ್ಲಿ ನಾನು ಮೈಸೂರಿಗೆ ಹೊರಟಾಗ ರೈಲಿನಲ್ಲಿ ಕಿವಿಯಾರೆ ಕೇಳಿದ ಸಂಗತಿಯೊಂದು: ಮಂಡ್ಯದಲ್ಲಿ ಒಕ್ಕಲತನದ ಶಿಕ್ಷಣಕ್ಕಾಗಿ ಪ್ರದರ್ಶನವನ್ನು ತೋರಿಸುವುದಕ್ಕಾಗಿ ಕೆಲವು ಜನರೊಡನೆ ಆ ಖಾತೆಯ ಡೆಪುಟಿ ಡೈರೆಕ್ಟರರು ಇಬ್ಬರೂ ಪ್ರಯಾಣ ಬೆಳಿಸಿದ್ದರು. ನನ್ನೊಡನೆ ಪ್ರೊ. ಮಳಗಿ ಸೇತುರಾಮಾಚಾರ್ಯರೂ ಇದ್ದರು. ಡೆ. ಡೈರೆಕ್ಟರರಲ್ಲಿ ಒಬ್ಬನು ಬ್ರಾಹ್ಮಣ; ಇನ್ನೊಬ್ಬನು ಮುಸಲ್ಮಾನ. ಅವರಿಬ್ಬರ ಮಾತು, ಚರ್ಚೆಗಳಿಂದ ಮುಸಲ್ಮಾನ ಅಧಿಕಾರಿಯು ತುಂಬ ಚತುರನೂ, ಕರ್ತವ್ಯದಕ್ಷನೂ ಆಗಿದ್ದ ನೆಂದು ವ್ಯಕ್ತವಾಗುತ್ತಿತ್ತು. ಬ್ರಾಹ್ಮಣ ಅಧಿಕಾರಿಯು ಕಡಿದಷ್ಟು ತುರಿಸಿ ಕೊಂಬ, ಹೇಗೊ ತನ್ನ ಕೆಲಸ ನೂಕುತ್ತ ನಡೆದವನೆಂದು ನಮಗೆನಿಸಿತು. ಆತನ ಈ ಬಗೆಯ ನಿರುತ್ಸಾಹಕ್ಕೆ ಏನು ಕಾರಣವೊ ನಮಗೆ ಗೊತ್ತಾಗಲಿಲ್ಲ.

ಆ ಮಾತು ಈ ಮಾತಿನಿಂದ ವಾಕ್‌ಚತುರನಾದ ಆ ಅಧಿಕಾರಿಯು ಮೆಲ್ಲನೆ ಮೈಸೂರ ಸಂಸ್ಥಾನದ ಬ್ರಾಹ್ಮಣ-ಬ್ರಾಹ್ಮಣೇತರರ ತಿಕ್ಕಾಟದ ವಿಷಯಕ್ಕೆ ಬಂದನು. ಆ ಬ್ರಾಹ್ಮಣ ಅಧಿಕಾರಿಯಲ್ಲಿ ಹುದುಗಿಕೊಂಡಿದ್ದ ಕಹಿ ಅನುಭವಗಳ ಅಸಮಾಧಾನವು ಒಂದೊಂದು ಮಾತಿನಲ್ಲಿ ಹೊರಬರ ಲಾರಂಭಿಸಿತು. ಜಾಣ ಮುಹಮ್ಮದೀಯನು, ಆ ಬ್ರಾಹ್ಮಣನ ಬೆಂದ ಮನ ಸಿಗೆ, ಮೆಲುಮಾತಿನಿಂದ ಮಾಂತ್ರಿಕನಂತೆ ಉಸುರಿದುದು ಸ್ವಲ್ಪಾದರೂ ಸಮಾಧಾನವನ್ನು ತಂದಿರಬೇಕು.

ಆ ಮಾತಿನ ಕೊನೆಗೆ ಧೂರ್ತ ಅಧಿಕಾರಿಯು ಸಹಜವಾಗಿ ಒಡನುಡಿ ದನು. "ಮಿಸ್ಟರ್ ಇನ್ನು ಮೇಲೆ ನಮಗೆ ನಿಮಗೆ ಸ್ನೇಹವಾಗಲೇಬೇಕು. ಇಬ್ಬರ ಸ್ಥಿತಿಯೂ ಒಂದೇ ಆಗಿದೆ" ಎಂದ!

ಈ ಸಂವಾದಗಳನ್ನು ಆಲಿಸುತ್ತಿದ್ದ ನನ್ನ ಮೈ ಆಗ ಜುಮ್ಮೆಂದಿತು. ಈ ಧರ್ಮಸಂಕಟದಲ್ಲಿ ಬ್ರಾಹ್ಮಣ ಜಾತಿಗೆ ದಾರಿ ಯಾವುದು ? 'ಜಾತಿ' ಉಳಿಸಿಕೊಳ್ಳಲು ಮುಸಲ್ಮಾನರ ಕೊರಳಿಗೆ ಬೀಳಬೇಕೆ? ಅಥವಾ ಹಿಂದುಗಳೆಲ್ಲ ಒಂದು ಜಾತಿಯೆಂದು ಸಿದ್ಧಪಡಿಸಲು ಉಳಿದ ಎಲ್ಲ ಬಹುಜನ ಸಮಾಜದೊಡನೆ ಸಮರಸವಾಗಬೇಕೆ ?

ಅದೇನೆ ಇರಲಿ, ಹಿಂದುಗಳೆಲ್ಲ ಸಮರಸರಾಗಿ ಒಂದುಗೂಡುವ ವರೆಗಂತೂ ಮುಸಲ್ಮಾನರು ಅನುಕೂಲವಿದ್ದಂತೆ ಒಮ್ಮೆ ಬ್ರಾಹ್ಮಣರ ಕಡೆಗೆ ಬಂದರೆ ಇನ್ನೊಮ್ಮೆ ಜೈನ, ಮರಾಠಾ ಅಥವಾ ವೀರಶೈವ ಹೀಗೆ ಯಾರ ಬೆಂಬಲವನ್ನೂ ಪಡೆದೂ ತಾನು ಬದುಕುವ ಹೆಣಗಾಟ ನಡಸುವುದು ಸ್ವಾಭಾವಿಕವಾಗಿದೆ. ಹಿಂದುಗಳ ಜಾತಿ ಜಾತಿಗಳಲ್ಲಿ ಈರ್ಷೆ ಇರುವವರೆಗೆ ಮುಸಲ್ಮಾನರು ಬದುಕಲಿಕ್ಕೆ ಬೇಕಾದಷ್ಟು ಇಂಬಿದೆ.

ಇಲ್ಲಿ ಮುಸಲ್ಮಾನರನ್ನು ಹುರಿದುಬಿಡುವ ಎತ್ತುಗಡೆ ನಡೆದಿದ್ದರೆ,

ಹಿಂದೂವೆನಿಸಿಕೊಳ್ಳುವ ಜಾತಿಗಳೊಳಗಿನ ಒಕ್ಕಟ್ಟಿನ ಪ್ರದರ್ಶನವು ಕೊಲ್ಹಾಪೂರ ಸಾಂಗಲಿಗಳಂತೆ ಎಲ್ಲೆಡೆಗೂ ಆಗಿ ಕೀಲೋತ್ಪಾಟವ ವಾನರನ ಗತಿಯಾಗದೆ ಇರುತ್ತಿದ್ದಿಲ್ಲ.

(ಇ) ಅಲ್ಲದೆ ಇನ್ನೊಂದು ಬಗೆಯಾದ ಯಾದವೀ ಕಲಹಗಳೂ ಆಗುತ್ತಿದ್ದುವು. ಹಿಂದೂ ಮಹಾಸಭೆಯ ಅಭಿಮಾನಿಗಳೆನಿಸುವ ಕೆಲವರು, ರಾ. ಸ್ವ ಸೇವಕದಲದ ಹಲವರು ಮುಸಲ್ಮಾನರ ವಿರುದ್ಧ ಹೊರಟರೂ ಕಾಂಗ್ರೆಸ್ಸಿನ ವರಿಷ್ಠರು ಮುಸಲ್ಮಾನರ ಪಕ್ಷದಿಂದ ಕಾದಲು ಮುಂದೆ ಬರುತ್ತಿದ್ದರು.

(ಈ) ಈ ಕಾರಣಗಳಿಂದ ದೇಶದಲ್ಲೆಲ್ಲ ಅನಾಯಕತ್ವ, ಅನಾಚಾರಗಳ ತಾಂಡವ ನಡೆಯುತ್ತಿತ್ತು, ಈಗ ಏನೋ ಸ್ವಲ್ಪ ಸ್ಥಿರತೆಯಿದ್ದು ಘಟನಾತ್ಮಕ ಪ್ರಗತಿಯು ನಡೆದಿದೆ. ಅದೂ ಅಸಾಧ್ಯವಾಗುತ್ತಿತ್ತು.

ಮುಸಲ್ಮಾನರ ವಸತಿ ಯಾವ ಒಂದೆಡೆಯಲ್ಲಿಯೆ ಇಲ್ಲ: ಊರೂರಿಗೆ ಅವರ ಮನೆಗಳಿವೆ; ಆದರಿಂದ ರಕ್ತಪಾತವು ಆಗದೆ ಇರುವ ಹಿಂದೂದೇಶದ ಹಳ್ಳಿಯು ಸಿಕ್ಕುವುದು ದುರ್ಲಭವಾಗುತ್ತಿತ್ತು.

ಕೆಲವು ಮಟ್ಟಿಗಾದರೂ ಶಾಂತವಾಗಿರುವ ಈ ಕಾಲದಲ್ಲಿಯೆ ಅನ್ನ ಬಟ್ಟೆಗಳ ತೊಂದರೆಯಿಂದ ಪೀಕಲಾಡುವ ಹೊತ್ತು ಬಂದಿರುವಾಗ ದೇಶದ ದೆಲ್ಲ ದೊಂಬಿಗಳೆದ್ದಿದ್ದರೆ ಕೂಳು ಕೂಳೆಂದು ಜನ ಗೋಳಾಡಬೇಕಾಗು ತ್ತಿತ್ತು. ದೇಶದೊಳಗಿನ ಔದ್ಯೋಗಿಕ ಪರಿಸ್ಥಿತಿಯು ಹದಗೆಡುತ್ತಿತ್ತು. ಆರ್ಥಿಕ ದುರಂತಕ್ಕೆ ಒಳಗಾಗ ಬೇಕಾಗುತ್ತಿತ್ತು.

(ಉ) ಇದೆಲ್ಲವೂ ಬ್ರಿಟಿಶ ತಂತ್ರಗಾರರು ಬೇಡಿ ಬಯುಸುತ್ತಿರುವ ವಿಷಯುವು. ಚರ್ಚಿಲ್ ಮಾವೆಲ್ಲರು ಶಕುನದ ಹಕ್ಕಿಗಳಂತೆ ಎಂದಿನಿಂದಲೇ ನುಡಿಯುತ್ತಿದ್ದಾರೆ. ಹಿಂದೂ ಮುಸಲ್ಮಾನ ಅಂತಃಕಲಗಳಿಂದ ಭಾರತದ ಉದ್ದಕ್ಕೂ ರಕ್ತಪಾತವು ನಡೆಯುವದೆಂದು ಸಾರಿದ್ದಾರೆ. ಬ್ರಿಟಿಶರ ಈ ಭವಿತವ್ಯವನ್ನು ಸತ್ಯವಾಗಿಸಲಿಕ್ಕೆ ಪಾಕಿಸ್ತಾನಿಗಳು ಬದ್ಧಕಂಕಣ—ಅಲ್ಲ ಖಡ್ಗಹಸ್ತರಾಗಿ ಸಿದ್ಧವಾಗಿಯೆ ನಿಂತಿದ್ದಾರೆ.

ಹಿಂದುಸ್ತಾನದವರೂ ಪಾಕಿಸ್ತಾನಿಗಳಂತೆ ಧರ್ಮಾಂಧರಾಗಿ ಕಲಹಕ್ಕೆ ಸಿದ್ಧರಾಗಿ ಬ್ರಿಟಿಶರ ಭವಿಷ್ಯನನ್ನು ನಿಜವಾಗಿಸಬೇಕೆ? ಅಥವಾ ವಿಚಾರ ಪರರಾಗಿ ಶಾಂತಿಯನ್ನು ತಂದುಕೊಂಡು (ತಂದುಕೊಂಡು, ಏಕೆಂದರೆ ಅದು ಸ್ವಾಭಾವಿಕವಾಗಿ ಬರುವುದಿಲ್ಲ. ಪಾಕಿಸ್ತಾನಿಗಳ ಅತ್ಯಾಚಾರಗಳನ್ನು ಕೇಳಿ ಮೈಯುರಿದು, ನೆತ್ತರ ಕುದಿದು ಶಠಂ ಪ್ರತಿ ಶಾಠ್ಯಂ ಎಂಬಂತೆ ನಡೆಯಲೇ ಬೇಕೆಂಬ ಆವೇಶವುಂಟಾಗದವರು ಭಾರತದಲ್ಲಿ ಅಪರೂಪ. ಆದರೂ ತಾಳಿದವನೇ ಬಾಳಿಯಾನು; ತಾಳ್ಮೆಯಿರಲಿ; ಮುಯ್ಯಕ್ಕೆ ಮುಯ್ಯ ಬೇಡ; ಪ್ರೀತಿಸಲು ಕಲಿಯಿರಿ. ಶಾಂತಿಯಿಂದ ಆಗುವ ಹಿತಕಾರ್ಯವು ಶಸ್ತ್ರದಿಂದ ಕೈಗೂಡದು ಎಂದುಮುಂತಾದ ಗಾಂಧಿಜೀಯವರ ಉಪದೇಶದಂತೆ) ನಡೆದುಕೊಳ್ಳಬೇಕೆ?

ಇವೆರಡರಲ್ಲಿ ಯಾವುದು ಕಲ್ಯಾಣಕಾರಕ? ಹಿಂದೂ ದೇಶದಲ್ಲಿ ಶಾಂತಿಯು ನೆಲೆಗೊಂಡು ಅದರ ಔದ್ಯೋಗಿಕ, ಆರ್ಥಿಕ ಏಳ್ಗೆಯಾಗುವದು ಬ್ರಿಟಿಶರಿಗೆ ಬೇಡವಾಗಿದೆ. ನಾಲ್ವತ್ತುಕೋಟಿ ಜನಸಂಖ್ಯೆಯ ರಾಷ್ಟ್ರವು ಸರ್ವಸಂಪನ್ನವಾಗಿ ಬಲಿಷ್ಠವಾಗಿ ಮೊದಲನೆಯ ತರಗತಿಯ ರಾಷ್ಟ್ರವಾಗಿ ಬೆಳೆದರೆ ಜಗತ್ತಿನಲ್ಲಿ ಬಿಳಿಯರಿಗೆ, ಆಂಗ್ಲೊ ಅಮೇರಿಕನ್‌ರಿಗೆ ತಾವೇ ಮಿಗಿ ಲೆಂದು ಮೆರೆಯಲು ದೊರೆಯಲಾರದು. ಇದು ಅವರ ಪ್ರತಿಷ್ಠೆಗೆ ಕುಂದು.

ಜಗತ್ತಿನ ರಾಜಕಾರಣದ ಸೂತ್ರಗಳು ತಮ್ಮ ಕೈಯಿಂದ ಹಿಂದೂ ದೇಶದ ಕಡೆಗೆ ಹೋಗುವದನ್ನು ಅವರು ಸಹಿಸರು. ಚೀನ, ಹಿಂದುಸ್ತಾನದಂತಹ ರಾಷ್ಟ್ರಗಳು ಬಿಳಿಯರ ಅಭ್ಯುದಯಕ್ಕೆ ವಿಘ್ನವೆಂದು ಅವರು ಎಂದೊ ನಿರ್ಧರಿಸಿದ್ದಾರೆ. Yellow Peril ಎಂದು ಚೀನದ ಏಳ್ಗೆಯು ಗಂಡಾಂತರವನ್ನು ಕುರಿತು ಅವರು ಭವಿಷ್ಯವನ್ನು ನುಡಿದಿದ್ದಾರೆ.

ಈ ಕಾರಣದಿಂದಲೆ ಅಖಂಡ ಹಿಂದೂ ದೇಶವು ಶಾಂತವಾಗಿ ತನ್ನ ಏಳ್ಗೆಯನ್ನು ಮಾಡಿಕೊಳ್ಳದಂತೆ ಹಲವು ಕಾಲ್ತೊಡಕುಗಳನ್ನೂ ಒಡ್ಡಿದ್ದಾರೆ ಪಾಕಿಸ್ತಾನದ ತೊಡಕನ್ನು ಹೇಗೊ ಬಗೆಹರಿಸಿಕೊಳ್ಳುವಷ್ಟರಲ್ಲಿ ಕಾಶ್ಮೀರದಲ್ಲಿ ಭೂತಗಳನ್ನು ಕುಣಿಸಲಾರಂಭಿಸಿದರು. ಹೈದರಾಬಾದಿನ ಆಟವು ಇನ್ನೂ ಮುಂದೆ ಇದ್ದೇ ಇವೆ.

ಬ್ರಿಟಿಶರು ಹುಗಿದಿಟ್ಟಿದ್ದ ಎರಡು 'ಟೈಮುಬಾಂಬು'ಗಳು ಮಾತ್ರ ಬಹುತರ ಹುಸಿಯಾದುವು. ಒಂದು ಮಹಾತ್ಮಾಜೀಯವರ ಪ್ರಭಾವದಿಂದ; ಇನ್ನೊಂದು ಪಟೇಲರ ಹಂಚಿಕೆಗಳಿಂದ. ಹಿಂದುಸ್ತಾನದಲ್ಲೆಲ್ಲ ಹಿಂದೂ-ಮುಸಲ್ಮಾನರ ದೊಂಬಿಗಳಿಗೆ ಆರಂಭವಾಗಿ ಈ ದೇಶದಲ್ಲೆಲ್ಲ ಅನಾಯಕತ್ವ, ಅರಾಜಕತ್ವವು ಉಂಟಾಗುವುದೆಂದು ಹಾರಯಿಸಿದ್ದರು. ಇದು ಬ್ರಿಟಿಶರ ಬರಿ ಹಾರಯಿಕೆಯಾಗಿರದೆ, ಅದಕ್ಕೆ ಅವಶ್ಯಕವಾದ ಸಂಪೂರ್ಣ ಭೂಮಿಕೆಯನ್ನು ನಿರ್ಮಿಸಿದ್ದರು. ಬ್ರಿಟಿಶರು ಹೀಗೆ ನಮಗಾಗಿ ತೋಡಿಟ್ಟ ಗೋರಿಯಲ್ಲಿ (ಪಾಕಿಸ್ತಾನದ ಪಾಠದಿಂದ ಎಚ್ಚತ್ತು) ಈ ಬಾರಿ ಬೀಳಲಿಲ್ಲ. ಅಥವಾ ಆ ಟೈಮು ಬಾಂಬನ್ನೇ ಜಾಣ್ಮೆಯಿಂದ ಹುಸಿಮಾಡಿದ್ದಾಯಿತು. ಇದು ಭಾರತದ ಭಾಗ್ಯ. ಇದು ಕೇವಲ ಮಹಾತ್ಮಾಜೀಯವರ ಪುಣ್ಯ.

ಇನ್ನೊಂದು ಕುತ್ತು, ಸಂಸ್ಥಾನಗಳ ಉರಲು. ಹೈದರಾಬಾದನ್ನೊಂದು ಬಿಟ್ಟರೆ ಉಳಿದುವು ಸಾಮಾನ್ಯವಾಗಿ ಕೇಂದ್ರ ಸರಕಾರದೊಡನೆ ಸಮರಸವಾಗಿ ಅಥವಾ ಒಂದುಗೂಡಿ ನಡೆಯಲು ಒಪ್ಪಿಕೊಂಡಿವೆ. 'ಹಿಂದೂ ದೇಶದೊಳಗಿನ ರಾಜರು, ಮಹಾರಾಜರು, ನವಾಬರುಗಳೆಲ್ಲ ಸ್ವತಂತ್ರರು; ಹಿಂದುಸ್ತಾನದಲ್ಲಿ ಸೇರುವುದೂ ಬಿಡುವುದೂ ಅವರ ಇಷ್ಟ. ನಾವು ಅವರನ್ನು ಒತ್ತಾಯಪಡಿಸಲಾರೆವು' ಎಂದು ಬ್ರಿಟಿಶರು ಕುಟಿಲತಂತ್ರವನ್ನು ಹೂಡಿದ್ದರು. ಆದರೆ

ಹೈದರಾಬಾದಿನ ನಿಜಾಮರೊಬ್ಬರು ವಿವೇಕಿಗಳಾದರೆ ಹಿಂದೂ ದೇಶದ ಸುದೈವ ದಿಂದ ಆ ಕುತ್ತದೊಳಗಿಂದಲೂ ಪಾರಾದಂತಾಗುವುದು.

ನಮ್ಮ ದೇಶದಲ್ಲಿ ದೊಂಬಿ, ಯುದ್ಧಾದಿಗಳು ಎಡೆಬಿಡದೆ ನಡೆಯುವು ದನ್ನು ಬ್ರಿಟಿಶರು ಮನಸಾ ಹಾರಯಿಸುತ್ತಾರೆ. ಏಕೆಂದರೆ ಅದರಿಂದ ಅವ ರಿಗೆ ಎರಡು ತೆರನಾದ ಲಾಭವಿದೆ. ಜಾತಿ ಜಾತಿಗಳ ಅಂತಃಕಲಹಗಳು ಆರಂಭವಾದಲ್ಲಿ ಅಲ್ಪಸಂಖ್ಯಾಕರ ಹಿತ ಸಂರಕ್ಷಣೆಗೆಂದು ನೆವಮಾಡಿ ಬ್ರಿಟಿಶ ರಿಗೆ ಮರಳಿ ಇಲ್ಲಿಯ ರಾಜ್ಯಕಾರಭಾರದಲ್ಲಿ ಕೈಹಾಕಲು ಅನುವು ದೊರೆಯುತ್ತದೆ.

ಅಥವಾ ಒಂದಿಲ್ಲೊಂದು, ಪಕ್ಷದವರೆಗೆ ತಮ್ಮ ಸಹಾಯಕ್ಕಾಗಿ ಬ್ರಿಟಿಶ ರನ್ನು ಕರೆವ ಮೋಹವು ಉಂಟಾಗುವ ಸಂಭವವು ಇಲ್ಲದಿಲ್ಲ. ಹಿಂದುಗಳೂ ಮುಸಲ್ಮಾನರೂ ಕಾದಲಾರಂಭಿಸಿದಲ್ಲಿ ಪಾಕಿಸ್ತಾನವು ಅದರಲ್ಲಿ ಭಾಗವಹಿಸದೆ ಇರದು. ಬ್ರಿಟಿಶರಿಗೆ ಬೇಕಾದುದು ಇದಕ್ಕಿಂತ ಬೇರಾವುದೂ ಇಲ್ಲ. ಈ ಬಗೆಯ ಕಲಹ, ಕಾಳಗವು ಆರಂಭವಾದೊಡನೆ ಇಂಗ್ಲೆಂಡಿನತ್ತ ಸಾಗಿರುವ ಬ್ರಿಟಿಶ ಸೈನ್ಯದ ಹಡಗುಗಳು ಹಿಂದುಸ್ತಾನದ ಕಡೆಗೆ ಗಕ್ಕನೆ ತಿರುಗಿದುವೆ!

ಹಾಗಾದರೆ, ಹಿಂದುತ್ವದ ಆವೇಶದಲ್ಲಿ ತಲೆತಿರುಕರಂತೆ ವರ್ತಿಸಿ ದೊರೆತ ಭಾರತ ಸ್ವಾತಂತ್ರ್ಯವನ್ನು ಕಳೆದುಕೊಳ್ಳಬೇಕೆ?

ಅಥವಾ ಮುಸಲ್ಮಾನರ ನಿರ್ಮೂಲನಕ್ಕೆ, ಅದೂ ಅರ್ಧಮರ್ಧ-ಏಕೆಂದರೆ ಸಂಪೂರ್ಣ ನಿಃಶೇಷಮಾಡುವುದು ಅಸಾಧ್ಯವೆಂದು ಮೊದಲೆ ಅರಿತಿದ್ದೇವೆ— ಇಂತಹ ಅರೆಗೆಲಸಕ್ಕೆ ಕೈಯಿಕ್ಕಬೇಕೆ? ಆವುದು ಲೇಸು? ಆದುದರಿಂದ ಕೈತೋರಿ ಅವಲಕ್ಷಣ ಮಾಡಿಕೊಳ್ಳುವುದಕ್ಕಿಂತಲೂ ಮಹಾತ್ಮಾಜೀಯವರ ಧರ್ಮವಚನಗಳಿಗೆ ಮರೆಹೋಗುವುದೆ

'ಸ್ವಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್? ಮಹಾತ್ಮಾಜೀಯವರು ತಮ್ಮ ದೇಹವನ್ನು ಬಲಿಕೊಟ್ಟು ಹಲಕೆಲವು ಮುಸ ಲ್ಮಾನರನ್ನಾದರೂ ಸಂಪೂರ್ಣವಾಗಿ ಗೆದ್ದುಕೊಂಡಿದ್ದಾರೆ. ತಮ್ಮ ಸಂರಕ್ಷಣೆ ಗಾಗಿ ಆತ್ಮಾಹುತಿಯನ್ನು ಕೊಟ್ಟ ಮಹಾತ್ಮಾಜೀಯವರನ್ನು ನೆನೆದು ಅನೇಕ ಮುಸಲ್ಮಾನರು ಭಾರತ ನಿಷ್ಠರಾಗಿರುವುದು ತಮ್ಮ ಕರ್ತವ್ಯವೆಂದು ಬಗೆಯುತ್ತಲಿದ್ದಾರೆ; ಹೈದರಾಬಾದ ಕಾಶ್ಮೀರಗಳ ಪಾಕಿಸ್ತಾನವಾದಿ ಅತ್ಯಾ ಚಾರಿಗಳನ್ನು ನಿಷೇದಿಸಲು ಮುಂದೆ ಬಂದಿದ್ದಾರೆ. ಹಿಂದುಸ್ತಾನದಲ್ಲಿಯೂ

ಪಾಕಿಸ್ತಾನದಂತೆ ಊರೂರಿಗೂ ಜಾತೀಯ ಜಗಳಗಳಿಂದ ನೆತ್ತರದ ಕಾಲುವೆ ಗಳು ಹರಿಯುವುವೆಂದು (ತಮ್ಮ ಕುಟೀಲ ನೀತಿಗೆ ಯಶಸ್ಸು ಸಿಕ್ಕುವು ದೆಂದು) ಬಾಯಿಬಿಟ್ಟುಕೊಂಡು ಕುಳಿತ ಬ್ರಿಟಿಶರಿಗೆ ಇದರಿಂದ ತುಂಬ ನಿರಾಶೆ ಯಾಗಿದ್ದರೆ ಸೋಜಿಗವಿಲ್ಲ. ಬ್ರಿಟಿಶ ಸೈನ್ಯಾಧಿಕಾರಿಗಳಿಂದ ಸಂಪಾದಿಸಿ ಹೂಳಿಟ್ಟ ಶಸ್ತ್ರಾಸ್ತ್ರಗಳು, ಮದ್ದು ಗುಂಡುಗಳು ಈಗ ದೇಶದಲ್ಲೆಲ್ಲ ಹಲವೆಡೆಗೆ ಹೊರಬೀಳುತ್ತಲಿವೆ. ಸಾವಿರಾರು ಭಾರತೀಯರ ಪ್ರಾಣಾಪಹಾರಕ್ಕೆ ಸಜ್ಜಾ ಗಿದ್ದ ಆ ಆಸುರೀಸಾಮಗ್ರಿಯು ಮಹಾತ್ಮಾಜೀಯವರ ಅಹಿಂಸೆಯ ಅಸ್ತ್ರದ ಮುಂದೆ ನಾಚಿ ನೆಲದೊಳಗೆ ಅಡಗಿತು! ಬಟ್ಟೆಬರೆಗಳ ವ್ಯಾಪಾರ ನಿಂತರೂ ಶಸ್ತ್ರಾಸ್ತ್ರಗಳಿಗಾಗಿ ಹಿಂದುಸ್ತಾನದಿಂದ ತಮ್ಮ ಕಡೆಗೆ ಹೊನ್ನಿನಹೊಳೆ ಹರಿಯು ವುದೆಂದು ಎಣಿಕೆಹಾಕುತ್ತಿದ್ದ ಬ್ರಿಟಿಶ ಕಾರಖಾನೆದಾರರು ಒರಗುಮೋರೆ ಮಾಡಿಕೊಂಡು ಕುಳ್ಳಿರಬೇಕಾಯಿತು. ಇದಕ್ಕೆ ಪ್ರತಿಯಾಗಿ ಹಲವು ಮುಸ ಲ್ಮಾನ ಮುಂದಾಳುಗಳು ಕಾಶ್ಮೀರ, ಹೈದರಾಬಾದಗಳ ಸಮಸ್ಯೆಗಳಲ್ಲಷ್ಟೇ ಅಲ್ಲ, ಪಾಕಿಸ್ತಾನದ ಅನ್ಯಾಯಗಳನ್ನು ವಿರೋಧಿಸುವುದಕ್ಕೂ ತಾವು ಸಿದ್ಧರಿ ರುವುದಾಗಿ ಸಾರುತ್ತಿರುವುದು ಅದ್ಭುತವಾದ ಪವಾಡವೇ ಅಲ್ಲವೇ ? ಈ ಪವಾ ಡದ ಕಾರಣಪುರುಷನ ಮಹಿಮೆ ಎಂತಹದು! ಭಾರತವನ್ನು ರಕ್ತಪಾತ, ಆರ್ಥಿಕ ದುರಂತದಿಂದ ಉಳಿಸಿದ ಆತನ ಉಪಕಾರಗಳನ್ನು ಎಷ್ಟೆಂದು ಹೇಳುವುದು!

'ಮುಸಲ್ಮಾನರನ್ನು ಸಂದೇಹದಿಂದ ನೋಡಬೇಡಿರಿ; ಅವರು ಅಜ್ಞಾನ ದಿಂದ ದ್ವೇಷಿಸಿದರೂ ಅವರನ್ನು ಪ್ರೀತಿಸಿ ಗೆದ್ದುಕೊಳ್ಳಿ....' ಎಂಬುದು ಮಹಾತ್ಮನ, ಧರ್ಮಾತ್ಮನ ಭೂಮಿಕೆಯಿಂದ ಸಂಪೂರ್ಣವಾಗಿ ಸರಿಯಾಗಿದೆ. ಆದರೆ ರಾಜ್ಯದ ಆಡಳಿತವನ್ನು ದಕ್ಷತೆಯಿಂದ ಸಾಗಿಸಬೇಕಾದವನಿಗೆ? ಬೆಳ್ಳಗಿ ದ್ದುದೆಲ್ಲ ಹಾಲೆಂದು ಗ್ರಹಿಸಲಿಕ್ಕಾದೀತೆ? ದೇಶಸಂರಕ್ಷಕ ಸೈನ್ಯದಲ್ಲಿ, ಶಾಂತಿ ರಕ್ಷಕ ಪೋಲಿಸಿನಲ್ಲಿ ಮುಸಲ್ಮಾನರನ್ನು ಬೇಕಾದಂತೆ ಬರಲು ತೆರೆದಿಡುವುದು ಕ್ಷೇಮಕರವೆ ? ಅಯೋಧ್ಯಾಪ್ರಾಂತದ ಲೀಗಿನ ಮುಂದಾಳುಗಳಾದ ಖಲೀಕ ಖುಲ್ ಝಮಾನರೆಂಬವರು ಘಟನಾಸಮಿತಿಯಲ್ಲಿ ಭಾರತನಿಷ್ಠೆಯ ಪ್ರತಿಜ್ಞೆ ಮಾಡಿದರು. ಗಾಂಧಿಜೀಯವರ ಶಾಂತಿದೂತರಾಗಿ ಜಿನ್ನಾರ ಕಡೆಗೆ ಮಾತ ನಾಡಲು ಹೋದವರು ಪಾಕಿಸ್ತಾನದಿಂದ ಮರಳಲೇ ಇಲ್ಲ! ಅಂಚೆ, ರೈಲು,

ಸೈನ್ಯ, ಪೋಲಿಸ ಅಧಿಕಾರಿಗಳಿದ್ದ ಕೆಲವರು ಪಾಕಿಸ್ತಾನಕ್ಕೆ ನೆರವಾಗಿ ಭಾರತ ದ್ರೋಹಿಗಳಾದ ಉದಾಹರಣಗಳುಂಟೆಂದು ವಾರ್ತೆಗಳಿವೆ. ಆದುದರಿಂದ ಹಿಂದುಸ್ತಾನವು ಅನಿವಾರ್ಯವಾಗಿ ಪಾಕಿಸ್ತಾನದೊಡನೆ ಕಾದುವ ಸಮಯ ಬಂದರೆ ಆಗ ಮುಸಲ್ಮಾನರು ಪಂಚಮದಳದವರಾಗಿ, ನೆಲಸಿದ ನಾಡಿಗೇ ಕೇಡು ಬಗೆವವರಾಗಿ ನಡೆದುಕೊಳ್ಳಲಿಕ್ಕಿಲ್ಲವೆಂದು ನೆರೆನಂಬುವುದು ನ್ಯಾಯ ವಾದೀತೆ?

ಮುಸಲ್ಮಾನರೆಲ್ಲರೂ ಭಾರತ ದ್ರೋಹಿಗಳಾಗುವರೆಂದು ನಿರಪವಾದ ಸಿದ್ಧಾಂತ ಮಾಡುವುದೂ ಅನ್ಯಾಯ. ಆದರೆ ಯಾರು ಭಾರತನಿಷ್ಠರು, ಯಾರು ಅಲ್ಲ, ಎಂಬುದನ್ನು ಗೊತ್ತು ಹಚ್ಚುವ ಬಗೆ ಹೇಗೆ? ಹಿಂದೂ ದೇಶದ ಆಡಳಿತದ ಗುಟ್ಟುಗಳನ್ನು ಹಗೆಗಳಗೆ ತಿಳಿಸಲು ಒಬ್ಬ ಮುಸ ಲ್ಮಾನನು ಸಿದ್ಧನಾದರೂ ಸಾಕು. ಎಲ್ಲ ಮಹಮ್ಮದೀಯರು ಭಾರತ ದ್ರೋಹಿಗಳಾಗಬೇಕಾದಕಾರಣವಿಲ್ಲ. ಆದುದರಿಂದ ಇನ್ನೂ ಕೆಲವು ವರ್ಷಗಳ ವರೆಗೆ ಹಿಂದುಸ್ತಾನದ ದಂಡಿನಲ್ಲಿ ಅಥವಾ ಅಡಳಿತದಲ್ಲಿ ಮೇಲಣ ಸ್ಥಳಗಳಿ ಗಂತೂ ತೀರ ನಂಬುಗೆಯುವರೆಂದು ನಿಃಸಂದಿಗ್ಧವಾಗಿ ಗೊತ್ತಾದ ನಾಲ್ಕೆಂಟು ಜನರನ್ನು ಹೊರ್ತುಪಡಿಸಿ ಸಾಮಾನ್ಯವಾಗಿ ಮುಸಲ್ಮಾನರನ್ನು ಸೇರಿಸಿ ಕೊಳ್ಳದಿರುವುದೇ ಕ್ಷೇಮಕರವೆಂದು ಒಪ್ಪಲೆ ಬೇಕಷ್ಟೆ?

ಆದರೆ, ಹಿಟ್ಲರನು ಜ್ಯೂಗಳನ್ನು ಕಂಡಂತೆ ತೀರ ಸಂದೇಹದಿಂದ ಅವರೊಡನೆ ವರ್ತಿಸುವುದೂ ಅನಿಷ್ಟ. ಒಳ್ಳೆದರಾಗಿ ಭಾರತನಿಷ್ಠರಾಗಿ ನಡೆದುಕೊಂಡರೆ ನಿಮಗೆ ಅದರ ಪ್ರತಿಫಲವು ದೊರೆಯುತ್ತದೆ. ಅದರಲ್ಲಿ ತಮ್ಮ ಕಲ್ಯಾಣವಿದೆಯೆಂಬ ನಂಬುಗೆಯು ಹುಟ್ಟುವಂತೆ ಹಿಂದುಸಮಾ ಜದ, ಹಾಗೂ ನಮ್ಮ ಸರಕಾರಗಳ ನಡೆವಳಿ ಇರಬೇಕು.

ಮುಸಲ್ಮಾನರು, ಭಾರತದೊಡನೆ ಸಮರಸವಾಗುವುದರಲ್ಲಿಯೆ ತಮ್ಮ ಹಿತವಿದೆಯೆಂದು ಮುಂಗಂಡು, ಆ ಬಗೆಯಾಗಿ ತಮ್ಮ ನಡೆ, ನುಡಿಗಳನ್ನು ತಿದ್ದಿಕೊಳ್ಳಲು ಆರಂಭಿಸಬೇಕು. ಧಾರ್ಮಿಕ ಅತಿವಾದದ ಮಬ್ಬು ತಲೆಗೇರ ದಂತೆ ಅವರ ಶಿಕ್ಷಣ ಪದ್ಧತಿಯಲ್ಲಿ ಬದಲಾವಣೆಗಳಾಗಬೇಕು. ಶುಕ್ರವಾರಕ್ಕೆ ನಮಾಜಿಗಾಗಿ ಸೂಟಿಬಿಡುವುದು, ಅವರಿಗಾಗಿ ಬೇರೆ ಶಾಲೆಗಳನ್ನು ವಿದ್ಯಾಲ ಯಗಳನ್ನು ಸ್ಥಾಪಿಸುವುದು ಘಾತಕ; ಮಕ್ಕಾ, ಮದಿನಾ, ಪಾಕಿಸ್ತಾನಗಳ

ವಿಷಯದಲ್ಲಿ ಇಲ್ಲದ ಆತ್ಮೀಯತೆಯ ಭಾವನೆಗಳು ಇನ್ನು ಮೇಲೆ ಬೇರು ಸಹಿತ ನಷ್ಟವಾಗಬೇಕು. ತಮ್ಮ ಮೋಕ್ಷವು ಹಿಂದೂದೇಶದಲ್ಲಿಯೆ ಇದೆ ಯೆಂದು ಅವರು ನೆರೆನಂಬಬೇಕು. ಹಿಂದೂ ದೇಶದ ಹೊರಗೆ ಧಾರ್ಮಿಕ ಕೇಂದ್ರವು ಇರಕೂಡದು. ಧಾರ್ಮಿಕ ಸಹಿಷ್ಣುತೆಯು ಪ್ರತ್ಯಕ್ಷಸಾತವೆಂದು ಅವರು ಹಿಂದೂ ಹಬ್ಬಗಳಲ್ಲಿ, ದೇವತೋತ್ಸವಗಳಲ್ಲಿ ( ಹಿಂದುಗಳು ಮೊಹ ರಮ್ಮ, ಉರಸುಗಳಲ್ಲಿ ಭಾಗವಹಿಸುವಂತೆ ) ಒಂದು ಭಕ್ತಿ, ವಿಶ್ವಾಸಗಳನ್ನು ವ್ಯಕ್ತಪಡಿಸುವ ವಾಡಿಕೆಯುಂಟಾಗಬೇಕು. ಈ ಕಾರಣಕ್ಕಾಗಿಯೆ ದೇವಾ ಲಯಗಳಲ್ಲಿ ಹರಿಜನಕ್ಕಷ್ಟೇ ಅಲ್ಲ, ಅಖಿಲ ಹಿಂದೂದೇಶಸ್ಥರಿಗೂ ಪ್ರವೇಶ ವಿರಬೇಕು. 'ಈಶ್ವರ ಅಲ್ಲಾ ತೇರಾ ನಾಮ'; 'ರಾಮ ರಹೀಮ ಒಂದೇ' ಎಂಬುದನ್ನು ಪ್ರತ್ಯಕ್ಷ ಆಚರಣೆಗಳಿಂದ ತೋರಬೇಕು. ಮಸೀದೆಯ ಎದುರು ಬಾರಿಸಕೂಡದು; ಎಂಬುದು ಅನ್ಯಾಯ; ಇದು ಧಾರ್ಮಿಕ ಹುಚ್ಚಿನ ಪೋಷಣೆಗೆ ಅವಕಾಶಕೊಟ್ಟಿದೆ. ಮುಸಲ್ಮಾನರು ತಾವಾಗಿಯೆ ಬ್ರಿಟಿಶರ ಕಾಲದ ಜಾತಿ ದ್ವೇಷಕ್ಕೆ ಪುಟಕೊಡುವ, ಇಂತಹ ಹುಚ್ಚಿನ ಹಕ್ಕುಗಳನ್ನು ಬಿಟ್ಟುಕೊಡಬೇಕು.

ಇವೆಲ್ಲ ಬದಲಾವಣೆಗಳಷ್ಟೇ ಇನ್ನೂ ಒಂದು ಹೆಚ್ಚಿನ ಮಹತ್ವದ ಮಾರ್ಪಾಟು ಆಗಬೇಕಾದುದೆಂದರೆ ಇಂದು ಹಿಂದೂವೆಂದು ಹೇಳಲ್ಪಡುವ ಜಾತಿಗಳೊಳಗಿನ ಒಕ್ಕಟ್ಟು. ಹೆರವರಿಗೆ ಒಳಗೆ ಬೆರಳು ಸೇರಿಸಲು ಎಲ್ಲಿಯೂ ಪದರು ಉಳಿಯದಂತೆ ಅದು ಭದ್ರವಾಗಿ ಬೆರೆಯಬೇಕು. ಸ್ಥಾನಿಕ ಸ್ವರಾಜ್ಯದ ಸಂಸ್ಥೆಗಳಲ್ಲಿ ಕೌನ್ಸಿಲುಗಳಲ್ಲಿ ಮತ್ತು ಇಂತಹ ಇನ್ನಿತರ ಕಡೆಗಳಲ್ಲಿ ಹಿಂದು ಹಿಂದೂಗಳ ಒಳಬಣಗಳ ಶಿಕ್ಕಾಟದಲ್ಲಿ ಮುಸಲ್ಮಾನ ಗುಂಪಿಗೆ ತನ್ನ ಕಾಲು ಚಾಚಲು ಚೆನ್ನಾಗಿ ಇಂಬುದೊರೆಯುತ್ತಿರುವುದನ್ನು ಊರೂರಿಗೂ ಮನಗಾಣಬಹುದಾಗಿದೆ. ಹೊರಗೆ ಹಿಂದೂ ಸಂಘಟನೆ, ಕಾಂಗ್ರೆಸಪಕ್ಷದ ಅಧ್ವರ್ಯುಗಳಾಗಿದ್ದರೆ, ಮುನಸಿಪಾಲಿಟಿ ಪ್ರೆಸಿಡೆಂಟರಾಗಲು ಮತದೊರಕಿಸಿ ಪಾಕಿಸ್ತಾನ ವಾದಿಗಳೊಡನೆ ಸಹಕರಿಸಿದ ಉದಾಹರಣಗಳಿಗೆ ಕೊರತೆಯಿಲ್ಲ! ಸಾರ್ವಜನಿಕ ಜೀವನದಲ್ಲಿ ಹಿಂದುಗಳು ತಮ್ಮ ಒಳಜಾತಿಗಳನ್ನು ನೆನ ಪಿಟ್ಟುಕೊಂಡು ಕೆಲಸ ಮಾಡುತ್ತಿರುವ ವರೆಗೂ ಮುಸಲ್ಮಾನರ ಚೆಲ್ಲಾಟ ನಡೆಯುತಕ್ಕದ್ದೇ. ಹೀಗೆ ತಮ್ಮ ಜಾತಿವಿಶಿಷ್ಟ ಹಕ್ಕುಗಳನ್ನೂ ಪಡೆಯಲು ಮುಸಲ್ಮಾನರು ಸವಿಗಲಿತರೆ, ಅವರ ಜಾತೀಯ ಭಾವನೆಯು ಹಿಂದು

ಸ್ತಾನದ ಸ್ವಾತಂತ್ರ್ಯಕ್ಕೆ ಗಂಡಾಂತರವನ್ನು ಉಂಟುಮಾಡದೆ ಇರಲಾರದು. ಏಕೆಂದರೆ ಊರೂರಿಗೂ ನಾವು ಈ ಬಗೆಯಾಗಿ ಪಂಚಮದಳದವರನ್ನು ಪೋಷಿಸುವ ಪಾಪಮಾಡುತ್ತಿದ್ದೇವೆ. ಈ ಪಾಪವು ಹೆಚ್ಚಾದಂತೆ, ಪಾಕಿಸ್ತಾನದ ತರುಣರು ಕನವರಿಸುತ್ತಿರುವ ದಿಲ್ಲಿಯ ಸಿಂಹಾಸನಕ್ಕಾಗಿ ನಡೆವ ದಾಳಿಗಳಲ್ಲಿ ನಮ್ಮ ರಾಷ್ಟ್ರವು ಕುಸಿದು ಬೀಳುವುದು ಅಸಂಭವವಲ್ಲ.

ಹಿಂದೂವೆಂಬ ಒಳಜಾತಿಗಳಲ್ಲಿ ಸಾಮರಸ್ಯವು ಬೆಳೆದಂತೆ ಮುಸಲ್ಮಾನರು ತಾವಾಗಿಯೆ ಮೆತ್ತಗಾಗುವರು. ಬಹುಜನ ಸಮಾಜದೊಡನೆ ಬೆರೆಯಲು ಆಸೆಪಡುವರು. ತುರ್ಕೀ ಟೋಪಿ; ಶೇರವಾನೀ ಹಾಕಿ ತಮ್ಮ ಮುಸ್ಲಿಂತನವನ್ನು ತೋರ್ಪಡಿಸಿಕೊಂಡು ಬಹುಜನ ಸಮಾಜದ ಮನಸಿಗೆ ನೋವನ್ನುಂಟುಮಾಡುವ ಸಾಹಸಕ್ಕೆ ಮನಸು ಮಾಡರು. ಹಿಂದೂಗಳ ಉತ್ಸವಾದಿಗಳಲ್ಲಿ ಸೇರಿ ಹಿಂದುವಾಗುವುದರಲ್ಲಿಯೆ ತಮ್ಮ ಅಭಿರುಚಿಯನ್ನು ವ್ಯಕ್ತಪಡಿಸಲಾರಂಭಿಸುವರು. ಆದರೆ ಇದಕ್ಕೆ **ಹಿಂದುಗಳೆಂಬವರಲ್ಲಿ ಒಂದುತನವು ಬೆಳೆಯಬೇಕು**. ಹಿಂದುಗಳೆಂಬ ಒಂದು ಜಾತಿಯವರು ಇನ್ನೊಂದು ಜಾತಿಯವರ ವಿರುದ್ಧ ಮುಸಲ್ಮಾನರ ನೆರವನ್ನು ಕೋರುವುದು ಅಧಃಪತನ, ರಾಷ್ಟ್ರದ್ರೋಹವೆಂಬ ಭಾವನೆಯು ಸಮಾಜದಲ್ಲಿ ಪ್ರಬಲವಾದಷ್ಟು ಈ ಕೆಲಸವು ಬೇಗನೆ ಕೈಗೂಡುವುದು. ಮುಸಲ್ಮಾನರ ತೊಡಕು ಬಿಡಿಸುವ ಮಿಗಿಲಾದ ಹಂಚಿಕೆಯಿದು.

ಯಾವ ಕಾರ್ಯವನ್ನಾದರೂ ತಮ್ಮಿಂದ ಆರಂಭಿಸಬೇಕು, ಎಂಬುದು ಮಹಾತ್ಮರ ತತ್ವ. ಬ್ರಿಟಿಷರನ್ನು ದೂಷಿಸಿ ಫಲವೇನು? ಹಿಂದುಸ್ತಾನದಲ್ಲಿ ಸಿದ್ಧತೆ ಕಂಡರೆ ಅವರು ತಾವಾಗಿಯೆ ಹೊರಡುವರು. ಕಾರಣ ನಾವು ಮೊದಲು ಒಂದಾಗಬೇಕು; ಹೆರರಿಗೆ ಉಪದೇಶಕ್ಕೆ ಹೊರಡುವ ಮೊದಲು ಅದನ್ನು ತಾನು ಆಚರಣೆಯಲ್ಲಿ ತರಬೇಕೆಂಬ ಮಾತನ್ನು ಎಲ್ಲ ಕ್ಷೇತ್ರಗಳಲ್ಲೂ ಅನುಸರಿಸಿರುವ ಗಾಂಧಿಜೀಯವರು, ಅದೇಕೊ ಹಿಂದೂಸಂಘಟನೆಯ ವಿಷಯದಲ್ಲಿ ಸಾಕಷ್ಟು ಹೆಚ್ಚಾಗಿ ಮನಸು ಹಾಕಲಿಲ್ಲ. ಹರಿಜನೋದ್ಧಾರದ ಒಂದು ಮಾತು ಬಿಟ್ಟರೆ ಅವರು ಬೇರೆ ಯಾವ ಕಾರ್ಯಕ್ರಮವನ್ನೂ ಹಿಂದೂ ಸಂಘಟನೆಯ ವಿಷಯದಲ್ಲಿ ಜನತೆಯ ಮುಂದಿಡಲಿಲ್ಲ. ಬಹುತರವಾಗಿ,

ಆಡದೆ ಮಾಡುವುದು ಉತ್ತಮವೆಂದು ಬಗೆದಿದ್ದರೇನೊ. ಏಕೆಂದರೆ ಆಶ್ರಮದಲ್ಲಿ ಅನುಷ್ಠಾನದಲ್ಲಿದ್ದ ಸಂಗತಿಗಳನ್ನು ಇನ್ನುಳಿದ ಜನಕ್ಕೂ ಮಾಡಲು ಸ್ಪಷ್ಟವಾಗಿ ನಿರ್ದೇಶಿಸಲಿಲ್ಲ. ಆದರೆ ವೈಯಕ್ತಿಕ ಪ್ರಭಾವದಿಂದ ಎಷ್ಟಾಯಿತೋ ಅಷ್ಟೆ. ಇದಕ್ಕೆ ಇನ್ನೂ ಒಂದು ಕಾರಣವಿರುವ ಸಂಭವವಿದೆ. ಜನ್ಮದಿಂದ ವರ್ಣವೆಂಬುದು ಗಾಂಧೀಜಿಯವರ ಆರಂಭದ ನಂಬುಗೆಯಾಗಿತ್ತು. ಅದರಿಂದ ಜಾತಿಭೇದ ನಿರ್ಮೂಲನದ ಮಾತು ಹಲವು ಕಾಲದ ವರೆಗೆ ಅವರ ಕಾರ್ಯಕ್ಷೇತ್ರದಲ್ಲಿ ಒಳಪಟ್ಟಿರಲಿಕ್ಕಿಲ್ಲ.

ಸಮಾಜಶಾಸ್ತ್ರ ಅಥವಾ ರಾಜಕಾರಣಾದಿ ಬೇರೆ ಶಾಸ್ತ್ರಗಳನ್ನು ಆಳವಾಗಿ ಅಭ್ಯಾಸಮಾಡಿ ಬಳಿಕ ಅವರು ಕಾರ್ಯರಂಗಕ್ಕಿಳಿದವರಲ್ಲ. ಅವರು ಯಾವಾಗಲೂ ತಾನು ಒಬ್ಬ ಹಳ್ಳಿಗನೆಂದುಕೊಳ್ಳುತ್ತಿದ್ದುದರಲ್ಲಿ ಅವರ ಪ್ರಾಮಾಣಿಕತೆಯು ವ್ಯಕ್ತವಾಗುತ್ತದೆ. ಧರ್ಮಜಿಜ್ಞಾಸೆ, ಸತ್ಯದ ಸ್ವರೂಪವನ್ನು ಅರಿತುಕೊಳ್ಳಬೇಕೆಂಬ ಹಂಬಲವು ಅವರ ಜೀವನದ ಮುಖ್ಯವಾದ ಪ್ರಚೋದಕ ಶಕ್ತಿಯಾಗಿತ್ತು. ತ್ರಿಕರಣಪೂರ್ವಕವಾಗಿ ಪ್ರಾಮಾಣಿಕನಾಗಿದ್ದು, ಶುದ್ಧ ಭಾವದಿಂದ ಯಾವ ವಿಷಯದಲ್ಲಿ ಮನಸು ಹಾಕಿದರೂ ಆ ವಿಷಯದಲ್ಲಿ ಆತನು ಸಾಮಾನ್ಯರಿಗೆ ಅಸಾಮಾನ್ಯವೆನಿಸುವಷ್ಟು ಅದ್ಭುತವಾದ ವಿಕಾಸವನ್ನು ಮಾಡಿಕೊಳ್ಳಬಲ್ಲನು. ಆ ವ್ಯಕ್ತಿಯು ಜೀವನದ ಯೋಗ್ಯತೆಯಂತೆ ಫಲವು ಇನ್ನೂ ವಿಶೇಷವಾಗುವುದು. ಒಂದೊಂದು ಶಾಸ್ತ್ರದೊಳಗಿನ ಪುಸ್ತಕ-ಪಂಡಿತರು ಏನೇ ಕುಂದುಕೊರತೆಗಳನ್ನು ಎಣಿಸಿದರೂ, ಸತ್ಯ-ದರ್ಶನದ ಪ್ರಯೋಗಗಳನ್ನು ನಡಿಸಿ ಮಹಾತ್ಮಾಜೀಯವರು ತಮ್ಮ ತಪಸ್ಸಿನಿಂದ, ಲೋಕವನ್ನು ಈ ಬಗೆಯಾಗಿ ಬೆರಗುಗೊಳಿಸಿದ್ದಾರೆ. ಏಕೆಂದರೆ ಬರಿಯ ಓದಿನಿಂದ ಬಂದುದಕ್ಕಿಂತಲೂ ಸ್ವಾನುಭವದಿಂದ ಸಂಪಾದಿಸಿದ ಜ್ಞಾನಶಕ್ತಿಯ ಮಹಿಮೆಯೆ ಅಂತಹದು.

ಮಹಾತ್ಮಾಜೀಯವರ ಕಾರ್ಯವಿಸ್ತಾರವು ಹೆಚ್ಚಾದಂತೆ ಅವರಿಗೆ ಒಂದೊಂದು ಶಾಸ್ತ್ರದ ವಿಶೇಷಜ್ಞರ ಅಭ್ಯಾಸದ ಲಾಭವನ್ನು ಪಡೆಯುವುದೂ ಅವಶ್ಯವೆನಿಸಿರಬೇಕು. ಅವರ ನೆರವಿಗಾಗಿ ಹಲವು ವಿದ್ವಾಂಸರೂ, ಜ್ಞಾನಿಗಳೂ ಮುಂದೆ ಬಂದರು. ಸಮಾಜಶಾಸ್ತ್ರ, ರಾಜಕಾರಣಗಳಲ್ಲಿ ಇವರು ಈ ಬಗೆಯಾಗಿ ಮೊದಲಿನಿಂದಲೇ ಸಾಗಿದ್ದರೆ, ಅನಿವಾರ್ಯವಾಗಿ ಇವರಿಂದಾದ

ಹಲಕೆಲವು ತಪ್ಪುತಡೆಗಳು ಆಗದೆ ಇರಬಹುದಾಗಿತ್ತು. ದೇಶದ ಇನ್ನೂ ಹೆಚ್ಚಿನ ಪ್ರಗತಿಯಾಗುತ್ತಿತ್ತು.

ಭಾರತೀಯ ಸಮಾಜಶಾಸ್ತ್ರದಲ್ಲಿ ಬಲ್ಲಿದರಾದ ಡಾ. ಬಾಬು ಭಗವಾನ ದಾಸರು, ಜನ್ಮದಿಂದ ವರ್ಣಗಳಲ್ಲ; ಗುಣ-ಕರ್ಮದಿಂದಲೇ ನಿಜವಾದ ವರ್ಣಗಳೆಂದು ಪ್ರತಿಪಾದಿಸುತ್ತಿದ್ದುದು ಮಹಾತ್ಮಾಜೀಯವರಿಗೆ ಆರಂಭದಲ್ಲಿ ಮಾನ್ಯವಿದ್ದಿಲ್ಲ. ಬಳಿಕ ಸ್ವಾನುಭವದಿಂದ ಅವರು ಈ ತತ್ವಕ್ಕೇ ಬಂದರು. ಆದರೆ ದೇಶದಲ್ಲಿ ಅದರ ಸಿದ್ಧಿಗೆ ತಮ್ಮ ಶಕ್ತಿಯನ್ನೆಲ್ಲ ಕೇಂದ್ರೀಕರಿಸಲಿಲ್ಲ. ಹಿಂದೂ-ಮುಸಲ್ಮಾನರ ಸಮಸ್ಯೆಗೆ ಕೈಯಿಕ್ಕಿದರು. ಈ ಕಾರಣದಿಂದ ಹಿಂದೂ ಎಂಬ ಸಮಾಜವೇ ಇನ್ನೂ ಅಸ್ತಿತ್ವದಲ್ಲಿ ಇಲ್ಲದಿರುವಾಗ ಕೇವಲ ಹಿಂದೂ-ಮುಸಲ್ಮಾನರ ತೊಡಕಿಗೆ ತಮ್ಮ ವಿಚಾರಗಳನ್ನೆಲ್ಲ ಮೀಸಲಿಟ್ಟುದು ಅಚಾತುರ್ಯವಾಯಿತು. ಜಾತಿಯ ಗೋಡೆಗಳನ್ನು ಕೆಡಹದೆ ಒಂದೊಂದು ಗೂಡು, ಗವಿಗಳಲ್ಲಿ ಸೇರಿಕೊಂಡಿರುವ ಈ ಜನ ಒಂದುಗೂಡುವುದೆ ಅಸಾಧ್ಯ. ನವಕಾಲಿ ಮೊದಲಾದ ಕಡೆಯಿಂದ ಮುಸಲ್ಮಾನರ ಕೈಯಿಂದ ಪಾರಾಗಿ ಬಂದವರೊಡನೆ ಅವರು ಬಹಿಷ್ಕೃತರು, ಪತಿತರೆಂಬಂತೆ ವರ್ತಿಸಬೇಡಿರೆಂದು ಪ್ರಾರ್ಥಿಸಬೇಕಾಗುತ್ತಿದೆ, ನಮ್ಮ ಜನಕ್ಕೆ! ಏಕೆ? ಜಾತಿಯ ಪಾವಿತ್ರ್ಯದ ಬಿಂಕದಲ್ಲಿ ನಮ್ಮವರನ್ನೇ ನಾವು ಮುಸಲ್ಮಾನ ಗುಂಪಿನಲ್ಲಿ ಹೋಗಿ ಆಶ್ರಯ ಪಡೆಯಲು ಈ ಕೃತಿಗಳಿಂದ ಒತ್ತಾಯಪಡಿಸಿದ್ದೇವೆ!

ಭಾರತದ ಏಳ್ಗೆಗೆ, ಮಾನವ ಕುಟುಂಬದ ಉದ್ಧಾರಕ್ಕೆ ಜಾತ್ಯತೀತ ಸಮಾಜವೇ ಅವಶ್ಯ ಎಂಬ ಮನವರಿಕೆಯಾಗಿ ಇದೀಗ ಮಹಾತ್ಮಾಜೀಯವರು ಅದರ ಕಾರ್ಯಾರಂಭವನ್ನು ಮಾಡಿದ್ದರು. ಆಶ್ರಮದ ಸಾಕ್ಷಾತ್ ಶಿಷ್ಯರೆಲ್ಲ ಸೇರಿ '**ಸರ್ವೋದಯ-ಸಮಾಜ**'ವೆಂಬ ಹೆಸರಿನಲ್ಲಿ ಆ ಕಾರ್ಯವನ್ನು ಮುಂದುವರಿಸಲಿದ್ದಾರೆ. ಗಾಂಧೀಜೀಯವರು ಆತ್ಮಾಹುತಿಯನ್ನರ್ಪಿಸಿ ಲೋಕದ ಏಳ್ಗೆಗೆ ಜಾತ್ಯತೀತಭಾವದ ಅವಶ್ಯಕತೆಯನ್ನು ಎಲ್ಲರ ನಿದರ್ಶನಕ್ಕೆ ತಂದಿರುವರು. ಜಾತ್ಯಂಧತೆಯನ್ನು ಹೋಗಲಾಡಿಸಲೇ ಬೇಕೆಂದು ಈಗ ವ್ಯಾಸಪೀಠದಿಂದ ಪ್ರತಿಪಾದಿಸದವರೇ ವಿರಳ. ಈ ದೃಷ್ಟಿಯಿಂದ 'ಸರ್ವೋದಯಸಮಾಜ'ದ ವಿಚಾರ ಪ್ರಚಾರಕ್ಕಿದು ಅತ್ಯುತ್ತಮ ಕಾಲವೆಂದು ತೋರದಿರದು. ಆದರೆ ಇದೂ ಒಂದು ಹೊಸ ಜಾತಿಯಾಗದಿರಲಿ.

ಆದರೂ ಈ ವಿಚಾರವು ಆಚಾರದಲ್ಲಿ ಬರಲು ಹಲವು ತೊಂದರೆಗಳಿವೆ. ಎಲ್ಲ ವರ್ಗದವರಿಗೂ ಅಧಿಕಾರವಾಣಿಯಿಂದ ಬುದ್ಧಿಯನ್ನು ಹೇಳುವ ಗುರುತ್ವದ ಸ್ಥಾನವು ತಪಃಪ್ರಭಾವದಿಂದ ಗಾಂಧಿಜೀಯವರಿಗೇ ಲಭಿಸಿತ್ತು. ಇಂದು ಆ ತೂಕದ ವ್ಯಕ್ತಿ, ಆ ತೂಕದ ವಿಚಾರ, ಆ ವಿಚಾರವನ್ನು ಲೋಕದ ಆಚಾರದಲ್ಲಿ ತಂದು ತೋರುವ ಪ್ರಭಾವವುಳ್ಳವರು ಅವರ ಹಿಂದೆ ಯಾರೂ ಇಲ್ಲ. ಪ್ರತಿಯೊಂದು ವರ್ಗದವರಲ್ಲಿ ಜಾತೀಯತೆಯಮೂಲಕ ದೊರೆತ ಸವಲತ್ತು, ಹಕ್ಕು, ಬಾಧ್ಯತೆಗಳ ಸುಖವನ್ನು ಉಣ್ಣುತ್ತಿರುವವರು ಹಲ ಕೆಲವರು ಉಂಟೇ ಉಂಟು. ಜಾತ್ಯತೀತ ಸಮಾಜರಚನೆಯಾಗುವುದೆಂದರೆ ಅವರ ಈ ವಿಶೇಷ ಸುಖಸಾಧನೆಗೆ ಕೊಡಲಿಯ ಏಟು. ನರಿಯು ತಾನು ಸಾಯುವಾಗ ಲೋಕವೇ ಮುಳುಗುತ್ತಿದೆಯೆಂದು ಕೂಗಿಕೊಂಡಂತೆ ಈ ಜನ ತಮ್ಮ ತಮ್ಮ ಜಾತಿಯ ಹೆಸರಿನಲ್ಲಿ ತಮ್ಮವರಿಗೆಲ್ಲ ಅನರ್ಥವೊದಗುವುದೆಂದು ಗಲಾಟೆಯನ್ನೆಬ್ಬಿಸುವುದು ಸಹಜ.

ಆದರೆ, ಒಟ್ಟಿನಲ್ಲಿ ಲೋಕದ ಹಿತವಾಗಿ ತಮ್ಮ ರಾಷ್ಟ್ರೋನ್ನತಿಗೆ ಅದರಿಂದ ಸಹಾಯವಾಗುತ್ತಿದ್ದರೆ, ಜಾತೀಯತೆಯಿಂದ ತಮಗೆ ದೊರೆಯುತ್ತಲಿದ್ದ ವಿಶೇಷ ಸವಲತ್ತುಗಳನ್ನು ಬಿಟ್ಟುಕೊಡಬೇಕೆಂಬ ಮಾತನ್ನು ಜನದ ಮನಸಿನ ಮೇಲೆ ಬಿಂಬಿಸಲು ಮಹಾತ್ಮಾಜೀಯವರ ಅವಶ್ಯಕತೆಯಿದ್ದಿತು. ಜಪಾನಿನಲ್ಲಿ ಸಮಾಜದಲ್ಲಿ ಶ್ರೇಷ್ಠರೆನಿಸಿಕೊಂಡ ರಾಜರು, ಸರದಾರರು, ಮೇಲಣ ಜಾತಿಕುಲದವರು ಮೊದಲಾದವರೆಲ್ಲ ತಮ್ಮ ರಾಷ್ಟ್ರದ ಒಕ್ಕಟ್ಟಿಗಾಗಿ, ಅದರ ಏಳ್ಗೆಗಾಗಿ ತಮ್ಮ ತಮ್ಮ ಮನೆತನಗಳಿಗೆ ನಡೆದುಕೊಂಡು ಬಂದ ವಿಶೇಷ ಹಕ್ಕುಗಳನ್ನು, ಅಂದು ತಾವಾಗಿಯೆ ತ್ಯಜಿಸಲಿಲ್ಲವೆ? ಅದರ ಫಲವಾಗಿಯೇ ಜಪಾನವು ಸ್ವತಂತ್ರದೇಶವೆಂದು ನಿನ್ನೆ ಮೊನ್ನೆಯ ವರೆಗೆ ಮೇಲ್ಮೆಯಿಂದ ಮೆರೆದಿತು, ( ಚೀನದಂತಹ ಸ್ವಬಾಂಧವರ ದೇಶವನ್ನು ಸುಲಿವ ದುರ್ಬುದ್ಧಿಯುಂಟಾಗದೆ ಇದ್ದರೆ ಅದರ ಅಧಃಪಾತವಾಗುತ್ತಿದ್ದಿಲ್ಲ.) ಜಪಾನದ ಏಳ್ಗೆಗೆ ಕಾರಣವಾದ ಆ ಜನಗಳ ಅಂದಿನ ಆ ತ್ಯಾಗಬುದ್ಧಿಯು, ನಮ್ಮ ದೇಶದಲ್ಲಿ ವಿಶಿಷ್ಟ ಹಕ್ಕುಬಾಧ್ಯತೆಗಳನ್ನು ಅನುಭವಿಸುವ ಈ ಜನಗಳಲ್ಲೂ ಬೇಗನೆ ತಲೆದೋರಬಹುದೆ? ಜಾತೀಯ ದೃಷ್ಟಿಯಳಿದು ರಾಷ್ಟ್ರೀಯ ದೃಷ್ಟಿಯು ನೆಲಗೊಳ್ಳಬಹುದೆ?

---

# ಜ್ಞಾನ ಅಥವಾ ಹಿರಿಮೆ ಜನ್ಮವನ್ನು ಅವಲಂಬಿಸಿದೆಯೆ?

ವಕೀಲನ ಮಗನು ವಕೀಲಿವೃತ್ತಿಯನ್ನೇ ಕೈಕೊಳ್ಳುವದನ್ನು ನಿಶ್ಚಯಿಸಿದರೆ ಆತನಿಗೆ ತಂದೆಯ ಅನುಭವದ ಲಾಭವು ದೊರೆಯುಬಲ್ಲದು. ತಂದೆಯ ಗ್ರಂಥಸಂಗ್ರಹ, ತಂದೆಯ ಕಕ್ಷಿಗಳು, ತಂದೆಯ ಕೀರ್ತಿ ಇವೆಲ್ಲವುಗಳ ಬೆಂಬಲವನ್ನೂ ಮಗನು ಪಡೆಯುಬಲ್ಲನು. ತಂದೆಯ ವಕೀಲಿವ್ಯವಸಾಯದೊಳಗಿನ ಗುಟ್ಟಿನ ಮಾತುಕತೆಗಳು, ಅನೇಕ ಕಾನೂನಿನ ಸೂಕ್ಷ್ಮ ಸಂದಿಗ್ಧ ತೊಡಕುಗಳ ವಾದವಿವಾದ, ಚರ್ಚೆ ಮೊದಲಾದವುಗಳು ಚಿಕ್ಕಂದಿನಿಂದಲೇ ಕಿವಿಗೆ ಬಿದ್ದು ಅದರ ಲಾಭವು ಮುಂದೆ ಮಗನ ಉದ್ಯಮದಲ್ಲಿ ದೊರೆಯುತ್ತದೆ. ಮಕ್ಕಳು ತಂದೆಯ ವೃತ್ತಿಯನ್ನೇ ಅನುಕರಿಸುವದರಿಂದ ಒಂದು ತಲೆಮಾರಿನವರ ಅನುಭವ ಕೌಶಲ್ಯಗಳ ಲಾಭವು ಮುಂದಿನವರಿಗೆ ದೊರೆಯುತ್ತ ಆ ವಿಷಯದ ಜ್ಞಾನವು ಬೆಳವಣಿಗೆಯನ್ನು ಹೊಂದುವುದು. ದೇಶದ ಕಲಾಕೌಶಲ್ಯ, ಉದ್ಯೋಗಾಭಿವೃದ್ಧಿಗಳಿಗೆ ಕಾರಣವಾಗುವುದು.

ಕಮ್ಮಾರನ ಮಗ ಕಮ್ಮಾರ, ಬಡಿಗನ ಮಗನು ಬಡಿಗ, ವೈದ್ಯನ ಮಗನು ವೈದ್ಯನಾಗುವಲ್ಲಿ ಈ ಬಗೆಯ ಲಾಭವಿದೆ, ಜಾತಿಗಳು ಜನ್ಮದಿಂದ ದೃಢವಾಗುವದಕ್ಕೆ ಇದೇ ಮುಖ್ಯವಾದ ಕಾರಣವಾಗಿದೆ. ಡಾಕ್ಟರನ ಮಗನು ವಕೀಲನಾಗುವುದನ್ನು ನಿಶ್ಚಯಿಸಿದರೆ ತಂದೆಯ ಪರಂಪರೆಯ ಯಾವ ಬಗೆಯ ಲಾಭವೂ ಆತನಿಗೆ ದೊರೆಯಲಾರದು. ಓ ನಾ ಮಾ ಸಿ ಯಿಂದ ಎಲ್ಲವನ್ನೂ ಆತನೇ ಆರಂಭಿಸಬೇಕಾಗುವುದು.

ತಂದೆಯ ಮನಸಿನ ಒಲವುಗಳೇ ಮಕ್ಕಳಲ್ಲಿಯೂ ಬರುವುದು ನಿಶ್ಚಿತವಿದ್ದರೆ, ತಂದೆಯ ವೃತ್ತಿಯನ್ನೇ ಮಗನೂ ಅನುಸರಿಸಬೇಕೆಂಬ ನಿರ್ಬಂಧ ಅಥವಾ ರೂಢಿಯನ್ನು ನಡಿಸಿಕೊಂಡು ಹೋಗಲು ಅಡ್ಡಿಯಿದ್ದಿಲ್ಲ. ತಂದೆಯು ಚಿತ್ರಕಾರನಿದ್ದರೆ ಮಗನೂ ಚಿತ್ರಗಾರಿಕೆಯಲ್ಲಿಯೇ ಒಲವು ಇದ್ದವನು ಆಗುವನೆಂದು ಯಾರು ಹೇಳಬೇಕು? ತಂದೆ ಶಾಸ್ತ್ರಜ್ಞ; ಮಗನು ಸಂಗೀತದ ಪ್ರವೃತ್ತಿಯವನು. ತನ್ನಂತೆ ಮಗನೂ ಶಾಸ್ತ್ರವಿಶಾರದನಾಗಲೆಂದು ತಂದೆಯು ಒತ್ತಾಯಪಡಿಸಲು ಮಗನು ಮನೆಯಿಂದ ಓಡಿಹೋಗಿ

ಸಂಗೀತದ ಬೆನ್ನು ಹತ್ತಿದ ಉದಾಹರಣಗಳುಂಟು. ಆತನು ಮುಂದೆ ಗಾಯನಕಲೆಯಲ್ಲಿ ಖ್ಯಾತಿಪಡೆದಾಗ, ತಾನು ಮೊದಲಿನಿಂದಲೇ ಆತನ ಒಲವಿನಂತೆ ಸಂಗೀತವನ್ನೇ ಕಲಿಸಿದ್ದರೆ, ಇನ್ನೂ ಎಷ್ಟು ಮೇಲ್ಮೆಯನ್ನು ಹೊಂದುತ್ತಿದ್ದನೋ; ಎಂದು ಮನಸಿನಲ್ಲಿಯೆ ವಿಷಾದಪಟ್ಟುದುಂಟು. ತಂದೆ ಯಂತೆಯೆ ಮಗನ ಒಲವೂ ಇದ್ದುದಾದರೆ ಅಂತಹ ಎಡೆಗಳಲ್ಲಿ ಪರಂಪರಾ ಗತ ಉದ್ಯೋಗಗಳನ್ನೆ ಮುಂದುವರಿಸುವುದಕ್ಕೆ ಅಡ್ಡಿಯಿಲ್ಲ. ಇಷ್ಟೇ ಅಲ್ಲ. ಅದರಲ್ಲಿಯೆ ವಿಶೇಷ ಲಾಭವಿದೆ; ಹಿತವಿದೆ. ಆದರೆ ಎಲ್ಲಿ ತಂದೆ ಮಕ್ಕಳ ವೃತ್ತಿ, ಪ್ರವೃತ್ತಿಗಳಲ್ಲಿ ವ್ಯತ್ಯಾಸವು ಕಂಡುಬರುತ್ತನೊ ಅಲ್ಲಿ ಪರಂಪರಾ ಗತವಾದ ಉದ್ಯೋಗಗಳನ್ನೇ ಸಾಗಿಸಿಕೊಂಡು ಹೋಗಬೇಕೆಂಬ ಒತ್ತಾಯವು ಇಷ್ಟವಲ್ಲ. ಅನಿಷ್ಟಕ್ಕೆ ಕಾರಣ.

ಒಲವು ಬದಲಾಗಲು ಎರಡು ಮುಖ್ಯ ಕಾರಣಗಳಿವೆ: ಆಂತರಿಕ ಕಾರಣವು ಒಂದು. ಆನುವಂಶಿಕ ಸಂಸ್ಕಾರವೆಂದೊಡನೆ ತಂದೆಯೊಬ್ಬನೆ ಅದ ರಲ್ಲಿ ಒಳಗೊಳ್ಳುವುದಿಲ್ಲ. ಆದುದರಿಂದ ತಂದೆಯ ಒಲವೇ ಮಕ್ಕಳಲ್ಲೂ ಕಾಣಿಸಿಕೊಳ್ಳುವುದೆಂಬ ಗ್ರಹಿಕೆಯು ಹಲವೆಡೆಗೆ ತಪ್ಪೆಂದು ಅನುಭವಕ್ಕೆ ಬರುತ್ತದೆ. ತಂದೆಯ ತಂದೆಯ, ಮತ್ತು ತಾಯಿಯ ಕಡೆಯ ಪರಿಣಾಮ ಗಳನ್ನೂ ಲೆಕ್ಕಕ್ಕೆ ಹಿಡಿಯಬೇಕಾಗುವುದು. ತಂದೆ ಗಣಿತಜ್ಞ; ತಾಯಿ ಕಲಾಕುಸುರಿಯಲ್ಲಿ ನಿಪುಣಳಾಗಿದ್ದ ಮನೆಯಲ್ಲಿ ಮಗನು ಎಷ್ಟೋ ಸಾರೆ ತಂದೆಗಿಂತ ತಾಯಿಯ ಕಡೆಗೇ ಹೆಚ್ಚು ಒಲಿದುದು ಕಂಡುಬರುವುದು. ಆದುದರಿಂದ ತಂದೆಯಂತೆ ಮಗನೆಂಬುದು ತೀರ ಸ್ಥೂಲವಾದ ಹೇಳಿಕೆ. ಸೂಕ್ಷ್ಮ ಅಭ್ಯಾಸದಿಂದ ಕಂಡುಹಿಡಿದ ಶಾಸ್ತ್ರೀಯ ವಿಧಾನವಲ್ಲ.

ಮಕ್ಕಳ ಒಲವು ತಂದೆಗಿಂತ ಬೇರೆಯಾಗಲು ಬಾಹ್ಯಪರಿಸ್ಥಿತಿಯೂ ಹಲವು ಬಾರಿ ವಿಶೇಷ ಕಾರಣವಾಗಿರುತ್ತದೆ. ವೈದಿಕ ವಿದ್ಯೆಯಲ್ಲಿ ಪ್ರಭುತ್ವ ಪಡೆದರೆ ಸಮಾಜದಲ್ಲಿ ವಿಶೇಷ ಪ್ರತಿಷ್ಠೆಯು ಒಂದು ಕಾಲಕ್ಕೆ ದೊರೆಯು ತ್ತಿತ್ತು. ಆದರೆ ಇಂಗ್ರೇಜಿಗೆ ಆ ಮಾನ-ಸನ್ಮಾನಗಳು ದೊರೆಯುವುವೆಂದು ಕಣ್ಣಾರೆ ಕಾಣುವಾಗ ಸಂಸ್ಕೃತದ ಅಧ್ಯಯನಕ್ಕೆ ಯಾವ ತರುಣನ ಮನಸು ಒಲಿದೀತು? ಈ ಕಾರಣಗಳಿಂದ ತಂದೆಯ ವೃತ್ತಿಯನ್ನೆ ಮಕ್ಕಳೂ ನಡಸಿ ಕೊಂಡು ಹೋಗಬೇಕೆಂಬ ನಿರ್ಬಂಧವು ನಿರುಪಯುಕ್ತವಾಗುತ್ತದೆ.

ಪರಂಪರಾಗತವಾದ ವೃತ್ತಿಗಳನ್ನು ತಲೆತಲಾಂತರಗಳಿಂದ ಹಾಗೆಯೆ ಸಾಗಿಸಿಕೊಂಡು ಹೋಗುವುದು ಲೇಸು—ಹೋಗಲೇಬೇಕೆಂಬ ಹಟವಾದದಲ್ಲಿ ಕೆಲವು ಬಾರಿ ಒಂದಿಷ್ಟು ಒಳಗಿನ ಸ್ವಾರ್ಥವೂ ಇದಕ್ಕೆ ಕಾರಣವಿರುತ್ತದೆ. ಸಮಾಜದಲ್ಲಿ ಯಾವ ಉದ್ಯಮಗಳಿಗೆ ಬೆಲೆಯಿದೆ, ಮಹತ್ವವಿದೆ, ಮನ್ನಣೆಯಿದೆಯೊ ಅಂತಹವುಗಳನ್ನು ಕೈಕೊಂಡವರೆ ಈ ಬಗೆಯ ಪ್ರತಿಪಾದನೆಯಲ್ಲಿ ವಿಶೇಷ ಆವೇಶವನ್ನು ತೋರುತ್ತಾರೆ. ಹಟವಾದಿಗಳಾಗುತ್ತಾರೆ. ಬೇರೆಯವರು ತಮ್ಮ ಉದ್ಯೋಗದಲ್ಲಿ ಸೇರಿ ಸ್ಪರ್ಧಿಸಬಾರದೆಂಬ ಒತ್ತಾಸೆಯು ಅವರಿಂದ ಈ ಬಗೆಯಾಗಿ ನುಡಿಸುತ್ತದೆ.

ಏನೊ ಕಾರಣಾಂತರಗಳಿಂದ, ವಿಶಿಷ್ಟ ಕಾಲಪರಿಸ್ಥಿತಿಯ ಮೂಲಕ ತಮ್ಮ ತೊಂದರೆಗಳನ್ನು ನೀಗುವುದಕ್ಕಾಗಿ ಕಿರುಕುಳ ಕೆಲಸಗಳನ್ನು ಕೈಕೊಳ್ಳಬೇಕಾದವರು, ಹಾಗಾದರೆ, ಎಂದೂ ತಲೆಯೆತ್ತಲಾಗದೆ? ಸಾಮಾಜಿಕ ಹಿರಿಮೆಯ ಕಾರ್ಯಕಲಾಪಗಳನ್ನು ತಮ್ಮ ವೃತ್ತಿಯಾಗಿ ಆರಿಸಿಕೊಳ್ಳಲು ಇವರ ವಂಶಾನುವಂಶವೆಲ್ಲವೂ ಅಯೋಗ್ಯವೆಂದು ಕಟ್ಟಳೆಯಾಗುವುದು ಯೋಗ್ಯವೆ? ಸಮಾಜದಲ್ಲಿ ಅಸಂತೋಷದ ಕಿಡಿಗಳು ಏಳುವುದು ಇಲ್ಲಿಯೇ. ಇದುವೆ ಮೆಲ್ಲನೆ ಕೆಳಗಣಿಂದ ಹೊತ್ತುತ್ತ ಹೊತ್ತುತ್ತ ಮೇಲಂತಸ್ತುಗಳನ್ನು ಸುಟ್ಟು ಹಾಕುವುದು. ದೇಶದೇಶಗಳ ಇತಿಹಾಸದಲ್ಲಿ ಮನಗಂಡ ಮಾತಿದು. ಇಂತಹ ಸಾಮಾಜಿಕ ವಿಪ್ಲವಗಳ ಅನುಭವಗಳಿಂದ ಇನ್ನುಮೇಲಾದರೂ ಎಚ್ಚತ್ತು ನಮ್ಮ ನಡೆವಳಿಯನ್ನು ತಿದ್ದಿಕೊಳ್ಳುವುದು ಕ್ಷೇಮಕರವಲ್ಲವೆ?

ಕೆಳಗಣ ಮಟ್ಟದಲ್ಲಿ ಇದ್ದವರು ಮೇಲೆ ಬರುವಾಗ ಅವರಲ್ಲಿದ್ದ ವಿಚಾರಸರಣಿಯು, ಆ ಸ್ಥಾನವನ್ನು ಆಕ್ರಮಿಸಿಕೊಂಡೊಡನೆ ಕೆಲಕಾಲದಲ್ಲಿಯೆ ಬದಲಾಗುತ್ತದೆ. ಕೆಳಮಟ್ಟದಿಂದ ತಾವು ಮೇಲೆ ಬರಬೇಕೆಂದು ಹಂಬಲಿಸುತ್ತಾರೆ. ಆ ಭರದಲ್ಲಿ ತಮ್ಮ ಮೇಲಣವರನ್ನು ಕೆಳಕ್ಕೆ ಎಳೆಯಬೇಕೆಂದೂ ಅನ್ಯಾಯದಿಂದ ಪ್ರಯತ್ನಿಸುವರು. ತಮ್ಮ ಕೆಳಮಟ್ಟದಲ್ಲಿದ್ದವರನ್ನು ಅದೇ ಕಾಲಕ್ಕೆ ಕಡೆಗಣಿಸುವರು! ಕೀಳ್ಗಳೆಯುವರು! ಇದು ನಿಂದ್ಯ. ತಾವು ಪಡೆದುಕೊಂಡ ಸ್ಥಾನಮಾನಗಳು ಸೂರ್ಯ-ಚಂದ್ರರಿರುವ ವರೆಗೂ ತನ್ನ ಮನೆತನಕ್ಕೇ ಉಳಿಯಬೇಕು; ತನ್ನ ಜ್ಞಾತಿಗೇ ಸಲ್ಲಬೇಕು, ಎಂಬ ಆಸೆಯು ಚಿಗುರುತ್ತದೆ. ಆರಂಭದಲ್ಲಿ ತಾನು ಒಬ್ಬ ಪ್ರಜಾಪ್ರತಿನಿಧಿ, ಅವರ ಸೇವಕ

ನೆಂದುಕೊಳ್ಳುತ್ತಲಿದ್ದ ನೆಪೋಲಿಯನ್‌ನು ಸಾರ್ವಭೌಮನಾಗಬಯಸಿದನು. ಕ್ರಮವೆಲ್ಲನು ತನ್ನ ಹಿಂದೆ ತನ್ನ ಮಗನು ರಾಜ್ಯರಕ್ಷಕನಾಗತಕ್ಕದೆಂದು ಗೊತ್ತುಪಡಿಸಿದನು. ಇದು ಸಾಮಾನ್ಯವಾದ ಮನುಷ್ಯಸ್ವಭಾವ.

ಮೇಲಣ ಸ್ಥಾನ-ಮಾನಗಳನ್ನು ಪಡೆದು ಪದಸ್ಥಿಕೆಯಲ್ಲಿದ್ದವರು ತಮ್ಮ ಗದ್ದುಗೆಗೆ ಇನ್ನಾರ ಕಾಲು ಸೋಂಕಬಾರದೆಂದು ಕೆಲವು ಹಂಚಿಕೆಗಳನ್ನು ಮಾಡಿರುತ್ತಾರೆ. ತಮ್ಮದು ದೈವಾಯತ್ತವಾದ ಅಧಿಕಾರ(Divine Right); ದೇವರಿಂದ ವರಪ್ರಸಾದಗಳನ್ನು ಹೊಂದಿ ಸಂಪಾದಿಸಿದ ಪಟ್ಟ, ಪದವಿ; ಪರಮೇಶ್ವರನ ಮುಖದಿಂದ ಹುಟ್ಟಿದ ಕುಲ; ಪರಮಾತ್ಮನು ಅವತಾರ ತಾಳಿದ ವಂಶ; ಬ್ರಹ್ಮನ ಮಾನಸ ಪುತ್ರನಿಂದಾದ ಸಂತತಿ; ತಾವು ಪರಶಿವನ ಜಡೆಯಿಂದ ಹುಟ್ಟಿದವರು; ಭೂಸುರರು, ಜಂಗಮೋ ಜಗದೀಶ್ವರಃ, ಎಂದರೆ ಭೂಲೋಕದ ಜಗದೀಶ್ವರರೇ ಆದ ಜಂಗಮರು, ಗುರುವರ್ಗದವರು; ಈ ತರದ ಶಬ್ದಸಮುಚ್ಚಯಗಳಲ್ಲಿ ಒಂದು ಬಗೆಯ ಜಾದೂ ಇದೆ. ಇವನ್ನು ಉಚ್ಚರಿಸಿದೊಡನೆ ಮುಗ್ಧಭಾವದ ಸಾಮಾನ್ಯಜನಗಳ ಮನಸು ಹೆಚ್ಚಿನ ಯಾವ ವಿಚಾರ ಚರ್ಚೆಗೂ ಹೋಗದೆ ಆ ವಿಶಿಷ್ಟ ವಿಚಾರಸರಣಿಗೆ ತಲೆವಾಗುತ್ತದೆ; ಶರಣುಹೋಗುತ್ತದೆ. ಹಳೆಯ ಈ ಹಂಚಿಕೆಯನ್ನು ಆಧುನಿಕ ಪಕ್ಷಗಳು ತಮ್ಮ ಬಲಸಂವರ್ಧನೆಯಲ್ಲಿಯೂ ಬಹಳ ಬುದ್ಧಿವಂತಿಕೆಯಿಂದ ಉಪಯೋಗಿಸಿಕೊಳ್ಳುತ್ತಲಿದ್ದಾರೆ. ಒಂದೊಂದು ಪಕ್ಷದ ಜಯಜಯಕಾರಗಳು ಈ ಬಗೆಯ ಪರಿಣಾಮವನ್ನುಂಟುಮಾಡುವ ಇಂದಿನ ಅಮೋಘ ಸಾಧನವೆನಿಸಿದೆ. ಜಯಜಯಕಾರಗಳೊಡನೆ ಆಯಾ ಪಕ್ಷದ ಅಧ್ವರ್ಯುವಿನ ಪವಾಡಗಳು, ಪಕ್ಷದ ಹಿರಿಮೆಯ ದಂತಕಥೆಗಳು ಇವೆಲ್ಲವು ಹಳೆಯ ರೀತಿಯ ಹೊಸ ಅವತಾರಗಳೇ.

ಇದರೊಡನೆ ದೈವೀಕೋಪದ ಭೀತಿ, ಪಾರಲೌಕಿಕ ಶಿಕ್ಷೆಯ ಹೆದರಿಕೆಗಳನ್ನು ಹೇಳಿ ಕೆಳಗಣ ಘಟ್ಟದಲ್ಲಿರುವ ಜನಸಾಮಾನ್ಯರು, ಮೇಲಣ ಪದಸ್ಥಿಕೆಯವರನ್ನು ಕಂಡು ಅಳುಕದೆ, ಕೆರಳದೆ, ತಮ್ಮ ಪಾಲಿಗೆಬಂದ ಗಂಜಿರೊಟ್ಟಿಯೆ ಪಂಚಾಮೃತವೆಂದು ಬಗೆದು ಸಂತುಷ್ಟರಾಗಿರುವರಂತೆ ಮಾಡಿದ ಜಾಣ್ಮೆ ಅಭೂತಪೂರ್ವವಾಗಿದೆ! ಇವೆಲ್ಲ ಹಂಚಿಕೆಗಳ ಹಿಂದೆ ಬಗೆದು ನೋಡಿದರೆ ಕೆಲವು ಮಟ್ಟಿಗೆ ಸೂಕ್ಷ್ಮವಾದ ಸ್ವಾರ್ಥವು ಅವಿತುಕೊಂಡಿರುವುದು ಕಾಣಬರದೆ

ಇರದು. ತಮ್ಮ ವಿಶಿಷ್ಟ ಜನ, ವರ್ಗ ಅಥವಾ ಪಕ್ಷದ ಪ್ರಭುತ್ವಕ್ಕೆ, ಸುಖ ಸಂಪತ್ತಿಗೆ ಯಾರೂ ಅಸೂಯೆಪಡದೆ ಎಲ್ಲವೂ ಯಥಾಸ್ಥಿತವಾಗಿ ಮುಂದೆ ನಡಕೊಂಡು ಹೋಗುವುದಕ್ಕಾಗಿ ಮಾಡಿಕೊಂಡ ತಂತ್ರವಿದು.

ಸಮಾಜದಲ್ಲಿ ಪ್ರತಿಯೊಂದು ವ್ಯಕ್ತಿಗೂ ತನ್ನ ವಿಕಾಸಮಾಡಿಕೊಳ್ಳಲು ಅವಕಾಶವಿರಬೇಕು. ಒಂದು ಸಮಾಜದಲ್ಲಿ ಮುಂದೆ ಹೋದವರು, ಇನ್ನು ಆ ತಮ್ಮ ಸ್ಥಾನದಲ್ಲಿ ಬೇರೆಯವರು ಯಾರೂ ಬರದಂತೆ ಬೇಲಿಗಳನ್ನು ಹಾಕುವುದು, ಗೋಡೆಗಳನ್ನು ಕಟ್ಟುವುದು ಸಮಾಜದ ಏಳ್ಗೆಗೆ ವಿಘಾತಕ. ಏಕೆಂದರೆ ಒಮ್ಮೆ ಹಿರಿಮೆ ಅಥವಾ ಮೇಲ್ಮೆಯನ್ನು ಪಡೆದವರ ಪೀಳಿಗೆಯಲ್ಲಿ ಮುಂದೆ ಎಲ್ಲರೂ ಅಷ್ಟೇ ಯೋಗ್ಯತೆಯವರು ಹುಟ್ಟುವರೆಂಬ ಸಿದ್ಧಾಂತವಿಲ್ಲ. ವಿಖ್ಯಾತರು ಜನ್ಮಿಸಿದ ಕುಲದಲ್ಲಿ ಮುಂದೆ ಕೆಲವು ತಲೆಮಾರಿನವರೆಗೆ ತೀರ ಸಾಮಾನ್ಯರೇ ಹುಟ್ಟುವುದು ವಾಡಿಕೆ. ಮಹಾಪುರುಷರು ಹುಟ್ಟಿದ ವಂಶದ ಸಂತಾನವು ನಷ್ಟವಾಗುವುದೆಂಬ ಲೋಕಾನುಭವದ ಹೇಳಿತವು ಒಂದುಂಟು. ಇದು ತೀರ ಸುಳ್ಳಲ್ಲ. ವಿಶೇಷಸಂಸ್ಕೃತಿಯು ವ್ಯಕ್ತವೂ ಸೃಷ್ಟಿಯ ಈ ನಿಯಮ ವನ್ನೇ ಅನುಸರಿಸುತ್ತಿರುವಂತೆ ಕಾಣುತ್ತದೆ. ಸಮಾಜದಲ್ಲಿ ಒಮ್ಮೆ ಮೇಲ್ಮೆ ಹೊಂದಿದವರು ಮುಂದೆಯೂ ಅವರೇ ಆ ಸ್ಥಾನವನ್ನು ಆಕ್ರಮಿಸಿಕೊಂಡಿರು ವುದು ಈ ಕಾರಣದಿಂದಲೂ ಅನಿಷ್ಟ. ದೇಶದ ಏಳ್ಗೆಗೆ ಆತಂಕ.

ತನಗೆ ಉಪಕಾರಮಾಡಿದವರ ವಿಷಯದಲ್ಲಿ ಕೃತಜ್ಞತೆಯಿಂದ ತಲೆಯು ಬಾಗುವುದು; ಹೃದಯವು ಉಕ್ಕೇರುವುದು; ಅವರನ್ನು ನೆನೆದು, ಕೊಂಡಾಡು ವುದರಲ್ಲಿ ಜೀವಕ್ಕೆ ಸಮಾಧಾನ; ಅವರಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸುವಲ್ಲಿ ಸಂತೋಷ; ಅವರ ಸೇವೆಗೆಯ್ವ ಸಂಧಿ ದೊರಕಿದಲ್ಲಿ ಧನ್ಯತೆ. ಉಪಕಾರದ ಪ್ರಮಾಣದಲ್ಲಿ ಈ ಭಾವವು ಹೆಚ್ಚು ಅಥವಾ ಕಡಿಮೆ ಉತ್ಕಟವಾಗಿರುತ್ತದೆ. ಈ ಕೃತಜ್ಞತಾಭಾವದಲ್ಲಿಯೆ ಮನುಷ್ಯತ್ವವಿದೆ. ಇನ್ನೊಬ್ಬರ ಸಹಾಯಾರ್ಥ ವಾಗಿ ಅಥವಾ ಕಲ್ಯಾಣಕ್ಕಾಗಿ ದುಡಿದು ಕಷ್ಟನಷ್ಟಗಳನ್ನು ಅನುಭವಿಸುವ ಜೀವಕ್ಕೆ, ಆ ಸಹಾಯವನ್ನು ಹೊಂದಿದವರ ಕಣ್ಣಲ್ಲಿ, ಮುಖದಲ್ಲಿ ಮಿಂಚುವ ಕೃತಜ್ಞತಾಸೂಚಕ ಭಾವನೆಯೆ ಒಂದು ನಿಜವಾದ ಪ್ರತಿಫಲ. ಇದಕ್ಕೆ ಹೊರತಾದ ಧನರೂಪದ ಬೆಲೆಯು ಬರಿ ವ್ಯಾಪಾರ. ಅದರಲ್ಲಿ ಆನಂದವಿಲ್ಲ; ದೈವೀಭಾವವಿಲ್ಲ. ಅದು ದೈವೀಸಂಪತ್ತು ಅಲ್ಲ. ಅದಕ್ಕೆ ವಿಪರೀತ; ಅಸುರೀ

ದಾರಿ. ಕೋಟ್ಯಾನುಕೋಟಿ ಜನಸ್ತೋಮದೊಳಗಿಂದ ಹೊರಹೊಮ್ಮುತ್ತಿದ್ದ ಈ ದಿವ್ಯಭಾವವೆ ಮಹಾತ್ಮಾಜೀಯವರಿಗೆ ಅವರ ಸಿರಾಶೆಯ ಪ್ರಸಂಗಗಳಲ್ಲಿ ಉಗ್ರತಪಸ್ಸಿನಲ್ಲಿ ಶಾಂತಿಯನ್ನೀವ ಸಂಗತಿಯಾಗಿರಬೇಕು. ಪಂಡಿತ ಜವಾಹರಲಾಲರು, ಪ್ರತಿಕ್ಷಣಕ್ಕೂ ಸುತ್ತುಮುತ್ತುತ್ತಿರುವ ಚಿಂತಾಜನಕ ಸಮಸ್ಯೆಗಳಿಗೆ ಬೆಂದು ಬೇಗುದಿಗೊಂಡರೂ ಮತ್ತೆ ಉತ್ಸಾಹದಿಂದ ಲೋಕಸೇವೆಗೆ ಅವರನ್ನು ಅಣಿಮಾಡುತ್ತಿರುವ ಮಹಾಶಕ್ತಿಯು ಇದು. ಬೇರೆ ಯಾವ ಧನಕನಕಾಧಿಗಳ ಲೋಭವಲ್ಲ; ಕೀರ್ತಿಕಾಂಕ್ಷೆಯಲ್ಲ. ಇವೆಲ್ಲವನ್ನೂ ಅವರು ಎಂದೋ ಪಡೆದು ಅವುಗಳ ಹೇಸಿಕೆಯು ಕೂಡ ಬಂದಿದೆ.

ಜನಗಳು ತಮ್ಮ ಉಪಕಾರಕರ್ತೃವನ್ನು ಎಂದೂ ಮರೆಯುವುದಿಲ್ಲ; ಮರೆಯಲಾಗದು. ಕೃತಜ್ಞತೆಗೆ ಅವರು ಎಂದೂ ಹೆರರು ಆಗಕೂಡದು. ಕೃತಘ್ನರಾದವರಿಗೆ ಏಳ್ಗೆಯ ಆಸೆಯೆ ಇಲ್ಲ. ಕೃತಜ್ಞತೆಯ ಲವಲೇಶವಿಲ್ಲದವರು ಮಾನವರಲ್ಲ; ಸಾಕ್ಷಾತ್ ರಾಕ್ಷಸರೇ ಸರಿ. ನೆರವಾದವರನ್ನು ನೆನೆಯದವರಿಗೆ ಮತ್ತೆ ಹೊತ್ತುಬಂದಾಗ ನೆರವಾಗಲು ಯಾರು ತಾನೆ ಮುಂದುವರಿದಾರು? ಕೃತಜ್ಞತೆಯು ಸಮಾಜಧಾರಣೆಗೆ ಕಾರಣವಾಗಿರುವ ಒಂದು ಅತ್ಯಂತ ಮಹತ್ವದ ಗುಣವಾಗಿದೆ.

ಕೃತಜ್ಞತೆಯ ದುರುಪಯೋಗಮಾಡಿಕೊಳ್ಳಬಾರದೆಂಬ ಪ್ರತಿಜ್ಞೆಯು ಉಪಕಾರಕರ್ತನದಾಗಿರಬೇಕು. ಕೃತಜ್ಞತೆಯಿಂದ ಗುರುದಕ್ಷಿಣೆಯನ್ನು ಕೇಳಬಂದಾಗ ಒಲಗೈಯ್ಯ ಹೆಬ್ಬೆರಳನ್ನೇ ಕೇಳಿದರೆ? ಧನಕನಕಾದಿ ( ಹೆಂಡತಿಯವರೆಗಿನ ) ಸರ್ವಸ್ವವನ್ನೂ ತಂದು ಅರ್ಪಿಸಲು ಒತ್ತಾಯಪಡಿಸುವ ಗುರುಮಠಗಳು ಇದ್ದರೆ ? ಜನ್ಮಕೊಟ್ಟ ಉಪಕಾರಕ್ಕಾಗಿ ಹಿರಣ್ಯಕಶಿಪುವಿನಂತೆ ವೈಯಕ್ತಿಕ ವಿಚಾರ ಸ್ವಾತಂತ್ರ್ಯದ ಬಲಿದಾನಕೇಳಿದರೆ ? ದೇಶದೊಳಗಿನ ಅರಾಜಕತ್ವವನ್ನು ಇಲ್ಲದಂತೆಮಾಡಿದ್ದಕ್ಕಾಗಿ, ಪರಕೀಯರ ಗಂಡಾಂತರದಿಂದ ರಾಷ್ಟ್ರವನ್ನು ಉಳಿಸಿದ್ದಕ್ಕಾಗಿ ಕ್ರಾಮವೆಲ್ಲ ಅಥವಾ ನೆಪೋಲಿಯನರಂತೆ ತಮ್ಮ ಮಕ್ಕಳಿಗೆ, ತಮ್ಮ ವಂಶಕ್ಕೇ ರಾಜ್ಯವು ನಡೆಯಬೇಕೆಂದು ಹಾರಯಿಸಿದರೆ ? ದೇಶಹಿತಕ್ಕಾಗಿಯೆಂದು ತಲೆಯೆತ್ತಿದ ಪಕ್ಷಪಂಗಡಗಳು ಎಂತೆಂತೊ ತಮ್ಮ ಪಕ್ಷದ ಸಾಮರ್ಥ್ಯವನ್ನು ಬೆಳಸಿ, ಕೇವಲ ತಮ್ಮ ಕೈಯಲ್ಲಿಯೆ ಅಧಿಕಾರಗಳು ಉಳಿಯುವದಕ್ಕಾಗಿ ಹವಣಿಕೆ ಹಂಚಿಕೆ ನಡೆಸಿದರೆ ?

ಇಂತಹರ ಉಪಕಾರಗಳನ್ನು ನೆನೆದು, ಅವರಿಗೆ ತಲೆಬಾಗುವುದು, ಅವರನ್ನು ಅನುಸರಿಸುವುದು ನ್ಯಾಯವಾದೀತೆ? ಪ್ರತಿಫಲದ ಆಸೆಯಿಂದ ಸೇವೆ ಮಾಡುತ್ತಿರುವರು, ನೆರವುಕೊಡುತ್ತಿರುವರು, ಎಂಬ ಅನುಭವವು ಬಂದಂತೆ ಅಲ್ಲಿ ಕೃತಜ್ಞತೆಯ ಭಾವನೆಯು ಮುರುಟಿ, ಸುರುಟಿ, ಕಂಧಿ, ಕಮರಿ ಹೋಗುತ್ತದೆ.

ಕೃತಜ್ಞತೆಯ ಭಾವನೆಯನ್ನು ನಮ್ಮ ಸಮಾಜಧಾರಣೆಗೆ, ಸಾಮಾಜಿಕ ಸುಖಶಾಂತಿಗೆ, ಹಿಂದಿನವರು ಬಹಳ ಸೊಗಸಾಗಿ ಉಪಯೋಗಿಸಿಕೊಂಡಿದ್ದರು. ಅತಿಥಿಗೆ ಯಜಮಾನನು "ಈ ಮನೆ ತಮ್ಮದೆ ಇದೆ. ಸಂಕೋಚಪಟ್ಟುಕೊಳ್ಳಬಾರದು. ತಾವು ನಾಲ್ಕುದಿನ ಇದ್ದರೆ ನಮಗೆ ಆನಂದ;" ಎಂದು ನಯವಿನಯದ ಮಾತುಗಳಿಂದ ಪ್ರಾರ್ಥಿಸಿಕೊಳ್ಳುವುದು, ವಾಡಿಕೆ. ಆದರೆ ಅತಿಥಿಯ ಭಾವನೆಯೆ ಒಂದು ಬಗೆ: ಇನ್ನೊಬ್ಬರಿಂದ ಸೇವೆಪಡೆಯುವುದು, ಅವರ ಅನ್ನಋಣ ಅಥವಾ ಯಾವುದೇ ಬಗೆಯ ಉಪಕಾರದ ಹಂಗಿನಲ್ಲಿರುವುದು ತನ್ನ ಸ್ವಾಭಿಮಾನಕ್ಕೆ ಕೇಡು; ಪುಣ್ಯನಾಶ. ಆದುದರಿಂದ ತೀರ ಅನಿವಾರ್ಯವಲ್ಲದೆ ಯಾವ ನೆರವನ್ನೂ ಹೆರವರಿಂದ ಕೋರಬಾರದು, ಪಡೆಯಬಾರದು. ಇದು ತನ್ನ ವ್ರತವಾಗಿರಬೇಕು. ಈ ಬಗೆಯಾದ ಎರಡೂ ಬಗೆಯ ಶ್ರದ್ಧೆಗಳು ಜೀವಂತವಾಗಿರುವ ವರೆಗೆ ಸಮಾಜವು ತೂಕತಪ್ಪಿ ಹೊಯ್ದಾಡದೆ ಸುಖವಾಗಿ ಮುಂದೆ ಸಾಗಬಲ್ಲುದು. ಇನ್ನೊಬ್ಬರಿಗೆ ನೆರವಾಗುವುದರಲ್ಲಿ ಪುಣ್ಯವಿದೆ; ಸೇವೆ ಮಾಡಿ ಅದನ್ನು ತಾನು ಪಡೆಯಬೇಕೆಂದು ಒಂದು ಪಕ್ಷದ ಹಂಬಲ; ಹೆರವರಿಂದ ನೆರವು ಪಡೆಯತಕ್ಕದ್ದಲ್ಲ; ಅದರಿಂದ ತನ್ನ ಪುಣ್ಯನಾಶ, ಕಾರಣ ಶಕ್ಯವಿದ್ದಷ್ಟೂ ತಾನು ಸ್ವಾವಲಂಬಿಯಾಗಿ ಬದುಕುವದರಲ್ಲಿಯೇ ಶ್ರೇಯಸ್ಸು ಎಂದು ಇನ್ನೊಂದು ಪಕ್ಷದವರ ತನ್ನ ಕಾಲಮೇಲೆ ತಾನು ನಿಲ್ಲುವ ಮನಸಾ ಪ್ರಯತ್ನ. ಈ ಬಗೆಯ ಬಾಳಿನಲ್ಲಿ ಶಬ್ದಾತೀತವಾದ ಒಂದು ಸುಖವಿದೆ. ಆನಂದವಿದೆ.

ಊರಿಗೆ ಬಂದ ಅತಿಥಿ ಅಭ್ಯಾಗತರನ್ನು ಹುಡುಕಿಕೊಂಡು ಬಂದು ಸತ್ಕರಿಸುವ ವ್ರತ ಗೃಹಸ್ಥಾಶ್ರಮಿಗಳದು. ಪರಾನ್ನಕ್ಕೆ ಬಾಯ್ಬಿಟ್ಟುಕೊಂಡಿರುವ ಚಪಲ ತನ್ನ ಜೀನಕ್ಕೆ ಅಂಟಿಕೊಳ್ಳದಂತೆ ವ್ರತಿಯಾಗಿರುವ ದೃಢನಿಶ್ಚಯ ಅತಿಥಿ ಅಭ್ಯಾಗತ ಯತಿಗಳದು. ಪ್ರತಿಫಲವನ್ನು ಕೇಳದೆ ಉಪಕಾರಮಾಡುವ

ವ್ರತ ಒಪ್ಪರದು; ಕೊಡದೆ ಏನೂ ತಕ್ಕೊಳ್ಳಕೂಡದು; ಒಂದಿಲ್ಲೊಂದು ಬಗೆಯಿಂದಲಾದರೂ ಪ್ರತಿಫಲ ಸಲ್ಲಿಸಲೇಬೇಕೆಂಬ ಆಂತರಿಕ ಸಂಕಲ್ಪ ಇನ್ನೊಬ್ಬರದು. ಇಂತಿಷ್ಟು ಸೇವೆಗೆ ಇಷ್ಟು ಹಣವೆಂಬ ಲೆಕ್ಕಾಚಾರದ ವ್ಯಾಪಾರಿವೃತ್ತಿಯು ಸಮಾಜರಚನೆಯಲ್ಲಿ ಕೃತಜ್ಞತೆಯ ಭಾವನೆಯು ಅಡಿಗಲ್ಲಾಗಿರುವ ಸಾಮಾಜಿಕ ನಡೆವಳಿಯೊಳಗಿನ ಸೊಗಸು ಎಂದೆಂದಿಗೂ ಬಾರದು. ಮೊದಲನೆಯದು ಮರದಿಂದ ಬಂದ ರಸಾಲಫಲ; ಎರಡನೆಯದು ವ್ಯಾಪಾರಕ್ಕಾಗಿ ತಂದು ಎಳಗಾಯಿ ಒತ್ತಿಮಾಡಿದ ಕೃತ್ರಿಮ ಹಣ್ಣು. ಪ್ರತಿಫಲದ ಆಸೆ, ತಾನು ಉಪಕಾರಮಾಡಿದ್ದೇನೆ, ಮಾಡುತ್ತಿದ್ದೇನೆಂಬ ಸೂಕ್ಷ್ಮವಾದ ಅರಿವು ಕೂಡ ಆ ಫಲದೊಳಗಿನ ರಸಾಲಮಾಧುರ್ಯವನ್ನು ಹಾಳುಮಾಡುವ ಹುಳು. ಪರೋಪಕಾರವೆಂದು ಜರಗುವ ಯಾವ ಕೆಲಸಕ್ಕೂ ಅಷ್ಟು ಬೆಲೆಯಿಲ್ಲ. ಮಾಡುವವನು ಅದನ್ನು ತನ್ನ ಅನಿವಾರ್ಯ ಕರ್ತವ್ಯವೆಂದು ನೆರವೇರಿಸುತ್ತಿರಬೇಕು. ಕರ್ತವ್ಯಪರಿಪಾಲನೆಯಲ್ಲಿ ಇನ್ನೊಬ್ಬರಿಗೆ ಆದ ಸಹಾಯಕ್ಕೆ ಅವರು ತಮಗೆ ಉಪಕಾರವಾಯಿತೆನ್ನುವರು. ಮಾಡಿದವನ ಪಾಲಿಗೆ ಅದು ತನ್ನ ಕರ್ತವ್ಯವೇ.

ಕರ್ತವ್ಯವನ್ನು ಮರೆತು ಕೃತಜ್ಞತೆಯನ್ನು ಮಾತ್ರ ಹಾರೈಸುವುದಾಗಲಿ, ಕರ್ತವ್ಯ ಮಾಡಿದ್ದಕ್ಕಾಗಿ ವ್ಯಕ್ತಪಡಿಸುವ ಕೃತಜ್ಞತೆಯನ್ನು ಸ್ವಾರ್ಥಕ್ಕಾಗಿ ಬಳಸುವುದಾಗಲಿ ಎರಡೂ ಆ ಮನುಷ್ಯನನ್ನು ಅಧಃಪಾತಕ್ಕೆ ಒಯ್ಯುತ್ತವೆ. ಶಿವಾಜಿಯು ತೋರಿದ ಶೌರ್ಯ, ಹಿಂದೂ ಜನತೆಗೆ ಮಾಡಿದ ಸಹಾಯಕ್ಕಾಗಿ ಅವಿಚಾರಿಗಳೂ ಅನಾಚಾರಿಗಳೂ ಆದ ಆತನ ವಂಶಜರು ಕೇವಲ, ಜನ್ಮದ ಹಕ್ಕಿನಿಂದಲೇ ರಾಜ್ಯೋಪಭೋಗಕ್ಕೆ ಅರ್ಹರಾಗುವರೆ? ರಾಜರು ಜಹಗೀರದಾರರು, ಸಿರಿವಂತರು ಹೇಗೆ ಜನ್ಮದಿಂದಲೇ ಶ್ರೇಷ್ಠರಾಗುವುದಿಲ್ಲವೊ ಅವರಂತೆ ಬ್ರಾಹ್ಮಣ, ಜಂಗಮಾದಿ ಉಚ್ಚವರ್ಣದವರೆನಿಸುವ ಜಾತಿಯವರೂ ಕೇವಲ ಜನ್ಮದಿಂದಲೆ ತಮ್ಮ ಹಿರಿಮೆಯನ್ನು ಹೇಳುವಲ್ಲಿ ಹುರುಳಿಲ್ಲ. ಸಮಾಜಕ್ಕೆ ಇವರು ಒಂದು ಕಾಲದಲ್ಲಿ ಸೇವೆ ಸಲ್ಲಿಸಿರುವುದು ನಿಜ. ಆದರೆ ಅದಕ್ಕಾಗಿ ವಂಶಾನುವಂಶ, ಯುಗಯುಗಾಂತರಗಳವರೆಗೂ ಉಳಿದ ಎಲ್ಲ ಸಮಾಜದವರೂ ಸೇವಕಭಾವದಿಂದ ಅವರೊಡನೆ ನಡೆದುಕೊಳ್ಳಬೇಕೆ?

ದೇಶಸೇವಕ, ದೇಶಭಕ್ತನೆಂಬಂತೆ ಗುರುವರ್ಗ ಅಥವಾ ಬ್ರಾಹ್ಮಣವೆಂಬುದೂ ಒಂದು ವಿಶಿಷ್ಟಾರ್ಥಕ ಪದವಿ. ಬ್ರಹ್ಮಪದವಿಯು ಪಡೆಯತಕ್ಕ

ಒಂದು ಸ್ಥಿತಿ. ಗೀತೆಯಲ್ಲಿ ಬ್ರಾಹ್ಮೀಸ್ಥಿತಿಯ ವರ್ಣನೆಯುಂಟು. ಆ ಸ್ಥಿತಿಯನ್ನು ಹೊಂದಿದವನು, ಹೊಂದಲು ಅನುದಿನವೂ ಸಾಧನದಲ್ಲಿದ್ದವನು ಬ್ರಾಹ್ಮಣನೆನಿಸುವನು. ಬ್ರಾಹ್ಮೀಸ್ಥಿತಿಯ ಪ್ರಾಪ್ತಿಯು ಜೀವನದೊಳಗಿನ ಶ್ರೇಷ್ಠವಾದ ಒಂದು ಧ್ಯೇಯವಾಗಿದೆ. ಇದೊಂದು ಪದವಿ.

ಪದವಿಯು ಹುಟ್ಟಿನಿಂದಲೇ ಯಾರಿಗಾದರೂ ಬಂದುದುಂಟೆ? ಇದು ಸಂಪಾದಿಸಬೇಕಾದುದು. ಜನ್ಮದೊಡನೆ ಬರತಕ್ಕುದಲ್ಲ. ವೇದಕಾಲದಲ್ಲಿಯೂ ಆ ಬಳಿಕ ಹಲವು ಶತಮಾನಗಳ ವರೆಗೂ ಬ್ರಾಹ್ಮಣ್ಯವು ಒಂದು ಗುರಿಯಾಗಿದ್ದಿತು. ಕೇವಲ ಹುಟ್ಟಿನಿಂದ ಇರಲಿಲ್ಲ. ಐತರೇಯ ಬ್ರಾಹ್ಮಣ, ವಾಯು ಪುರಾಣಾದಿಗಳಲ್ಲಿ ಇದಕ್ಕೆ ಆಧಾರಗಳಿವೆ.

> ವಿಶ್ವಾಮಿತ್ರೋ ನರಪತಿರ್ಮಾಂಧಾತಾ ಸಂಸ್ಕೃತಿಃ ಕಪಿಃ ।
> ವಾಧೂಲಶ್ಚ ಪುರುಕುತ್ಸಶ್ಚ ಭಾಸ್ವಾನ್ ಗೃತ್ಸಮದಃ ಪ್ರಭುಃ ॥
> ಆರ್ಷ್ಟಿಷೇಣೋಽಜಮೀಢಶ್ಚ ಭಾರ್ಗೋ ಗಾರ್ಗ್ಯಸ್ತಥೈವ ಚ ।
> ಕಕ್ಷೀವಾಂಶ್ಚ ವಿರೂಪಶ್ಚ ಮುದ್ಗಲೋ ಹರಿತಸ್ತಥಾ ॥
> ರಥೀತರಶ್ಚ ಕಣ್ವಶ್ಚ ವಿಷ್ಣುವೃದ್ಧಾದಯೋ ನೃಪಾಃ ।
> ಕ್ಷೇತ್ರೋಪೇತಾ ದ್ವಿಜಾಶ್ಚೈತೇ ತಪಸಾ ಋಷಿತಾಂ ಗತಾಃ ॥ — ವಾಯು
>
> ಇಂದ್ರೋವೈ ಬ್ರಾಹ್ಮಣಃ ಪುತ್ರಃ; ಕ್ಷತ್ರಿಯಃ ಕರ್ಮಣಾಽಭವತ್ ॥
>
> — ಮ. ಭಾ. ಶಾಂ. ೨೨-೧೮

ಕ್ಷತ್ರಿಯರಿದ್ದವರು ತಪಸ್ಸಿನಿಂದ ಋಷಿಗಳಾದ ಉದಾಹರಣಗಳೂ, ಬ್ರಾಹ್ಮಣಕುಲದಲ್ಲಿ ಹುಟ್ಟಿದವನು ಕರ್ಮದಿಂದ ಕ್ಷತ್ರಿಯತ್ವವನ್ನು ಪಡೆದುದೂ ಮೇಲಣ ಪೌರಾಣಿಕ ಉದಾಹರಣಗಳಿಂದ ನಿಶ್ಚಿತವಾಗಿ ತಿಳಿಯುತ್ತದೆ. ಪುರುಷಸೂಕ್ತದಲ್ಲಿ ಬಂದ ವರ್ಣನೆಯೂ, ಗೀತೆಯಲ್ಲಿ ಹೇಳಿದ ಗುಣ-ಕರ್ಮಗಳಿಂದ ಚಾತುರ್ವರ್ಣ್ಯಗಳುಂಟಾದುವೆಂಬುದನ್ನೇ ಪುಷ್ಟೀಕರಿಸುತ್ತದೆ. ಜ್ಞಾನೋಪಾಸಕನಾಗಿ ಲೋಕಹಿತತತ್ಪರನಾದವನು ಬ್ರಾಹ್ಮಣನು; ತೋಳ್ಬಲದಿಂದ ಬಾಳುವವನು ಕ್ಷತ್ರಿಯನು; ಸಂಪದಭಿವೃದ್ಧಿಗಾಗಿ ಹೆಣಗುವವನು ವೈಶ್ಯನು; ಸೇವಾವೃತ್ತಿಯಿಂದ ಜೀವಿಸುವವನು ಶೂದ್ರನು. ಎಲ್ಲ ಸಮಾಜಗಳಲ್ಲಿ ಲೋಕದಲ್ಲೆಲ್ಲ ಕಾಣಿಸಿಕೊಳ್ಳುವ ಸನಾತನ ಧರ್ಮವಿದು. ಪುರುಷಸೂಕ್ತದಲ್ಲಿ ವರ್ಣಿಸಲ್ಪಟ್ಟ ಸಹಸ್ರಶೀರ್ಷ ಪುರುಷನು ಹಿಂದೂ ದೇಶದ ಮಟ್ಟಿಗಿನವನು. ನಿಜ ಚರಿತನಲದೆ ಮೇಲೆ ಮತ್ತೆ ದಶಾಂಗುಲ ಮಿಕ್ಕುಳಿದವನು! ಶ್ರಮ

ಭಾಗದ ತತ್ವದ ಮೇಲೆ ನಿಂತ ಈ ನಾಲ್ಕು ವಿಭಾಗಗಳು ಪ್ರಪಂಚದಲ್ಲಿ ಲ್ಲೆಲ್ಲೂ ಇವೆ. ಹಿಂದೆ ಇದ್ದುವು. ಮುಂದೆ ಉಳಿಯುವುವು. ಇದು ಕೇವಲ ಂದೂ ದೇಶದ ವೈಶಿಷ್ಟ್ಯವೆಂಬುದು ಒಣ ಹೆಮ್ಮೆಯ ಮಾತು. ಭಾರತದಲ್ಲಿ ಈಗ ಉಳಿದಿರುವ ವರ್ಣಾಶ್ರಮಗಳು ಮೂಲ ಆ ಶುದ್ಧರೂಪದಿಂದ ಅದೆಷ್ಟೊ ದೂರ ಹೋದ ಅವಶೇಷವು ಮಾತ್ರ. ಈ ವಿಕೃತಿಯೆ ನಮ್ಮ ವೈಶಿಷ್ಟ್ಯವೆಂಬು ನಿದ್ದರೆ ಅದು ಅಕ್ಷರಶಃ ನಿಜ.

ದೇಶಸೇವಕ, ದೇಶಭಕ್ತ, ಕಮ್ಯೂನಿಸ್ಟ, ಮೊದಲಾದ ಪಂಥಗಳು ಲೋಕೋದ್ಧಾರದ ಸಲುವಾಗಿ ಮೊದಲು ಹೊರಡುವುವು. ಅದರಲ್ಲಿ ರಾಜಕೀಯ ಹಾಗೂ ಸಾಮಾಜಿಕ ಲಾಭಗಳು ಹೆಚ್ಚುಹೆಚ್ಚಾಗಿ ಕಾಣಿಸಿಕೊಳ್ಳಲಾರಂಭಿಸಿ ದಂತೆ ಆ ಹೆಸರನ್ನು ತಮಗೆ ಅಂಟಿಸಿಕೊಂಡು ಆ ಹೆಸರಿನ ಜೊತೆಗೆ ಅದರ ನಿದರ್ಶಕ ಬಾಹ್ಯಚಿಹ್ನಗಳನ್ನು ಎದ್ದುಕಾಣುವಂತೆ ಧರಿಸಿ ಮೆರೆವ ಒಂದು ಸಮಾಜವೇ ನಿರ್ಮಾಣವಾಗುತ್ತದೆ. ಮುಂದೆ ಅವರ ಮಕ್ಕಳು ತಮ್ಮ ತಂದೆಯ ಹೆಸರಿನ ಲಾಭ ಪಡೆದು ಮುಂದುವರೆಯಲು, ಸಮಾಜದಲ್ಲಿ ಪ್ರಭುತ್ವ ನಡಸಲು ಹವಣಿಸುತ್ತಾರೆ. ಬರುಬರುತ್ತ ಇದೊಂದು ಜನ್ಮದಿಂದ ನಿರ್ಣಯಿಸಲ್ಪಡುವ ಜಾತಿಯೆ ಆಗುವುದು. ಆದರೆ ಒಂದು ತಲೆಮಾರಿನವರಿಗೆ ಸಲ್ಲಬೇಕಾದ ಕೃತಜ್ಞತೆಯು, ಆನುವಂಶಿಕವಾಗಿ ಅಥವಾ ಆ ಪಕ್ಷವು ಬೇರೆ ಕಾಲಪರಿಸ್ಥಿತಿಯಲ್ಲಿ ನಿರುಪಯುಕ್ತವಾದರೂ ಮುಂದೆ ಹಾಗೆಯೇ ಸಲ್ಲುತ್ತಲೇ ಇರಬೇಕೆ, ಪ್ರಜಾರಿಗಳ ಉಂಬಳಿಯಂತೆ! ಇಂದು ಗುರುವರ್ಗ, ಬ್ರಾಹ್ಮಣಾದಿ ಗಳ ಸ್ಥಿತಿಯೂ ಹೀಗೆಯೆ ಉಂಟು.

ನಿಜವಾದ ಬ್ರಾಹ್ಮಣನು ಯಾರು? ಗುರುವರ್ಗದವರು ಎಂತಹರಿರಬೇಕು?

> ಸತ್ಯಂ ಜ್ಞಾನಮಥಾದ್ರೋಹ ಆನೃಶಂಸ್ಯಂ ತಪೋಘೃಣಾ ।
> ತಪಶ್ಚ ದೃಶ್ಯತೇ ಯತ್ರ ಸ ಬ್ರಾಹ್ಮಣ ಇತಿ ಸ್ಮೃತಃ ॥
>
> — ಶಾಂತಿಪ. ೧೮೯-೪

> ಜಿತೇಂದ್ರಿಯೋ ಧರ್ಮಪರಃ ಸ್ವಾಧ್ಯಾಯನಿರತಃ ಶುಚಿಃ ।
> ಕಾಮಕ್ರೋಧೌ ವಶೌ ಯಸ್ಯ ತಂ ದೇವಾಃ ಬ್ರಾಹ್ಮಣಂ ವಿದುಃ ॥
>
> — ಮೋಕ್ಷಪ. ೨೪೫-೩೪

> ಯಸ್ಯ ಯಲ್ಲಕ್ಷಣಂ ಪ್ರೋಕ್ತಂ ಪುಂಸೋವರ್ಣಾಭಿವ್ಯಂಜಕಮ್ ।
> ಯದನ್ಯತ್ರಾಪಿ ದೃಶ್ಯೇತ ತತ್ತೇನೈವ ವಿನಿರ್ದಿಶೇತ್ ॥
>
> — ಭಾಗ ಸ್ಕಂ. ೭-೧೧

ಸ್ವಭಾವಃ ಕರ್ಮ ಚ ಶುಭಂ ಯತ್ರ ಶೂದ್ರೇಽಪಿ ತಿಷ್ಠತಿ ।
ವಿಶಿಷ್ಟಃ ಸ ದ್ವಿಜಾತೇರ್ವೈ ವಿಜ್ಞೇಯ ಇತಿಮೇ ಮತಿಃ ॥

ಮಹಾಭಾ. ಅನುಶಾ. ೧೪೩

ಶೂದ್ರೋಽಪ್ಯಾಗಮ ಸಂಪನ್ನೋ ದ್ವಿಜೋಭವತಿ ಸಂಸ್ಕೃತಃ ॥

—ಮಹಾಭಾ. ಅನುಶಾ. ೧೪೩-೪೬

ಕರ್ಮಭಿಃ ಶುಚಿಭಿರ್ದೇವಿ ಶುದ್ಧಾತ್ಮಾ ವಿಜಿತೇಂದ್ರಿಯಃ ।
ಶೂದ್ರೋಽಪಿ ದ್ವಿಜವತ್ ಸೇವ್ಯ ಇತಿ ಬ್ರಹ್ಮಾಽಬ್ರವೀತ್ ಸ್ವಯಮ್ ॥

—ಅನುಶಾ. ೧೪೩-೪೮

ನ ಯೋನಿರ್ನಾಪಿ ಸಂಸ್ಕಾರೋ ನ ಶ್ರುತಂ ನ ಚ ಸಂತತಿಃ ।
ಕಾರಣಾನಿ ದ್ವಿಜತ್ವಸ್ಯ ವೃತ್ತಮೇವತು ಕಾರಣಮ್ ॥

—ಅನುಶಾ ೧೪೩-೫೦

ಸರ್ವೋಽಯಂ ಬ್ರಾಹ್ಮಣೋ ಲೋಕೇ ವೃತ್ತೇ ನ ತು ವಿಧೀಯತೇ ।
ವೃತ್ತೇ ಸ್ಥಿತಸ್ತು ಶೂದ್ರೋಽಪಿ ಬ್ರಾಹ್ಮಣತ್ವಂ ನಿಯಚ್ಛತಿ ॥

ಅನು.ಶಾ. ೧೪೩-೪೬

ನ ಕುಲಂ ವೃತ್ತಿ ಹೀನಸ್ಯ ಪ್ರಮಾಣಮಿತಿಮೇ ಸ್ಥಿತಿಃ ।
ಅಂತೇಷ್ವಪಿ ಜಾತಾನಾಂ ವೃತ್ತಮೇವ ವಿಶಿಷ್ಯತೇ ॥

—ಉದ್ಯೋ. ೩೫-೪೧

ಶೂದ್ರೋಽಪಿ ಶೀಲಸಂಪನ್ನೋ ಗುಣವಾನ್ ಬ್ರಾಹ್ಮಣೋಽಭವೇತ್ ॥
ಬ್ರಾಹ್ಮಣೋಽಪಿ ಕ್ರಿಯಾಹೀನಃ ಶೂದ್ರಾತ್ ಪ್ರತ್ಯವರೋ ಭವೇತ್ ॥

ವನಪ. ೧೮೦

ಸರ್ವತ್ರ ಸಮದರ್ಶೀ ಯಃ ಸಃ ಬ್ರಾಹ್ಮಣ ಇತಿ ಸ್ಮೃತಃ । —ಶುಕ್ರನೀ.
ಮೈತ್ರೋ ಬ್ರಾಹ್ಮಣ ಉಚ್ಯತೇ ।

—ಮನು ೨ ೮೭, ಮಹಾ ಭಾರತ ಅನುಶಾಸನ ಪರ್ವ

ಚತ್ವಾರ ಏಕಸ್ಯ ಪಿತುಃ ಸುತಾಶ್ಚ ತೇಷಾಂ ಸುತಾನಾಂ ಖಲು ಜಾತಿರೇಕಾ ।
ಏವಂ ಪ್ರಜಾನಾಂ ಹಿ ಪಿತೈವ ಏಕ ಪಿತ್ರೇಕ ಭಾವಾತ್ ನ ಚ ಜಾತಿಭೇದಃ ।

ಭವಿಷ್ಯಪು ೪೨-೪೫

ಪೌರುಷಕ್ಕೆ ಇಂಬುದೊರೆಯದಾಗುತ್ತಲೆ ದೈವವಾದವು ತಲೆದೋರುವುದು; ಇಲ್ಲವೆ ಆ ವ್ಯಕ್ತಿ ತಲೆತಿರುಕನಾದರೂ ಆಗುವನು. ಜನ್ಮದಿಂದ ವರ್ಣಗಳನ್ನು ಮಾಡಿ ವ್ಯಕ್ತಿಗಳ ಸ್ವಾಭಾವಿಕ ವಿಕಾಸಕ್ಕೆ ಸಂಪೂರ್ಣವಾಗಿ ತಡೆಹಾಕಿದಂತಾಯಿತು. ವ್ಯಕ್ತಿಗಳ ಗುಣವಿಕಾಸಕ್ಕೆ ಅವಕಾಶವಿಲ್ಲದೆ ಡಾ. ಅಂಬೇಡಕರಂತಹ ಧೀಮಂತರು ಅದೆಷ್ಟು ಜನ ಹಿಂದಕ್ಕೆ ನಿರ್ನಾಮವಾ

ದರೊ ಯಾರು ಹೇಳಬೇಕು? ಅಂದಿನವರು ಪಾರಲೌಕಿಕ ಶಿಕ್ಷೆ ಅಥವಾ ದೈವೀಕೋಪದ ಭೀತಿಯಿಂದ, ಅಥವಾ ಸಾಮಾಜಿಕ ವಿರೋಧಕ್ಕೆ ಹೆದರಿ ಸುಮ್ಮನಿದ್ದರು; ದೈವವಾದಿಗಳಾದರು. ಆದರೆ ಇಂದಿನ ವಾತಾವರಣದಲ್ಲಿ ಅವರೇ ತಲೆತಿರುಕರಂತಾಗುವದು ಕಂಡುಬರುತ್ತದೆ. ಆ ರಾಸಿನಲ್ಲಿ ಯೋಗ್ಯಾಯೋಗ್ಯದ ವಿವೇಕವು ಅಳಿದು ಗೀತಾ ಉಪನಿಷತ್ತುಗಳನ್ನೂ ಸುಟ್ಟುಬಿಡಬೇಕೆಂಬ ಕ್ರೂರ ಆವೇಶದ ಕೂಗು ಕೇಳಬರುತ್ತಿದೆ.

ಪ್ರಗತಿಯು ಕಡೆಗೆ ಒಯ್ಯುವ ಯಾರ ದಾರಿಯನ್ನೂ ತಡೆಯಲಾಗದು. ಅದರಿಂದ ಒಬ್ಬರನ್ನು ತಡೆದು ನಿಲ್ಲಿಸುವವರಿಗೂ ಮುನ್ನಡೆಯಲಿಕ್ಕಾಗುವುದಿಲ್ಲ. ಒಬ್ಬರ ಹಾನಿಮಾಡುವಾಗ ತನಗೂ ಕೇಡಿಗೆ ಒಳಗಾಗಬೇಕಾಗುವುದು. ಜನ್ಮದಿಂದ ದೊರೆವ ಕುಲೀನತೆ, ದೊಡ್ಡಿತೆಗಿಂತ ತನ್ನ ಗುಣಶೀಲಗಳಿಂದ ಪಡೆದ ಕುಲೀನತೆ, ಹಿರಿಮೆಗಳು ಹೆಚ್ಚು ಪ್ರಶಂಸಾರ್ಹವಾಗಿವೆ. ಎರಡನೆಯದರಲ್ಲಿರುವ ಪೌರುಷಪ್ರಯತ್ನದ ಆನಂದದ ಸೊಗಸು ಮೊದಲನೆಯದರಲ್ಲಿಲ್ಲ. ಮೊದಲನೆಯದು ಕೇವಲ ಹೆಮ್ಮೆ ಬಿಂಕವನ್ನು ಮಾತ್ರ ತರಬಲ್ಲುದು. ನದೀಮೂಲ, ಋಷಿಕುಲ ನೋಡಬಾರದೆಂಬುವರು. ಕುಲವು ಎಂತಹದಿದ್ದರೂ ಋಷಿಗಳು ಲೋಕಪೂಜ್ಯರಾಗಿಲ್ಲವೆ? ಇದು ಜನ್ಮದಿಂದ ಬಂದ ಹಿರಿಮೆಯಲ್ಲ. ಪೌರುಷದಿಂದ ಅರಸುಕುಲಗಳೆಂದು ಮೆರೆದ ಹಲವು ಅರಸುಮನೆತನಗಳ ಉಗಮವೂ ನದೀಮೂಲದಂತೆ ತೀರ ಕಿರುಕುಳವಿರುತ್ತದೆ. ಇಂಗ್ಲೆಂಡಿನ ನಾರ್ಮಂಡಿ ಅರಸುಮನೆತನದ ಮೂಲಪುರುಷನು ಅಜ್ಞಾತ ತಂದೆಯ ಮಗನಂತೆ!

ಪಿಲ್‌ಗ್ರಿಮ್ಸ ಪ್ರೊಗ್ರೆಸ್ ಬರೆದ ಬನಿಯನ್ ಕಲೈಗಾರನ ಕೂಸು; ಕೋಲಂಬಸ ನೇಕಾರರ ಹುಡುಗ; ಕ್ರಾಮವೆಲ್ಲ ಕಲಾಲರ ಪೋರ; ಡೆಫೊ ಕಟಕರ ಶಿಶು; ಡೆಮಾಸ್ಥನಿಸ್ ಶಿಕ್ಕಲಿಗಾರ ಕೂಸುಳೆ; ಹೋಮರ ನೇಗಿಲ ಹೊಡೆವವನ ಮಗು; ಶೆಕ್ಸಪಿಯರ ಜಾಡರ ಪಿಳ್ಳೆ, ಸಾಕ್ರೆಟಿಸ್ ಉಪ್ಪಾರರ ಮನೆಯವ, ವಾಶಿಂಗ್ಟನ್‌ನ ತಂದೆ ಒಕ್ಕಲಿಗ; ಹೈದರನ ತಾತ ಶಿಪಾಯಿ; ಭಟ್ಟರ ಸಂತಾನ ಬಾಳಾಜಿ ವಿಶ್ವನಾಥ ಪೇಶವೆ, ಅಡಿಯಾಳಾಗಿದ್ದವರು ಸಿಂದೇ, ಹೋಳಕರ ಮನೆತನದ ಮೊದಲಿಗರು; ನೆಪೋಲಿಯನ್ ಬಡ ವಕೀಲನ ಮಗ; ವಾಲ್ಮೀಕಿ ಬೇಡನಂತೆ, ಕೃಷ್ಣ ಗೋವಳ; ವ್ಯಾಸನ ತಾಯಿ ಅಂಬಿಗರವಳು.

ತಂದೆಯಂತೆ ಮುಸಲಿನಿ ಕಂಬಾರನಾಗಬೇಕಿತ್ತು. ಸುಣ್ಣಬಣ್ಣ ಹಚ್ಚಿ ಹೊಟ್ಟೆಹೊರಕೊಳ್ಳುತ್ತಿದ್ದ ಹಿಟ್ಲರ್ ಮೊದಲನೆಯ ಮಹಾಯುದ್ಧದಲ್ಲಿ ಒಬ್ಬ ಸಾಮಾನ್ಯ ಸೈನಿಕ. ಸ್ಟಾಲಿನ್ ಚಮಗಾರ; ವಿದ್ಯಾವ್ಯಾಸಂಗವೆಂದರೇನೆಂಬು ದನ್ನು ಅರಿಯದ ಲೈಡ ಜಾರ್ಜ; ಚಂದ್ರಗುಪ್ತ ದಾಸೀಪುತ್ರ; ಗಾಂಧಿಜೀ ಬನಿಯಾ; ಬಾಬು ಭಗವಾನದಾಸ ವೈಶ್ಯ; ಜ್ಞಾನಿ ಅರವಿಂದಬಾಬು ಶೂದ್ರ; ಪಾಂಡಿಚೇರಿ ಆಶ್ರಮದಲ್ಲಿ ಯೋಗಿನಿಯೆನಿಸಿ ಪೂಜೆಗೊಂಬ ಮಿಸೆಸ್ ರಿಚರ್ಡ್ಸ ಒಬ್ಬ ಫ್ರೆಂಚ ಸಾಧಕನ ಹೆಂಡತಿ; ಸರ್ವಜ್ಞಕವಿ ಜನ್ಮ ಸಂಧಿಗ್ಧ.........

ಇಂತಹ ಉದಾಹರಣೆಗಳಿಗೆ ಲೆಕ್ಕವಿಲ್ಲ. ವಿದ್ಯೆ, ಗುಣ, ಶೀಲ, ಶೌರ್ಯಾದಿ ಗಳಿಂದ ಮೇಲ್ಮೆ ಪಡೆದು ನಾಡಿಗೆ ತಮ್ಮ ಕರ್ತವ್ಯದ, ಪೌರುಷದ ಕಾಣಿಕೆ ಯನ್ನು ಅರ್ಪಿಸಿದವರೇ ಯಾವುದೊಂದು ಮನೆತನದ ಸಂಸ್ಥಾಪಕರಾಗು ತ್ತಾರೆ. ಅವರ ಹೆಸರಿನ ಲಾಭ ಪಡೆದು ಬದುಕುತ್ತಿರುವ ಛಾಯಾಜೀವಿಗಳು. ಮುಂದೆ ಮತ್ತೆ ಬೇರಾರನ್ನೂ— ತಮ್ಮ ಪೂರ್ವಜರಂತೆ, ಪೂರ್ವಜರಸಾಲಿಗೆ ನಿಲ್ಲುವಂತೆ ಮೇಲ್ಮೆಯನ್ನು ಹೊಂದಲು ಅಡ್ಡಿಯನ್ನುಂಟು ಮಾಡುವುದು ಕಾಣುತ್ತದೆ. ಇದು ಶುದ್ಧ ಅನೀತಿ; ಅನ್ಯಾಯ; ನಾಚಿಕೆಗೇಡು.

ಜಾತಿಗಳುಂಟಾಗುವುದು ಮುಖ್ಯವಾಗಿ ಕೆಳಗಣ ಆರು ಕಾರಣಗಳಿಂದ (೧) ರಾಷ್ಟ್ರೀಯ ಜಾತಿ; (೨) ಉದ್ಯೋಗಮೂಲಕ ಜಾತಿ; (೩) ಸಂಪ್ರ ದಾಯಮೂಲಕ ಜಾತಿ; (೪) ಸಂಕರಮೂಲಕ ಜಾತಿ; (೫) ಸ್ಥಾನಾಂತರ ಮೂಲಕ ಜಾತಿ; (೬) ಭಿನ್ನಾಚಾರಮೂಲಕ ಜಾತಿ.

ಈಗಿನ ಯುಗವು ಮೊದಲನೆಯ ಪ್ರಕಾರದ ಎಂದರೆ ರಾಷ್ಟ್ರೀಯ ಜಾತಿ ಯನ್ನೊಂದೇ ಒಪ್ಪುವುದಕ್ಕೆ ಸಿದ್ಧವಿದೆ. ಹಿಂದೂ ದೇಶದಲ್ಲಿದ್ದವರು ಹಿಂದು ಗಳು. ಇಂಗ್ಲೆಂಡಿನವರು ಇಂಗ್ಲಿಷರು; ಇದೇ ಮುಖ್ಯವಾದ ಈಗಿನ ಜಾತಿ ರಾಷ್ಟ್ರೀಯ ಐಕ್ಯಕ್ಕೆ ಕಾರಣವಾಗುವಂತಹದು.

ಇನ್ನುಳಿದುವು ಒಂದು ನಾಡಿನೊಳಗಿನ ರಾಷ್ಟ್ರೀಯ ಕುಲದೊಳಗಿ ಉಪಜಾತಿಗಳು. ಅಥವಾ ಉಪವರ್ಗಗಳು. ಒಬ್ಬರನ್ನು ಇನ್ನೊಬ್ಬರಿಂದ ಗುರುತಿಸಲಿಕ್ಕೆ ಗುಂಪುಗಳಿಗೆ ಬಳಕೆಯಲ್ಲಿ ಬರುವ ಹೆಸರಿನ ಪ್ರಕಾರಗಳು.

ಕೆಲವೊಂದು ಜಾತಿ, ಕುಲದವರು ಲೋಕದಲ್ಲಿ ತಾವೇ ಶ್ರೇಷ್ಠರ ದೇವರ ವರಪ್ರಸಾದ ಪಡೆದವರೆಂಬಂತೆ ಆಢ್ಯತೆಯಿಂದ ವರ್ತಿಸುವುದು

ಸಮಾಜವು ಅದನ್ನು ದೈವಾಯತ್ತವೆಂದು ಒಪ್ಪಿಕೊಂಡು ನಡೆಯುವುದೂ ಕೇವಲ ತಿಳಿಗೇಡಿತನದ ಲಕ್ಷಣ. ಏಕೆಂದರೆ ನಡೆವಳಿ—ಶೀಲವೇ ಇಲ್ಲದ ಲೋಕಹಿತಕ್ಕಾಗಿ ಜೀವನವನ್ನು ಮುಡಿಪಾಗಿ ಇರಿಸದ ಅಧಮರು, ಗುರು ವರ್ಗದವರೆಂದು ಸುಮ್ಮನೆ ಪುರಾತನರ ಹೆಸರು ಹೇಳಿ ಜನಸಾಮಾನ್ಯರ ಮುಗ್ಧಭಾವದ ದುರ್ಲಾಭ ಪಡೆಯುತ್ತಿರುವರು. ಇಂತಹರ ಈ ಕೃತಿಗಳಿಂದಲೆ ಸಮಾಜವು ಅವನತಿಗೆ ಇಳಿದಿದೆ. ಕರ್ಮದಂತೆ ಫಲವೆಂಬುದು ನಿತ್ಯಸಿದ್ಧಾಂತ. ಇಂದು ನಮ್ಮ ದೇಶದಲ್ಲಿ ಜನ್ಮದಿಂದಿರುವ ವರ್ಣವ್ಯವಸ್ಥೆಯು ಕುರುಳು ಇಲ್ಲದ್ದಾಗಿದೆ. ಹೆರವರ ಆಳಾಗಿ ಬಾಳುವ, ಹೊಟ್ಟೆಯ ಪಾಡಿಗೆ ಬೇಕಾದ ಕೆಲಸಕ್ಕೆ ನಿಲ್ಲುವ ಜನಗಳ ಕುಲ, ಯಾವ ಕುಲ? ಪರಕೀಯ ಆಂಗ್ಲರ ಆಡಳಿತವನ್ನು ಇಲ್ಲಿ ದೃಢಗೊಳಿಸಲು ದೇಹಸವಿಸಿದವರ ಕುಲ, ಯಾವ ಕುಲ? ಬೆಳಗೂ ಬೈಗೂ ಸುಳ್ಳು ಕಾಗದಪತ್ರ ಮಾಡಿಸಿ, ಅಥವಾ ತಮ್ಮ ಬುದ್ಧಿವಂತಿಕೆಯನ್ನು ಮಾರಿ ನಿಜವಿದ್ದುದನ್ನು ಸುಳ್ಳು, ಸುಳ್ಳಿದ್ದುದನ್ನೂ ನಿಜವೆಂಬ ಮಾಟಮಾಡಿ ತೋರಿಸುವ ಬಾಯ್ಬಡಿಕ ಮೋಡಿಕಾರರ ಕುಲ, ಯಾವ ಕುಲ? ಕೈಚಳಕ, ಬಾಯ್ಚಳಕದಿಂದ ಸಮಾಜದ ದುಡ್ಡನ್ನು ಹೀರಿ ಸ್ವಾರ್ಥಸಾಧಿಸುತ್ತಿರುವ, ಶೀಲಭ್ರಷ್ಟರ ಕುಲ, ಯಾವ ಕುಲ?

> ಏಕವರ್ಣಮಿದಂ ಪೂರ್ವಂ ವಿಶ್ವಮಾಸೀತ್ ಯುಧಿಷ್ಠಿರ ।
> ಕರ್ಮಕ್ರಿಯಾ ವಿಭೇದೇನ ಚಾತುರ್ವರ್ಣ್ಯಂ ಪ್ರತಿಷ್ಠಿತಮ್ ॥
>
> —ಮಹಾಭಾ. ವನ. ೧೮೦

> ನ ವಿಶೇಷೋಽಸ್ತಿ ವರ್ಣಾನಾಂ ಸರ್ವಂ ಬ್ರಾಹ್ಮಮಿದಂ ಜಗತ್ ।
> ಬ್ರಹ್ಮಣಾ ಪೂರ್ವಸೃಷ್ಟಂ ಹಿ ಕರ್ಮಭಿರ್ವರ್ಣತಾಂ ಗತಮ್ ।
>
> —ಮ.ಹಾ.ಭಾ. ಶಾ ೧೮೬-೧೦

ಶ್ರೀ ವ್ಯಾಸರು ಹೇಳಿದ್ದೇ ನಿಜ. ಮೊದಲು ವರ್ಣಭೇದವೇ ಇದ್ದಿಲ್ಲ. ಒಂದೇ ವರ್ಣ. ಕರ್ಮ-ಕ್ರಿಯಾಭೇದದಿಂದ ಎಂದರೆ ಶ್ರಮವಿಭಾಗದ ತತ್ವಕ್ಕನುಸರಿಸಿ ಬ್ರಾಹ್ಮಣಾದಿ ವರ್ಣಗಳು ತಲೆಯೆತ್ತಿದುವು. ಈ ಜಗತ್ತೆಲ್ಲವೂ ಪರಮಾತ್ಮನ ಆವಾಸ. ಆದುದರಿಂದ ಆತನಿಂದ ನಿರ್ಮಿತವಾದ ಪ್ರಜೆಯೆಲ್ಲ ಅವನ ಸಂತತಿ. ಅವರವರ ಕೆಲಸಗಳಿಂದ ಅವರವರ ವರ್ಣಗಳು ಎಂದರೆ ಬಣಗಳು ಹುಟ್ಟಿದುವು.

ಆದಕಾರಣ ಜನ್ಮದಿಂದ ವರ್ಣಗಳೆಂಬುದು ಆತ್ಮವಂಚನೆ; ಲೋಕ ವಂಚನೆ. ಗುಣ-ಕರ್ಮಕ್ಕನುಸರಿಸಿಯೇ ನಿಜವಾದ ಸಾರ್ಥವಾದ ವರ್ಣಗಳು. ಜನ್ಮದಿಂದ ಯಾರಿಗೂ ಹಿರಿಮೆ ಅಥವಾ ಕೀಳ್ಮೆಯು ಅಂಟಿಕೊಳ್ಳತಕ್ಕದ್ದಲ್ಲ.

---

# ಅಡಿಗೆಯವಳಾಗುವುದೇ ಹೆಣ್ಣಿನ ಜೀವನದ ಹೆಗ್ಗುರಿಯೆ?

## (ಪೂರ್ವ ಪಕ್ಷ)

ಹೆಂಗುಸರೆಂದರೆ ' ಗೃಹಸ್ವಾಮಿನಿಯರು,' ಎಂಬ ಚೆಂದವಾದ ಹೆಸರಿನಿಂದ ಅವರನ್ನು ಅಡುಗೆಯಮನೆಯಲ್ಲಿ ಹೂಳಿಡುವ ಕಾಲವು ಮುಗಿದು ಹೋಯ್ತು. ಇನ್ನುಮೇಲೆ ಸ್ತ್ರೀಯರು ಇಂತಹ ಸವಿಮಾತುಗಳಿಗೆ ಮರುಳಾಗಿ ತಮ್ಮ ಆತ್ಮನಾಶವನ್ನು ಮಾಡಿಕೊಳ್ಳಲಾರರೆಂದು ನಾನು ನಿಶ್ಚಿತವಾಗಿಯೂ ಹೇಳಬಲ್ಲೆ. ಹೆಂಗಸು ಮಕ್ಕಳನ್ನು ಹಡೆಯಬೇಕು; ಅಡುಗೆ ಮಾಡಬೇಕು ಎಂಬೆರಡೆ ಕೆಲಸಗಳು ಅವರ ಪಾಲಿನವು. ಇದರಲ್ಲಿಯೆ ಅವರ ಜೀವನದ ಇತಿಕರ್ತವ್ಯವುಂಟು ಎಂದು ಮುಂತಾಗಿ ಹೇಳುವವರೇ ಇನ್ನೊಂದು ಪ್ರಸಂಗದಲ್ಲಿ ' ಹೆಂಗುಸರ ಬುದ್ಧಿ ಅಡುಗೆಮನೆಯಲ್ಲಿ ' ಎಂದೂ ಹೀಯಾಳಿಸಿ ನುಡಿಯುವರು!

ನಮ್ಮ ಪಾಲಿನವೆಂದು ಹೇಳುವ ಮೇಲಿನ ಎರಡು ಕೆಲಸಗಳಲ್ಲಿ ಒಂದರ ಹೊಣೆಯನ್ನು ದೇವರೆ ನಮ್ಮ ಮೇಲೆ ಹೊರಿಸಿದ್ದಾನೆ, ಅಲ್ಲದೆ ಅದು ನಮ್ಮದೆ ಸ್ವಾಭಾವಿಕವಾದ ಕೆಲಸವೂ ಅಹುದು. ಜಗಳಗಂಟರೆಂದು ಹೆಂಗಸರಿಗೆ ಹೆಸರಿಡುವ ಗಂಡಸರು, ಹೊಡೆದಾಡಿ ಕಾದಾಡಿ ಜಗತ್ತನ್ನು ನಾಶಗೊಳಿಸುವ ಉದ್ಯೋಗದಲ್ಲಿ ಹೆಮ್ಮೆಯಿಂದ ಮುಂದುವರಿಯುತ್ತಿರುವರಾದರೂ ನಾವು ಮಾತ್ರ ಗಂಡಸರ ಈ ನಿಸರ್ಗವಿರುದ್ಧವಾದ ನಡೆವಳಿಯ ಅನುಕರಣಮಾಡದೆ, ಜಗತ್ತು ಅಜರಾಮರವಾಗಿರುವುದಕ್ಕೆ ನಮ್ಮ ಜೀವಗಳನ್ನೆ ಕುತ್ತಿಗೆ ಈಡು ಮಾಡಿಕೊಳ್ಳುತ್ತಿರುತ್ತೇವೆ. ಆದುದರಿಂದ ತನ್ನ ನಡೆಯೆ ಸರಿಯಿಲ್ಲದ ಒಬ್ಬರು ಮತ್ತೊಬ್ಬರಿಗೆ ಹೇಳುವ ಬುದ್ಧಿಯ ಮಾತುಗಳಿಗೆ ಏನು ಬೆಲೆ?

ಅಡುಗೆಯು ಬಹಳ ಪವಿತ್ರವಾದ ಕೆಲಸ; ಪರೋಪಕಾರದ ಕೆಲಸವೆಂದೂ ಗಂಡುಸರು ಕೆಲರು ಆಗ ಈಗ ಉಸುರುತ್ತಿರುವುದುಂಟು. ನಿಜವಾಗಿಯೂ ಪವಿತ್ರಕಾರ್ಯವೆ ಇದಾಗಿದ್ದರೆ ಅವರೆ ಏಕೆ ಇದನ್ನು ಕೈಕೊಂಡು ತಮ್ಮ ಜನ್ಮ ಸಾರ್ಥಕ್ಯವನ್ನು ಮಾಡಿಕೊಳ್ಳುವುದಿಲ್ಲ? ಹಾಗೆ ನೋಡಿದರೆ ಪೂರ್ವಪರಂಪರಾಭಿಮಾನಿಗಳೂ ಸನಾತನಿಗಳೂ ಆದ ಸಜ್ಜನ ಪುರುಷರು ನಳ-ಭೀಮಸೇನ-ಪ್ರಣೀತ ಈ ವಿದ್ಯೆಯನ್ನು ಹೆಂಗುಸರ ಕೈಗೆ ಹೋಗಗೊಡುವುದು ಬಹಳ ಅನ್ಯಾಯ; ಅಪಮಾನ. ಮನೆಯಲ್ಲಿ ಸಾಲಿಗ್ರಾಮ ಪೂಜೆ, ವೇದಾಧ್ಯಯನಾದಿ ವಿಷಯಗಳನ್ನು ತಮ್ಮ ಕೈಯಲ್ಲಿಯೆ ಇಟ್ಟುಕೊಂಡಂತೆ ಅಡುಗೆಯ ಮಹಾಕಾರ್ಯದ ಅಧಿಕಾರವನ್ನಾದರೂ ತಮ್ಮ ಕಡೆಗೆ ಇಟ್ಟುಕೊಳ್ಳುವುದು ಯುಕ್ತವಾಗಿದೆ. ಸ್ವಯಂ-ಪಾಕ ವ್ರತವು ಬಹಳ ಶ್ರೇಷ್ಠವಾದುದೆಂದು ವೈದಿಕ ಧರ್ಮಾಭಿಮಾನಿಗಳಿಗೆ ಬೇರೆ ಹೇಳಬೇಕಾಗಿಲ್ಲ. ನಿಜವಾಗಿಯೂ 'ಬಲ್ಲವರು' ಗಂಡುಸರೇ. ಆದುದರಿಂದ ಗಂಡುಸರೆಲ್ಲರೂ ಈ ಪ್ರಾಚೀನ ವ್ರತವನ್ನು ಕೈಕೊಂಡುದಾದರೆ ಪರಸೌಖ್ಯದ ಬಗ್ಗೆ ಏನು ನಿಶ್ಚಿತವಾಗಿ ಹೇಳಲಿಕ್ಕಾಗದಿದ್ದರೂ ಇಹಸೌಖ್ಯವು ಮಾತ್ರ ನಿಶ್ಚಿತವಾಗಿ ಲಭಿಸುವುದೆಂದು ನಾನು ಹೇಳಬಲ್ಲೆ. ಹೆಂಗುಸರು ಸಹ ತಮ್ಮ ಅಡುಗೆಯ ಹಕ್ಕು ಹೋಯಿತೆಂದು ಸತ್ಯಾಗ್ರಹವನ್ನು ಆರಂಭಿಸಲಿಕ್ಕಿಲ್ಲವೆಂದೂ ನಾನು ಆಶ್ವಾಸನವನ್ನು ಕೊಡಬಲ್ಲೆ.

ಅಡುಗೆಮನೆಯೆಂದರೆ ನನ್ನ ಮೈಗಂತೂ ಮುಳ್ಳುಬರುವುದು. ನಮ್ಮ ಹೆಣ್ಣುಜಾತಿಯ ಬುದ್ಧಿವಂತಿಕೆ, ಕಲ್ಪನಾಶಕ್ತಿ, ಪ್ರತಿಭೆಗಳೆಲ್ಲ ಒಲೆಯ ಮುಂದೆ ಕುಳಿತು ಕುಳಿತು ಸುಟ್ಟುಹೋಗಿವೆ; ನಮ್ಮ ಕಣ್ಣಲ್ಲಿ ಸೇರುವ ಅಲ್ಲಿಯ ಹೊಗೆಯಿಂದ ನಮ್ಮ ದೃಷ್ಟಿಯು ಮಂದವಾಗಿ ಹಿಂದುಮುಂದಿನದೇನೂ ತಿಳಿಯದಾಗಿದೆ. ನನಗಂತೂ ದಿನದಿನಕ್ಕೆ ಮನವರಿಕೆಯಾಗಹತ್ತಿದ ಮಾತೆಂದರೆ, ಹೆಂಗುಸರು ಮನುಷ್ಯರಲ್ಲಿ ಎಣಿಸಲ್ಪಡಬೇಕಾಗಿದ್ದರೆ ಅವರು ಮೊದಲು ಅಡುಗೆಮನೆಯಿಂದ ಹೊರಬರಬೇಕು. ಅಥವಾ ಅದನ್ನೆ ಹೀಗೂ ಹೇಳಬಹುದು. ಅಡುಗೆಮನೆಯನ್ನು ಕೆಡವಿಬಿಡುವ ವರೆಗೆ ಹೆಂಗುಸರ ಉದ್ಧಾರವಾಗಲಾರದು.

ಕೆಲರು ಕೇಳಬಹುದು. ಅಡುಗೆಮನೆಯಿಲ್ಲದೆ ಇದ್ದರೆ ಜನಗಳು ಬದುಕುವುದಾದರೂ ಹೇಗೆ, ಎಂದು. ಅದಕ್ಕೆ ನಾನು ಪ್ರತಿಯಾಗಿ ಹೀಗೆ ಕೇಳಬಹುದು. ದೇಹಕ್ಕೆ ಹೊಟ್ಟೆ ಇದೆಯೆಂದು ಮನೆಮನೆಗೂ ಅಡುಗೆಮನೆ ಇರಬೇಕೆನ್ನುವ

ಜನಗಳಲ್ಲಿ, ತಮಗೆ ತಲೆ (ಮನಸು) ಇದೆಯೆಂದು ಅದಕ್ಕಾಗಿ ಒಂದು ಪುಸ್ತಕ-ಕೋಣೆಯನ್ನೂ ಇಟ್ಟುಕೊಂಡಿರುವವರೆಷ್ಟು ಮಂದಿ? ಮನೆಯಲ್ಲಿ ಗ್ರಂಥ ಸಂಗ್ರಹವು (ಅಭ್ಯಾಸದ ಕೋಣೆ) ಇಲ್ಲದಿದ್ದುದಕ್ಕೆ ಯಾವ ಜನಗಳು ತಾವು ದನಗಳಾಗಿಲ್ಲವೋ, ಅವರು ಮನೆಮನೆಗೆ ಅಡುಗೆಮನೆ ಇಲ್ಲದುದಕ್ಕೆ ಸಾಯುವೆವೆಂದು ಭಾವಿಸಿಕೊಳ್ಳುವುದಾದರೂ ಏಕೆ?

ನಮ್ಮ ಗಂಡಸರು ಎಷ್ಟೋ ಮಂದಿ ಸಾರ್ವಜನಿಕ ಗ್ರಂಥಸಂಗ್ರಹಾಲಯಗಳಿಂದ ತಮಗೆ ಬೇಕಾದ ಪುಸ್ತಕಗಳನ್ನು ತಂದು ತಮ್ಮ ಬುದ್ಧಿಯ ಹಸಿವನ್ನು ಹಿಂಗಿಸಿಕೊಳ್ಳುವುದಿಲ್ಲವೆ? ಹಾಗೆಯೆ ನಮ್ಮ ಹೊಟ್ಟೆಯ ಹಸಿವನ್ನು ಹೋಗಲಾಡಿಸಿಕೊಳ್ಳುವುದಕ್ಕೆ ಸಾರ್ವಜನಿಕ ಪಾಕಗೃಹಗಳಿಂದಲೆ ಅಡುಗೆಯನ್ನು ತರಿಸಿ ಮಧ್ಯಾಹ್ನದ ಕೆಲಸವನ್ನು ಏಕೆ ಬಗೆಹರಿಸಿಕೊಳ್ಳಬಾರದು?

ಇದು ಸಹಕಾರ, ಸಂಘಗಳ ಯುಗ. ಸಾವುಕಾರಿಕೆಯು ವ್ಯಕ್ತಿಶಃ ಇದ್ದುದು ಈಗ ಬ್ಯಾಂಕುಗಳಂತಹ ಸಂಸ್ಥೆಗಳ ಕೈಗೆ ಹೋಗಿದೆ. ಒಕ್ಕಲತನವು ಸಹ ಎಕರೆ, ಗುಂಠೆಯ ತುಂಡು, ಪಟ್ಟಿಗಳಿಗಿಂತ ಸಾಮೂಹಿಕ ರೀತಿಯಲ್ಲಿ ಸಾಗಿಸಲ್ಪಟ್ಟರೆ ಆಧುನಿಕ ಟ್ರಾಕ್ಟರ ಮೊದಲಾದ ಯಂತ್ರಸಾಧನಗಳ ಲಾಭವನ್ನು ಪಡೆದು ಇದಕ್ಕೂ ನೂರಾರು ಪಟ್ಟು ಹೆಚ್ಚು ಹುಟ್ಟುವಳಿಯನ್ನು ಮಾಡಿಕೊಳ್ಳಬಹುದೆಂದು ಮೊನ್ನಿನ ಬೆಳಗಾಂವಿ ಒಕ್ಕಲತನದ ಪ್ರದರ್ಶನದಿಂದ ಕಂಡುಕೊಂಡುದಾಯ್ತು. ಹಿಂದಕ್ಕೆ ಧಾರವಾಡದಲ್ಲಿ ನೀರನ್ನು ಮನೆಮನೆಗೆ ತಾವೇ ಪೂರೈಸಿಕೊಳ್ಳಬೇಕಾಗುತ್ತಿದ್ದುದರಿಂದ ಆಗುತ್ತಿದ್ದ ಕಷ್ಟವನ್ನು ದೇವರೆ ಬಲ್ಲ. ನನ್ನನ್ನು ಧಾರವಾಡಕ್ಕೆ ಕೊಡುವುದಕ್ಕೆ ನಮ್ಮ ತಂದೆಯವರು ಸಿದ್ಧರಾಗಿದ್ದರೂ ತಾಯಿಗೆ ಅದು ಸ್ವಲ್ಪವೂ ಮನಸಿಗೆ ಬಾರದಿದ್ದುದಕ್ಕೆ ಕಾರಣವಾದರೂ ಏನು? ಆಯ್ತು; ಯಾವುದೇ ಮಹಾರಾಯರ ಪುಣ್ಯದಿಂದ ಕೆಲಗೆರೆಯ ರಾಡಿ ಅಂಬಲಿಯಂತಹ ನೀರೆ ಆಗಲೊಲ್ಲದೇಕೆ ನಮಗೆ ಸಹಜವಾಗಿ ದೊರೆಯಲಾರಂಭಿಸಿದುವು. ಧಾರವಾಡದಲ್ಲಿ ನೀರಿನ ಅರಬು ಇದ್ದಾಗ ಆ ಸುಡುಗಾಡ ನೀರನ್ನು—ಅಹುದು ಧಾರವಾಡದಲ್ಲಿ ಆಗ ಸುಡುಗಾಡ ನೀರೇ ಇದ್ದುವು; ಎಂದರೆ ಸ್ಮಶಾನದ ಹತ್ತರಿನ ಗಚ್ಚಿನ ಬಾವಿ ನೀರೇ ಎಲ್ಲರಿಗೂ—ತರುವುದಕ್ಕೆ ಎಷ್ಟೊಂದು ಜನರನ್ನು ನೀರು ಹೊರುವವರನ್ನು ಅರ್ಥಾತ್ ಬುದ್ದಿಗೇಡಿಗಳನ್ನು ಮಾಡಬೇಕಾಗುತ್ತಿದ್ದಿತು! ನೀರು ಹೊರುವುದು ಎಷ್ಟೋ

ಮುಟ್ಟಿಗೆ ತಪ್ಪಿದ್ದರಿಂದ ಅಷ್ಟು ಜನರಿಗೆಲ್ಲ ಬೇರೆ ಹೆಚ್ಚಿನ ಉದ್ಯೋಗ ಮಾಡಿ ತಮ್ಮ ಉನ್ನತಿಯನ್ನು ಮಾಡಿಕೊಳ್ಳುವುದಕ್ಕೆ ಇಂಬು ದೊರೆತಂತಾಗಲಿಲ್ಲವೇ ?

ಹಾಗೆ ಹೆಂಗುಸರಿಗೆ ಅಡುಗೆ ತಪ್ಪಿದರೆ ಎಷ್ಟು ಸೊಗಸಾದೀತು! ಅಡುಗೆ ಮನೆಯಲ್ಲಿ ಸಿಕ್ಕಿಕೊಂಡು ಬಿದ್ದಿರುವುದರಿಂದ ಹಿಂದೂ ದೇಶದ ಅರ್ಧ ಜನಾಂಗವು ಸುಮ್ಮನೆ ಒಲೆಯ ಮುಂದೆ ಸುಟ್ಟುಕೊಳ್ಳುತ್ತ ಕುಳ್ಳಿರಬೇಕಾಗಿದೆ! ಸಾರ್ವಜನಿಕ ಅಡುಗೆಮನೆಗಳಾಗಿ, ಈಗ ಡೇರಿಯಿಂದ ಹಾಲು, ನಳದಿಂದ ನೀರು, ಲೈಬ್ರರಿಗಳಿಂದ ಪುಸ್ತಕಗಳು ಬರುವಂತೆ ಊಟವನ್ನೂ ತರಿಸಿಕೊಳ್ಳುವ ಅನುಕೂಲತೆಯು ಆದರೆ ಹೆಣ್ಣುಮಕ್ಕಳಿಗೆ ತಮ್ಮ ಆತ್ಮವಿಕಾಸವನ್ನು ಮಾಡಿ ಕೊಳ್ಳಲು ಎಷ್ಟೊಂದು ಅನುವು ದೊರೆಯುವುದು! ಚಿತ್ರಕಲೆ, ಗ್ರಂಥಲೇಖನ, ಹೊಲಿಗೆ, ನೇಗಿ, ಶಿಶುಶಿಕ್ಷಣ, ವೈದ್ಯಕಿ ಮೊದಲಾದ ಹಲವು ಉಪಯುಕ್ತವಾದ ಕೆಲಸಗಳಲ್ಲಿ ಹೆಣ್ಣುಮಕ್ಕಳು ತಮ್ಮ ಆಯುಷ್ಯವನ್ನು ಸಾರ್ಥಕ ಮಾಡಿಕೊಳ್ಳ ಬಹುದು. ತಮ್ಮಲ್ಲಿರುವ ಒಂದು ಕಲೆ, ಒಂದು ವಿದ್ಯೆ, ಒಂದು ಕೌಶಲ್ಯವನ್ನು ಹೆಚ್ಚಿಸಿಕೊಂಡು ತಮಗೂ ಲೋಕಕ್ಕೂ ಕಲ್ಯಾಣವನ್ನು ಮಾಡಬಹುದು. ನಮ್ಮಲ್ಲಿ ಅಡುಗೆಯಮನೆಯಲ್ಲಿ ಕೊಳೆಯಬೇಕಾದುದರಿಂದ ಅದೆಷ್ಟು ಮ್ಯಾಡಂ ಕ್ಯೂರಿ, ಮಿಸ್ ಫ್ಲಾರೆನ್ಸ ನಾಯಿಟಂಗೇಲ, ಮಿಸ್ ಎಡಿತ್ ಸಿಟವೆಲ್‌ರಂತಹರು ಮೊಗ್ಗಿನಲ್ಲಿಯೆ ಬಾಡಿ ಒಲೆಯ ಜಳಕ್ಕೆ ಕಮರಿ ಹೋಗಿರುವರೊ, ಹೋಗುತ್ತ ಲಿರುವರೊ ಹೇಳಲಾಸಲ್ಲ! ಆದಕಾರಣ ನಮ್ಮ ನಾಡಿನ ಬೌದ್ಧಿಕ ಶಕ್ತಿಯ ಅರ್ಧ ಭಾಗವು ವ್ಯರ್ಥವಾಗಿ ಹಾಳಾಗುತ್ತಿರುವುದನ್ನು ಉದ್ಧರಿಸಬೇಕಾಗಿದ್ದರೆ ಅಡುಗೆಮನೆಯೆಂಬ ಸೆರೆಮನೆಯನ್ನು ಮೊದಲು ನೆಲಸಮ ಮಾಡಬೇಕು.

ಅಡುಗೆಮನೆ ಹಾಳಾದರೆ ಇನ್ನೂ ಒಂದು ಬಗೆಯಿಂದ ಹಿತವಾಗತಕ್ಕು ದಿದೆ. ದಿನದಿನಕ್ಕೂ ಶಾಸ್ತ್ರೀಯ ಜ್ಞಾನವು ಹೆಚ್ಚಾಗುತ್ತಲಿದೆ. ಒಂದು ಅಡುಗೆ ಯೆಂದರೆ, ಒಂದಿಷ್ಟು ಹಿಟ್ಟು ಬೇಳೆ ತಕ್ಕೊಂಡು ಅವನ್ನಿಷ್ಟು ಕುಚ್ಚಿಟ್ಟರೆ ಕೆಲಸವು ತೀರಲಿಲ್ಲ. ಅಡುಗೆಯಲ್ಲಿಯೂ ಅನೇಕ ಸುಧಾರಣೆಗಳು ಆಗಬೇಕಾ ಗಿವೆ. ಋತುಗಳಿಗೆ ಅನುಸರಿಸಿ, ಆರೋಗ್ಯಮಾನಕ್ಕನುಸರಿಸಿ ಅಡುಗೆಯಲ್ಲಿ ಕಾಲಕಾಲಕ್ಕೆ ತಕ್ಕ ವ್ಯತ್ಯಾಸಗಳನ್ನು ಮಾಡುವುದಕ್ಕೆ ಹೊಸ ಶಾಸ್ತ್ರೀಯ ಪದ್ಧತಿಯನ್ನು ಬಲ್ಲ ಮೇಲ್ವಿಚಾರಕರು ತಮ್ಮ ಕೈಕೆಳಗೆ ಬಲ್ಲವರನ್ನು ಕೆಲಸಕ್ಕೆ ನೇಮಿಸಿಕೊಂಡು ನಡೆಯಿಸಿದ ಸಾರ್ವಜನಿಕ ಪಾಕಶಾಲೆಯಷ್ಟು ಸ್ವಚ್ಛವಾದ

ಸಶಾಸ್ತ್ರೀಯವಾದ ಊಟದ ಜೀನಸುಗಳು ಮನೆಯಲ್ಲಿ ಸಿದ್ಧವಾಗುವುದು ಸ್ವಲ್ಪ ಕಷ್ಟ. ಹೊಗೆಯ ಲವಲೇಶವೂ ಇಲ್ಲದ ಹೊಸ ಪದ್ಧತಿಯ ಒಲೆಯ ಮೇಲೆ ಮಾಡಲ್ಪಡುವ ಅಡುಗೆಗೆ ಸಾಮಾನ್ಯ ಮನೆಗಳಂತೆ ಹೊಗೆಸುತ್ತಿನ ವಾಸನೆ ಬರುವ ಸಂಭವವಿಲ್ಲ. ಆರೋಗ್ಯದ ನಿಯಮ, ಸ್ವಚ್ಛತೆಯ ಕಲ್ಪನೆಯೆ ಇಲ್ಲದೆ ಬೇಕಾದಂತಹ ಪಾತ್ರೆಗಳಲ್ಲಿ, ಬೇಕಾದ ಹಾಗೆ ಕೈ ಅದ್ದಿ ಮಾಡುವ ಅಡುಗೆಗಿಂತ ಯಂತ್ರಗಳ ನೆರವಿನಿಂದಲೆ ಸಿದ್ಧವಾಗುವ ಪದಾರ್ಥಗಳು ಹೆಚ್ಚು ಶುಚಿಯಾಗಿರುವುದುಂಟು. ನಮ್ಮ ಜನಸಾಮಾನ್ಯರಿಗೆ ಪದಾರ್ಥಗಳನ್ನು ಹೆಚ್ಚು ಮಸಾಲೆ ಹಾಕಿ, ಅಥವಾ ಹೆಚ್ಚು ಸಿಹಿ ಮಾಡಿ ತಿನ್ನುವ ಚಟವಿದ್ದು ಇದರಿಂದ ಸುಮ್ಮನೆ ಅನಾರೋಗ್ಯಕ್ಕೆ ಗುರಿಯಾಗುತ್ತಲಿರುವರೆಂದು ಡಾಕ್ಟರುಗಳ ಅಭಿಪ್ರಾಯವಿದೆ. ಊರಿಗೊಂದು ಒಳ್ಳೆ ಪಾಕಶಾಲೆಯಿದ್ದು ಅದು ಶಾಸ್ತ್ರೀಯ ರೀತಿಯಿಂದಲೂ ರಾಷ್ಟ್ರೀಯ ಭಾವನೆಯಿಂದಲೂ ನಡೆಯಿಸಿದ್ದಾದರೆ ನಮ್ಮ ಜನರ ಆರೋಗ್ಯಾಭಿವೃದ್ಧಿಯಾಗಿ ಹಿಂದೂ ಜನರ ಆಯುರ್ಮಾನವೂ ಹೆಚ್ಚಾಗದಿರಲಾರದು.

ಆರ್ಥಿಕ ಸಂಕಷ್ಟದ ಈಗಿನ ಕಾಲದಲ್ಲಿ ಇನ್ನೂ ಒಂದು ದೃಷ್ಟಿಯಿಂದಲೂ ಈ ಸಾರ್ವಜನಿಕ ಅಡುಗೆಮನೆಗಳಾಗುವುದು ಅವಶ್ಯವೆಂದು ತೋರುತ್ತದೆ. ಒಂದು ಪದಾರ್ಥವನ್ನು ಸಣ್ಣ ಪ್ರಮಾಣದಲ್ಲಿ ಸಿದ್ಧಪಡಿಸಲು ಬರುವ ವೆಚ್ಚಕ್ಕಿಂತ ಅದನ್ನೇ ಬಹಳ ದೊಡ್ಡ ಪ್ರಮಾಣದಲ್ಲಿ ತಯಾರಿಸಿದರೆ ಎಷ್ಟೋ ಪ್ರಮಾಣದಿಂದ ವೆಚ್ಚವು ಕಡಿಮೆ ಬರುತ್ತದೆಂದು ಎಲ್ಲರ ಅನುಭವದ ಮಾತು. ಆದಕಾರಣ ಸಾರ್ವಜನಿಕ ಪಾಕಶಾಲೆಗಳು ಅಸ್ತಿತ್ವದಲ್ಲಿ ಬಂದರೆ ಬಡಬಗ್ಗರಿಗೆ ಈಗಿನಕಿಂತಲೂ ಕಡಿಮೆ ವೆಚ್ಚದಿಂದ ಬದುಕುವುದಕ್ಕೆ ಅನುಕೂಲವಾಗುವುದಲ್ಲದೆ ಅವರ ಹೆಣ್ಣುಮಕ್ಕಳಿಗೆ ಬಿಡುವು ಹೆಚ್ಚು ದೊರೆತು ಅವರಿಗೆ ಬೇರೆ ಕೆಲಸಗಳನ್ನು ಕೈಕೊಂಡು ತಮ್ಮ ಹುಟ್ಟುವಳಿಯನ್ನು ಹೆಚ್ಚಿಸಿಕೊಳ್ಳಲು ಆಸ್ಪದವು ದೊರೆಯುವಂತಿದೆ.

ಆದುದರಿಂದ ನಮ್ಮ ರಾಷ್ಟ್ರೀಯ ಸರಕಾರದ ಈ ಕಾಲದಲ್ಲಿ ನಮ್ಮ ಸೋದರಿಯರು ಮನೆಮನೆಗಳಲ್ಲಿ ಅಡುಗೆ ಮಾಡಲಾಗದೆಂಬರ್ಥದ ಒಂದು ಬಿಲ್ಲನ್ನು ತಂದು ಬೇಗನೆ ಹೊಸ ಕಾಯಿದೆ ಮಾಡಿಸಿಕೊಂಡು ನಮ್ಮ ನಾಡಿನ ಏಳ್ಗೆಗೆ ನೆರವಾಗಬೇಕೆಂದು ಬೇಡಿಕೊಳ್ಳುತ್ತೇನೆ. —'ಒರ್ವ ನವಯುವತಿ'

ಜಯಂತಿ, ಮೇ ೧೯೩೪.

# ಹೆಣ್ಣಿನ ವ್ಯಕ್ತಿತ್ವದ ನಿಜವಾದ ವಿಕಾಸವು ತಾಯ್ತನದಲ್ಲಿದೆ

( ಉತ್ತರ )

'ಜಯಂತಿ'ಯ ಮೊದಲನೆಯ ಸಂಚಿಕೆಯಲ್ಲಿ ಬಂದ 'ಮನೆ ಮನೆಗೆ ಅಡುಗೆಯ ಮನೆಗಳು ಬೇಕೆ?' ಎಂಬ ವಿವಾದಾತ್ಮಕವಾದ ಲೇಖನದ ಬಗ್ಗೆ ನಿಮ್ಮ ಅಭಿಪ್ರಾಯ-ವೇನೆಂದು ಸಂಪಾದಕರು ಕೇಳಿದರು. ನಾನೆಂದೆ: 'ಗಂಡು ಸರ ಅಭಿಪ್ರಾಯವನ್ನು ಕೇಳುವ ಕಾರಣವೆ ಇಲ್ಲ; ಏಕೆಂದರೆ ಯಾವ ಗಂಡುಸು ತಾನೆ, ತನ್ನ ಹೆಂಡತಿಯ ಕೈಯ ಸವಿಯೂಟವನ್ನು ಉಣ್ಣಲು ಹಾತೊರೆಯಲಿ ಕ್ಕಿಲ್ಲ? ಹೆಂಗುಸರ ಅಭಿಪ್ರಾಯಗಳೇನಾದರೂ ತಿಳಿದಿವೆಯೆ?'

ಅಡುಗೆಯ ಕಾಟ ತಪ್ಪುವ ಸುವರ್ಣಯುಗವು ಬಂದರೆ ಎಷ್ಟೋ ಹೆಂಗ ಸರು ಹಿಗ್ಗದಿರಲಾರರು; ಆದುದರಿಂದ ಅಂತಹ ವಿಚಾರಗಳ ಪ್ರಚಾರಕ್ಕೆ ಆರಂಭವಾದುದನ್ನು ನೋಡಿ— ಜಯಂತಿಯಲ್ಲಿ ಅಂತಹ ಲೇಖನವನ್ನೋದಿ ಹಿಗ್ಗಿದವರು ಹಲವರುಂಟು. ಅದರಂತೆ ಆ ಲೇಖನವನ್ನೋದಿ ಅಸಹ್ಯಪಟ್ಟ ವರೂ ಕಡಿಮೆ ಇಲ್ಲವೆಂದು ಸಂಪಾದಕ ಮಹಾಶಯರು ಹೇಳಿದರು.

ಆದರೆ ಬಾಯಿಮಾತಿನಿಂದ ಮಾತ್ರ ವಿರೋಧವನ್ನು ವ್ಯಕ್ತಪಡಿಸಿದ ಮಹಿಳೆಯರು ಅದನ್ನು ಬರೆದು ಕಳುಹದೆ ಇದ್ದುದನ್ನು ನೋಡಿದರೆ, ಒಳ ಗೊಳಗೆ ಅವರೂ ಅಡುಗೆಮನೆಯ ಕಡುಹಗೆಗಳ ಕೂಟಕ್ಕೆ ಸೇರಿದವರೇ ಇರ ಬಹುದೇನೊ ಎಂಬ ಸಂದೇಹವುಂಟಾಗುತ್ತಲಿದೆ. ಈ ವಿಷಯದಲ್ಲಿ ಕೆಲವು ಹೆಣ್ಣುಮಕ್ಕಳು ತಮ್ಮ ತಮ್ಮೊಳಗೆ ಚರ್ಚೆನಡೆಸಿದಾಗಿನ ಒಂದು ದೃಶ್ಯವು ಒಮ್ಮೆ ಕಣ್ಣಿಗೆ ಬಿದ್ದಿತು. ಅಡುಗೆ ಮನೆಯ ಪಕ್ಷವನ್ನೆತ್ತಿ ಮಾತಾ ಡುವವರಿಗೆಲ್ಲ ಎದುರಾಳಿಯಾಗಿದ್ದವಳು ಆಡಿದ ಮಾತು ಎದೆಯಲ್ಲಿ ನೆಟ್ಟು ಬೆನ್ನಿನಿಂದ ಹೊರಬೀಳುವಂತಿದೆ: "ಏನಿರೀ, ನೀವೆಲ್ಲ ಅಡುಗೆಮನೆಯಲ್ಲಿ ಹುದುಗಿಕೊಳ್ಳಲು ಇಷ್ಟು ಆತುರಪಡುತ್ತಿದ್ದೀರಲ್ಲ. ಏತಕ್ಕೆ ಗೊತ್ತೆ? ಹೇಡಿ ತನ ಅಥವಾ ಗಂಡಸರ ಹೆದರಿಕೆಯಲ್ಲದೆ ಬೇರಾವ ಕಾರಣವೂ, ಇಲ್ಲ ಇದಕ್ಕೆ. ನಿಮ್ಮ ಮನಸ್ಸಿನ ಆಳವನ್ನು ನೀವೆ ಅರಿತಿಲ್ಲ; ನಿಮ್ಮ ಮನಸ್ಸಿನ ಅಂತರಾಳದಲ್ಲಿ ಹೊಕ್ಕು ನೋಡಿದರೆ, ನಿಮಗೂ ಅಡುಗೆಮನೆಯ ಹೊರಗೆ, ಹೊಗೆಯ ಲವಲೇಶವೂ ಇಲ್ಲದ, ಸ್ವಚ್ಛ ವಾತಾವರಣದ ಪ್ರೀತಿಯು ಇಲ್ಲದಿಲ್ಲ."

ಅಡುಗೆಮನೆಗಳು ಇರಲೇಕೂಡದೆಂದು 'ಒರ್ವ ನವಯುವತಿ'ಯು ಬರೆದ ಲೇಖನವನ್ನೋದಿ ಹೆಣ್ಣುಮಕ್ಕಳಿಗೆ ಕೆಲವರಿಗೆ ಬಂದ ಸಿಟ್ಟಿಗಿಂತಲೂ ಎಷ್ಟೊ ಗಂಡಸರಿಗೆ ಆದ ವಿಷಾದವು ಎಷ್ಟೊ ಪಟ್ಟು ಹೆಚ್ಚಾಗಿದೆ. 'ಅಡುಗೆಮನೆಯು ಹೋದರೆ ಧರ್ಮವೆ ಮುಳುಗುವುದು, ಆರ್ಯಸಂಸ್ಕೃತಿಯು ಹಾಳಾಗುವುದು' ಎಂದು ಮುಂತಾಗಿ ನಿಡುಸುಯ್ಯುವವರುಂಟು. ಆದರೆ ಈ ಸಮಸ್ಯೆಯನ್ನು ನಾನು ಈ ಬಗೆಯ ಭಾವನಾತ್ಮಕ ದೃಷ್ಟಿಯಿಂದ ನೋಡುವುದಿಲ್ಲ. ಗಂಡಸರೆ ಹೆಣ್ಣುಮಕ್ಕಳನ್ನು ಅಡುಗೆಯ ಮನೆಯಲ್ಲಿ ಕೋಳಿಹಾಕಿರುವರೆಂದು ಸ್ತ್ರೀವರ್ಗದ ಭಾವನೆಯಾಗಿ, ಅವರು ಅವನ್ನು ಕೆಡಹುವುದಕ್ಕೆ ಹೊರಟಿದ್ದರೆ ಅತ್ಯಗತ್ಯವಾಗಿ ನೆಲಸಮಮಾಡಿಬಿಡಲಿ. ನಿಜವಾಗಿ ನೋಡಿದರೆ ಮನೆಯನ್ನು (ಅದರಲ್ಲಿ ಅಡುಗೆ ಮನೆಯೂ ಉಂಟು) ಮೊದಲು ಸಿಲ್ಲಿಸಿದವಳು ಸ್ತ್ರೀಯು. ಗಂಡಸು ನೆಲೆಯಾಗಿ ನಿಲ್ಲುವ ನೆಚ್ಚಿಕೆಯ ಪ್ರಾಣಿಯಲ್ಲ. ಹೂವಿನಿಂದ ಹೂವಿಗೆ ಅಲೆವ ತಿರುಗಲನು ಗಂಡಸು; ಅವನನ್ನು ತನ್ನ ಒಲವುನಲಿವುಗಳ ಮಾಟದಿಂದ ಮನೆಯಲ್ಲಿಕಾಲುಕಟ್ಟಿ ನಿಲ್ಲಿಸಿದವಳು ಹೆಂಗಸು,. . ಎಂದು ಸಮಾಜಶಾಸ್ತ್ರಜ್ಞರ ಸಿದ್ಧಾಂತಕ್ಕೆ ಪ್ರಾಚೀನ ಸ್ಥಿತಿಗತಿಗಳ ಸಂಶೋಧಕರ ಬೆಂಬಲವೂ ಇದೆ. ಆದುದರಿಂದ ಮನೆಯನ್ನು (ಅದರೊಡನೆ ಅಡುಗೆ ಮನೆಯನ್ನೂ) ಹುಟ್ಟಿಸಿದ ಶ್ರೇಯಸ್ಸು ಅಥವಾ ಅಪ ಶ್ರೇಯಸ್ಸೂ ಹೊಣೆಗಾರಿಕೆಯೂ ಹೆಣ್ಣುಮಕ್ಕಳ ಪಾಲಿಗೆ ಇದೆ. ಆಗ ಅದುಗೆ ಮನೆಕಟ್ಟಿದವರೇ ಈಗ ಕೆಡಹಲು ಹೊರಟ ಕಾರಣವೇನು ಮತ್ತೆ? ಇದಕ್ಕೆ ಎರಡು ಕಾರಣಗಳು: ಕ್ರಿಯೆಗೆ ಪ್ರತಿಕ್ರಿಯೆ ಎಂಬ ಅಬಾಧಿತವಾದ ಸಿದ್ಧಾಂತವನ್ನಿಲ್ಲಿ ಕಾಣಬಹುದು. ಮನುಷ್ಯನು ಒಮ್ಮೆ ಬಯಸುವನು; ಅದು ಕೈಗೆ ಬಂದೊಡನೆ ಅದರಲ್ಲಿ ಬೇಸರವುಂಟಾಗುವುದು. ಒಂದು ವ್ಯಾಪಾರ ವನ್ನೋ ಉದ್ಯೋಗವನ್ನೊ ಮೊದಲು ಹಮ್ಮುವನು; ಮೊದಮೊದಲು ಅದನ್ನೆ ಹಾಸಿ ಅದನ್ನೆ ಹೊದ್ದುಕೊಳ್ಳುವುದರಲ್ಲಿ ಹಿಗ್ಗುಗೊಳ್ಳುವ ಮಾನವನಿಗೆ ಮುಂದೆ 'ತಾನು ಇದರಲ್ಲಿ ಸಿಕ್ಕಿಬಿದ್ದಿರುವೆನು ಸೆರೆ ಸಿಕ್ಕಿರುವೆನು' ಎಂಬ ಸಂದೇಹವುಂಟಾಗಿ (ಕೆಲಮಟ್ಟಿಗೆ ಅದು ನಿಜವಿರುವುದುಂಟು) ಮೊದಲು ತಾನು ಹಮ್ಮಿದುದನ್ನೆ ಮುರಿದುಹಾಕಲು ಹಂಬಲಿಸುವನು; ಇದು ಮನುಷ್ಯ ಸ್ವಭಾವ. 'ನವಯುವತಿ'ಯರು ಅಡುಗೆಯ ಮನೆಗಳನ್ನು ನೆಲಸಮ ಮಾಡಹೊರಟುದು ಈ ಕಾರಣದಿಂದಲೂ ಇರಬಹುದು.

ಅಥವಾ ಇನ್ನೊಂದು ಕಾರಣವಿದು: ಗೆಳೆತನದಲ್ಲಿ ಇಬ್ಬರು ಗೆಳೆಯರು ಒಬ್ಬರೊಬ್ಬರನ್ನು ಅನುಕರಿಸುವುದರಿಂದ ಅವರ ಸ್ವಭಾವಗಳು ಅದಲು ಬದಲಾದುದನ್ನು ಕಾಣುತ್ತೇವೆ. ಯಾರು ಯಾವುದನ್ನು ಧ್ಯಾನಿಸುವರೊ ಅದೆ ಅವರಾಗುವರು. ಗಂಡು-ಹೆಣ್ಣಿನ ಹಲವು ಕಾಲದ ಗೆಳೆತನ, ಪರಸ್ಪರ ಚಿಂತನ ಮತ್ತು ಸತತವಾದ ಸನ್ನಿಧಾನದಿಂದ ಎಷ್ಟೋ ಮಟ್ಟಿಗೆ ಅವಳ ಸ್ವಭಾವವು ಇವನಲ್ಲಿ, ಇವನ ಸ್ವಭಾವವು ಅವಳಲ್ಲಿ ಒಡಮೂಡಿದ್ದುದು ನಿಜ. ಇದರ ಫಲಿತವೆಂದರೆ ಅಲೆದಾಟಕ್ಕೆ ಮೆಚ್ಚಿದ್ದ ಗಂಡುಮನೆಯನ್ನು ಬಯಸು ತ್ತಿದೆ; ಹುಟ್ಟಾ 'ಸ್ಥಿರೆ'ಯೆಂದು ಸಿದ್ಧವಾದ ಹೆಣ್ಣು ಮನೆಯಿಂದ ಹೊರಬಿದ್ದು ಹಾರಾಡಲು ಹಂಬಲಿಸುತ್ತಿದೆ. ಕೆಲವೊಂದು ಅನುಭವವು ಬರುವವರೆಗೆ ಎಂದರೆ ತಲೆಗೆ ಬಡೆಯುವವರೆಗೆ ಇದು ಅನಿವಾರ್ಯ.

'ಮನುಸ್ಮೃತಿಯಲ್ಲಿ ಹೇಳಿದೆ, ಆದುದರಿಂದ ಹೆಣ್ಣೆಂಬುದು ಮನೆಯ ಲ್ಲಿಯೆ ತೊಡಕಿಕೊಂಡಿರಬೇಕು,' ಎಂದು ಎಷ್ಟು ಕಿರಿಚಿಕೊಂಡರೂ ಈಗಿನ ಓಘವು ಒಮ್ಮೆಲೆ ತಿರುಗುವುದು ಸಾಧ್ಯವಿಲ್ಲ. ಅದಕ್ಕೆ ಸ್ವಲ್ಪಕಾಲವು ಬೇಕು. ಅಷ್ಟರಲ್ಲಿ ಗಂಡಸೂ ತನ್ನ ಮಾತಿನ ರೀತಿಯನ್ನು ಬದಲಿಸಿಕೊಳ್ಳಲು ಕಲಿಯ ಬೇಕು. 'ಹೆಂಗಸು ಮನೆಯಲ್ಲಿ ಅಂಟಿಕೊಂಡಿರಬೇಕು' ಎಂದು ಹಟ ಹಿಡಿಯದೆ ಅಂಟಿಕೊಂಡಿರುವುದು ಸಾಕೆಂಬ ವಿಚಾರಕ್ಕೆ ಬರಬೇಕು. ಜಗತ್ಪ್ರವಾಹವು ನಡೆದಿರುವುದು ಯಾರ ಹೊರಗಣ ಕಟ್ಟುಕಟ್ಟಳೆಗಳಿಂದಲ್ಲ; ಸೃಷ್ಟಿಯು ಎಲ್ಲವನ್ನೂ ತನ್ನ ಅಂಕೆಯಲ್ಲಿಟ್ಟುಕೊಂಡಿದೆ. ಮನುವಿನ ಆಜ್ಞೆ ಯನ್ನು ಉಲ್ಲಂಘಿಸಬಹುದು. ಆದರೆ ಮಾನವಧರ್ಮವನ್ನು ಮಾತ್ರ ಯಾರಿಂದಲೂ ಮೀರಿಹೋಗುವುದಕ್ಕಾಗಲಿಕ್ಕಿಲ್ಲ; ಏಕೆಂದರೆ ಅದು ಮಾನವನ ಮಾತಲ್ಲ, ಸೃಷ್ಟಿನಿಯಮ; ಶಾಶ್ವತವಾದ ಸನಾತನ ಸತ್ಯದ ಅವಜ್ಞೆಯನ್ನು ಮಾಡಿ ಬದುಕುವುದು ಸಾಧ್ಯವಿಲ್ಲ.

ಹೆರಿಗೆಯ ಹೊಣೆಯು ಎಲ್ಲಿಯವರೆಗೆ ಹೆಂಗುಸಿನ ಮೇಲಿದೆಯೊ ಅಲ್ಲಿಯವರೆಗೆ ಹೆಂಗಸು, ಗಂಡುಸಿನಂತೆ ಸಿಕ್ಕಲ್ಲಿ ಸಿಕ್ಕಂತೆ ಅಲೆದಾಡಲು ಆರಳು. ಮಕ್ಕಳನ್ನು ಪಡೆದು ಅವುಗಳನ್ನು ಲಾಲಿಸಿ ಪಾಲಿಸಿ, ತನ್ನ ಅಮೃತ ಹಸ್ತದಿಂದ ಮುಂಡಾಡಿ, ಪ್ರಪಂಚಕ್ಕೆಲ್ಲ ಚಿರಂಜೀವಿಯಾಗೆಂದು ಹರಸಿ ಅದನ್ನು ಸಾರ್ಥವಾಗಿ ಮಾಡುವ ತಪಃಸಾಮರ್ಥ್ಯವು ಹೆಣ್ಣಿನಲ್ಲಿದೆ.

ಈ ಸಾಮರ್ಥ್ಯವನ್ನು ಸಂಪಾದಿಸಲು ಮಾಡಬೇಕಾದ ತಪಸ್ಸಿಗೆ ಅಲೆದಾಟವು ಬಾಧಕ. ತಪಸ್ಸಿ ಎಂಬುದಕ್ಕೆ ಕಂನುಡಿಯಲ್ಲಿ 'ಕಿತ್ತಡಿ' ಎಂಬ ಮೇಳದ ಮಾತಿದೆ. ಕಿರಿದು ಅಡಿಯುವರೆ ಕಿತ್ತಡಿ-ತಪಸ್ಸಿ. ಜಗತ್ತಿಗೆ ಅ-ಮಾರತ್ನ ವನ್ನು ಸಂಪಾದಿಸಿಕೊಡುವ ಭಾಗ್ಯವು ಹೆಣ್ಣಿನ ಪಾಲಿಗಿದೆ. ಆದರೆ ಕೆಲ ವೊಂದು ಸಂದರ್ಭದಲ್ಲಿ ಮನುಷ್ಯರ ಅಥವಾ ಪರಿಸ್ಥಿತಿಯ ತಪ್ಪಿನಿಂದ ಈ ಸೌಭಾಗ್ಯವೆ ಬಂಧನಕಾರಕವಾಗುವುದನ್ನು ನೋಡಿ, ಆಗುವ ತಪ್ಪನ್ನು ತಿದ್ದಿಕೊಳ್ಳುವುದಕ್ಕಷ್ಟೆ ಯುಕ್ತಿಯಿಸದೆ, ಮೂಲತಃ ತನ್ನ ಮೇಲಿದ್ದ ಹೊಣೆ ಯನ್ನೇ ತಪ್ಪಿಸಿಕೊಳ್ಳಲು ಹವಣಿಸುವುದು ಮಾತ್ರ ಆತ್ಮಘಾತವಾಗಿದೆ.

ಒರ್ವ 'ನವಯುವತಿ'ಯು ಅಡುಗೆಯ ಮನೆಯನ್ನು ಕೆಡುಹ ಬೇಕೆಂದು ಬರೆದುದು ಬಹಳ ಅರ್ಥಪೂರ್ಣವಾದ ಸಮಸ್ಯೆಯಾಗಿದೆ. ಅದು ಬರಿ ಅಡುಗೆಯ ಮನೆಯು ಮಾತ್ರಲ್ಲ. ಅಡುಗೆ ಮನೆಯೆಂಬುವಲ್ಲಿ ಸ್ತ್ರೀಯರ ಜೀವನದ ತೊಡಕುಗಳೆಲ್ಲವೂ ಸೇರಿಕೊಂಡಿವೆ. ಈಗ ಹೆಣ್ಣುಮಕ್ಕಳಿಗೆ ಮನೆ ಹಿಡಿದುಕೊಂಡಿರಬೇಕಾದುದು ಮುಖ್ಯವಾಗಿ ಅಡುಗೆಗಾಗಿ. ಹೊರಗೆ ಉಪ ನ್ಯಾಸಗಳು, ಪ್ರದರ್ಶನಗಳು, ಆಟ-ನೋಟಗಳು ಮೊದಲಾದ ಬೇಕಾದ ಹಿಗ್ಗು ಹೆಗ್ಗಳಿಕೆಯ ಪ್ರಸಂಗಗಳಿರಲಿ; ಸಂಜೆ-ಮುಂಜಾವಿನ ಅಡುಗೆಯ ನಿಮಿತ್ತದಿಂದ ಹೆಂಗಸು ಮನೆಯಲ್ಲಿರಬೇಕಾಗಿ, ಮೇಲ್ಕಾಣಿಸಿದ ಬಗೆಯ ಆನಂದೋತ್ಸವಗಳಿಗೆ ಅವರು ಎರವಾಗ ಬೇಕಾಗುತ್ತದೆ. ಇದು ಒಂದು ವ್ಯಾವಹಾರಿಕ ರೀತಿಯಲ್ಲಿ ಆಗಾಗ ಹೇಳುವ ದೊಡ್ಡ ಕಾರಣ. ಇದರೊಂದಿಗೆ ಅಷ್ಟು ಸ್ಪಷ್ಟವಾಗಿ ಆಡಲಿಕ್ಕೆ ಅಸಿಮಿಸಿಗೊಳ್ಳುವ ಬೇರೆ ಕೆಲವು ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದುದೊಂದು ಚಿಳ್ಳೆಪಿಳ್ಳೆಗಳ ಜಂಜಡ. ಅಡುಗೆಮನೆ ಬೇಡವೆಂದರೆ ಅದರಲ್ಲಿ ಈ 'ಚ್ಯಾ ಪ್ಯಾಂ'ಗಳ ಗಲಾಟೆಯೂ ಬೇಡವೆಂಬ ಒಳಧ್ವನಿಯೂ ಕೇಳಬರುತ್ತಲಿದೆ. ಅದು ನಿಜ. ಏಕೆಂದರೆ ಹೆಂಗುಸು ಮನೆ ಯಲ್ಲಿ ಹೆಚ್ಚಾಗಿ ನಿಂತುಕೊಳ್ಳ ಬೇಕಾಗುತ್ತಿದ್ದುದು ಶಿಶುಸಂಗೋಪನದ ಹೊಣೆಯು ಅವಳ ಮೇಲಿದ್ದುದರಿಂದಲೆ. ಮನೆಯಲ್ಲಿರಬೇಕಾದ ಬಳಿಕ ಅಲ್ಲಿಯೆ ಇದ್ದುಕೊಂಡು (ಮಕ್ಕಳು ಮರಿಗಳನ್ನು ಆಡಿಸುತ್ತ) ಮಾಡಲು ಬರುವ ಗೃಹವ್ಯವಸ್ಥೆಯ ಅಧಿಕಾರವು ಅವಳ ಕಡೆಗೆ ಬರುವುದು ಕ್ರಮಪ್ರಾಪ್ತ

ವಾಗಿದೆ. ಅದುದರಿಂದಲೆ ಅಡುಗೆಮನೆಯ ಒಡೆತನವು ಹೆಂಗುಸಿನದೆಂಬ ರೂಢಿಯು ಅನಂತಕಾಲದಿಂದ ನಡೆದು ಬಂದಿದೆ.

ಗಂಡುಸು ಈ ಪರಿಸ್ಥಿತಿಯ ಲಾಭಪಡೆದುಕೊಂಡು, ಹೆಂಗುಸನ್ನು ಮನೆಯಲ್ಲಿ—ಅಡುಗೆ ಮನೆಯಲ್ಲಿಯೆ ತುರುಕಿಡುವುದಕ್ಕೆ ಹವಣಿಸಿದುದೂ ಸುಳ್ಳಲ್ಲ. ಅಂದಚೆಂದದ ಗರಿಗಳಿಗಾಗಿ ಬಂಧನಕ್ಕೊಳಗಾಗಬೇಕಾಗುವುದೆಂಬ ಅರಿವು ಉಂಟಾದರೆ, ನವಿಲು ತನ್ನ ಪುಚ್ಛಗಳನ್ನು ಒಂದರಗಳಿಗೆಯಾದರೂ ಇಟ್ಟುಕೊಳ್ಳಲು ಸಿದ್ಧವಾಗಲಿಕ್ಕಿಲ್ಲ. ಹೆಣ್ಣು ಮನುಷ್ಯ! ಮನುಷ್ಯನೆಂದರೆ ಬರಿ ಗಂಡುಸೆ ಅಲ್ಲ! ಹೆರಿಗೆಯಹೊಣೆಯು ಹೆಣ್ಣಿನ ಪಾಲಿಗೆ ಬಂದ ತಪ್ಪಿಗಾಗಿಯೆ ಅದು, ತನಗೆ ಮನೆಯೆಂಬ ಸೆರೆಯಲ್ಲಿ ಸಿಕ್ಕಿಬೀಳಬೇಕಾಗುವುದೆಂಬ ತಿಳಿವು ತಲೆದೋರಿದೊಡನೆಯೆ, ಅದರೊಳಗಿಂದ ಹೊರಬೀಳುವ ಎತ್ತುಗಡೆಯನ್ನು ನಡೆಯಿಸಿದ್ದರೆ ಸೋಜಿಗವೇನು? ಸಂತಾನನಿರೋಧದ ಕೃತ್ರಿಮ ಸಾಧನಗಳು ಸುಲಭವಾಗಿ, ಬೇಕಾದ ಹಾಗೆ ಸಿಕ್ಕಲಾರಂಭಿಸಿದ ಬಳಿಕ, ಹೆಣ್ಣಿನ ಈ ಪ್ರಯತ್ನಗಳಿಗೆ ಒಂದುಬಗೆಯ ವಿಶೇಷ ಮೂರ್ತಸ್ವರೂಪವು ಬರಲಾರಂಭಿಸಿದೆ.

ಭೌತಿಕಶಾಸ್ತ್ರಸಂಶೋಧಕರು, ಹೆಣ್ಣುಮಕ್ಕಳಿಗೆ ಇನ್ನೂ ಒಂದು ಬಗೆಯಿಂದ ಈ ವಿಚಾರದಲ್ಲಿ ತಾವು ನೆರವಾಗುವೆವೆಂದು ಕನವರಿಸುತ್ತಲಿದ್ದಾರೆ; ಈ ಶಾಸ್ತ್ರಜ್ಞರಿಗೆ ನಮ್ಮ ಪೌರಾಣಿಕ ಕಥೆಗಳೇ ಈ ಬಗೆಯ ಸ್ಫೂರ್ತಿಯನ್ನು ಕೊಟ್ಟಿದ್ದರೆ ನಾನರಿಯೆ. ನಮ್ಮ ಪ್ರಾಚೀನರಾದ ದ್ರೋಣ, ಕೃಪಮೊದಲಾದವರಂತೆ ಅರ್ವಾಚೀನ ಕುಂಭ–ಸಂಭವರನ್ನು ನಿರ್ಮಿಸಬೇಕೆಂದು ಈ ಶಾಸ್ತ್ರಜ್ಞರ ಹಂಬಲ. ಕೆಲವೊಂದು ಔಷಧಿಗಳ ಯೋಗದಿಂದ ಗಂಡುಸು ಕೂಡ ಮಗುವಿಗೆ ಮೊಲೆಯೂಡಿಸಲು ಸಮರ್ಥನಾಗುವನೆಂದೂ ಅದರಿಂದ ಹೆಣ್ಣುಮಕ್ಕಳ ಕೆಲವೊಂದು ಶ್ರಮವು ಉಳಿದು, ಅವರಿಗೆ ಹೆಚ್ಚು ತೆರಪು ದೊರೆತು, ಮನೆಯಿಂದ ಹೊರಬೀಳಲಿಕ್ಕೂ ಅಡುಗೆಮನೆಯ ಹೊರಗಿನ ಕೆಲಸಗಳಿಗೆ ಕೈಯಿಕ್ಕಲಿಕ್ಕೂ ಆಸ್ಪದವುಂಟಾದೀತೆಂದೂ ಒಂದು ಎಣಿಕೆಯಿದೆ. ಇವುಗಳ ಶಕ್ಯಾಶಕ್ಯತೆಗಳನ್ನು ಹೇಳುವುದು ನನ್ನ ಅಳವಿನ ಹೊರಗಣ ವಿಷಯ. ಒಂದು ವೇಳೆ ಇದೆಲ್ಲವು ಸಾಧ್ಯವೆಂದು ತಿಳಿದರೂ, ನನಗೆ ತಿಳಿದ ಮಟ್ಟಿಗೆ ಹೆಣ್ಣುಮಕ್ಕಳ ಹೊಣೆಯು ಕಡಿಮೆಯಾದೀತೆಂದು ಎನಿಸುವುದಿಲ್ಲ. ಪ್ರಾಣವಾಯು

ಮತ್ತು ಜಲಜನಕವಾಯುಗಳ ಸಂಯೋಗದಿಂದ (ಪ್ರಾ+ಶಿಜ) ನೀರು ಉಂಟಾಗುವುದೆಂದು ಚೆನ್ನಾಗಿ ಸಿದ್ಧವಾಗಿದ್ದರೂ ನಮ್ಮ ವಿಜಾಪುರ ಜಿಲ್ಲೆಯ ನೀರಿನ ಅರಬು ಇನ್ನೂ ಹಿಂಗಿಲ್ಲ !

ಆದರೆ ಒಂದುಮಾತಿಗಾಗಿ ಮಾತ್ರ ಹೆದರಬೇಕಾಗಿದೆ. ಸಂತಾನ ನಿರೋಧದ ಕೃತ್ರಿಮ ಉಪಾಯಗಳು, ಎರಡೂ ಮಗ್ಗಲು ಹದನಾದ ಶಸ್ತ್ರ ದಂತಿದ್ದು—ಅಯೋಗ್ಯ ರೀತಿಯಿಂದ ಉಪಯೋಗಿಸಿದರೆ ಹಿಡಿವವರಿಗೂ ಸಮಾಜಕ್ಕೂ ಕೂಡಿಯೆ ಅಪಾಯಕಾರಕವಾಗಿವೆ. 'ಗಂಡಸು ತನ್ನನ್ನು ಅನ್ಯಾಯದಿಂದ ಮನೆಯಲ್ಲಿ ಸೆರೆಹಿಡಿದಿಡುತ್ತಲಿದ್ದಾನೆ' ಎಂಬ ಭಾವನೆಯಾಗಿ ಹೆಂಗುಸು ಈಗ ಸ್ವಲ್ಪ ತೂಕತಪ್ಪಿ ಆಟ-ಮಾಟಗಳನ್ನು ನಡೆಯಿಸಿದ್ದಾಳೆಂದು (ಪಶ್ಚಿಮದಿಕ್ಕಿನಲ್ಲಿ ನೋಡಿದರೆ) ಎನಿಸುತ್ತಲಿದೆ. ಅದರ ಪರಿಣಾಮವೆ 'ಅಡುಗೆಮನೆಗಳನ್ನು ಕೆಡುಹಬೇಕು' ಎಂಬ ಕೂಗು. ಗಂಡುಸು ಹೆಂಗು ಸನ್ನು ಇಲ್ಲದ ರಿಕ್ಕಿನಲ್ಲಿ ಹಿಡಿದಿಡಬೇಕೆಂದಿದ್ದ ಅವಿಚಾರದ ಫಲವಿದು. 'ಹೆಂಗು ಸರ ಬುದ್ಧಿ ಅಡುಗೆಮನೆಯಲ್ಲಿ,' 'ಬಳೆ ಹಾಕಿಕೊಂಡವಳು,' 'ನ ಸ್ತ್ರೀಸ್ವಾತಂತ್ರ್ಯ ಮರ್ಹತಿ' ಎಂಬವೆ ಮೊದಲಾದ, ಈಗ ಅಪಾರ್ಥದಾಯಕವಾಗಿರುವ ಮಾತು ಗಳನ್ನು ಮರೆತು ಬಿಡಬೇಕು. 'ಹೆಂಗುಸು ಮನೆಹಿಡಿದುಕೊಂಡಿರಬೇಕು', 'ಅಡುಗೆಮನೆಯೆ ಅವಳ ಕಾರ್ಯಕ್ಷೇತ್ರ' ಎಂದು ಮುಂತಾಗಿ ಈರ್ಷೆಯನ್ನು ಹುಟ್ಟಿಸುವ ಮಾತುಗಳಿಂದ ಹೆಣ್ಣುಮಕ್ಕಳ ಸ್ವಾಭಿಮಾನಕ್ಕೆ ಸುಮ್ಮನೆ ಪೆಟ್ಟು ಕೊಡುವುದೂ ಯುಕ್ತವಲ್ಲ.

ಹೆಂಗುಸು ಅಡುಗೆಮನೆಯನ್ನು ತನ್ನ ಕೆಲಸಕ್ಕಾಗಿ ಆರಿಸಿಕೊಂಡುದು, ಪ್ರಪಂಚವು ಸುಸೂತ್ರವಾಗಿ ಸಾಗಲು ಇಬ್ಬರಿಗೂ ಅನುಕೂಲವೆಂದು, ಹೊರತು ಹೊರಗಿನ ಕೆಲಸಗಳನ್ನು ಅವಳು ಮಾಡಲೇಕೂಡದೆಂದಾಗಲಿ, ಮಾಡಲು ಅಸಮರ್ಥಳೆಂದಾಗಲಿ ಇದರ ಅರ್ಥವಲ್ಲ. ಅವಶ್ಯವೆನಿಸಿದರೆ, ಪ್ರಸಂಗಬಂದರೆ ಅವನ್ನೂ ಮಾಡುವ ಹಕ್ಕು ಅವಳಿಗಿಲ್ಲದಿಲ್ಲ. ಗಂಡುಸು ಒತ್ತಾಯದಿಂದ ಇಂತಹದೇ ನಿನ್ನ ಕೆಲಸವೆಂದು ಆಕೆಗೆ ಬಲವಂತಪಡಿಸಹೋದರೆ, ಅದರ ಪ್ರತಿಕ್ರಿಯೆಯ ದುಷ್ಪರಿಣಾಮಗಳನ್ನವನು ಖಂಡಿತ ಅನುಭೋಗಿಸಬೇಕಾಗು ವುದು; ನಮ್ಮ ನಾಡಿನಲ್ಲಿಯೂ ಅದರ ಸ್ವಲ್ಪ ಬಿಸಿಯು ತಾಕಲಾರಂಭಿಸಿದೆ. ಆದುದರಿಂದ ಗಂಡುಸು ತನ್ನ ಕೃತ್ರಿಮ ಬಂಧನಗಳನ್ನು ಹಾಕುವ ಗಡಿಬಿಡಿಗೆ

ಹೋಗಲಾಗದು. ಸೃಷ್ಟಿಯ ಶಾಶ್ವತ ಬಂಧನಗಳ ಮೇರೆಯನ್ನು ಮೀರಿ ಬಾಳುವುದು ಯಾರಿಗೂ ಸಾಧ್ಯವಿಲ್ಲ; ಈ ಸನಾತನ ಧರ್ಮದಲ್ಲಿ ಶ್ರದ್ಧೆಯಿದ್ದವರು ಎಳ್ಳಷ್ಟೂ ಗಾಬರಿಯಾಗುವ ಕಾರಣವಿಲ್ಲ.

ಇಲ್ಲಿ ಇನ್ನೊಂದು ವಿಚಾರ: ಈಗಿನ ವಿಚಾರ ಪ್ರವಾಹವನ್ನು ಸ್ವಲ್ಪ ಸೂಕ್ಷ್ಮವಾಗಿ ನಿರೀಕ್ಷಿಸಿದರೆ, ನಾವು ಅಪೇಕ್ಷಿಸುವ ರೀತಿಯಲ್ಲಿ ಅಡುಗೆಮನೆಯನ್ನು ಕಾಯ್ದಿಟ್ಟುಕೊಳ್ಳುವುದು ಸಾಧ್ಯವಿಲ್ಲ. ಪ್ರಪಂಚದ ಆರ್ಥಿಕ ಪರಿಸ್ಥಿತಿಯ ಒತ್ತಾಯದ ಮೂಲಕವಾಗಿ ಹೆಣ್ಣುಮಕ್ಕಳು ದುಡಿದು ಹೊಟ್ಟೆ ಹೊರಕೊಳ್ಳಬೇಕಾಗಿದೆ. ಹೊಟ್ಟೆಯ ಚಿಂತೆಯಿಲ್ಲದ ಸ್ವಲ್ಪ ಉಳ್ಳವರು ವಿದ್ಯಾಭಿರುಚಿಯಿಂದ ಓದುಬರೆಹಗಳನ್ನು ಕಲಿತು, ಒಂದಿಲ್ಲೊಂದು ಸಾರ್ವಜನಿಕ ಕೆಲಸದಲ್ಲಿ ಮನಸ್ಸುಹಾಕುವ ರೂಢಿಯು ಹೆಚ್ಚಾಗುತ್ತಲಿದೆ. ಅಲ್ಲದೆ 'ಉಡುಪಿಯ ಕೃಷ್ಣಭವನ'ದ ಕೃಪೆಯಿಂದ ಮನೆಯ ಅಡಿಗೆಯು ಸಂಕ್ಷೇಪಕ್ಕೆ ಬರಲಾರಂಭಿಸಿದೆ. ಮನೆಗೆ ಅತಿಥಿ ಅಭ್ಯಾಗತರು ಬರುತ್ತಲೆ ಸಮೀಪದ 'ಶ್ರೀಕೃಷ್ಣ ಭುವನ'ದಿಂದ ಬೇಕಾದ ತಿನಿಸನ್ನು ತರಿಸುವವರನ್ನು ಕಾಣಬಹುದು. ಹಬ್ಬಹುಣ್ಣಿವೆಗಳಿಗೆ ಸಹ ಅಲ್ಲಿಂದಲೆ ಮುಖ್ಯ ಪಕ್ವಾನ್ನ ತರಿಸಿ ಅನ್ನ ಸಾರು ಮನೆಯಲ್ಲಿ ಮಾಡುವ ಸಂಪ್ರದಾಯುವಂತರೂ ಉಂಟು. ಹೀಗೆ ಅನೇಕ ಕಾರಣಗಳಿಂದ ಅಡುಗೆಮನೆಯು ನಮಗೆ ತಿಳಿಯದೆಯೆ ಸಣ್ಣ ಸಣ್ಣದಾಗುತ್ತ ನಡೆದಿದೆ.

ಆದರೆ ಅದು ಸಂಪೂರ್ಣ ನಾಶವಾದೀತೆಂದು ತಿಳಿಯುವುದು ಮಾತ್ರ ಶುದ್ಧ ಭ್ರಾಂತಿ. ಎಷ್ಟೇ ಸಾರ್ವಜನಿಕ ಪಾಕಶಾಲೆಗಳಾಗಲಿ; 'ಶ್ರೀಕೃಷ್ಣ ಮಂದಿರ'ಗಳಾಗಲಿ; ಕೊನೆಗೆ ಅಡುಗೆಯ ಮೂಲೆಯಾದರೂ ಇಲ್ಲದಿರುವ ಮನೆಯು ದೊರೆಯಲಾರದು. ಇಲ್ಲಿ ಮನೆಯೆಂಬುದಕ್ಕೆ ಕುಟುಂಬಿಗಳ ಮನೆಯೆಂದರ್ಥ. ವ್ಯಕ್ತಿಗೊಂದು ಸ್ವಂತದ ರುಚಿಯೆಂಬುದು ಇದ್ದೇ ಇರುತ್ತದೆ. ಊಟದ ಅಂಗಡಿಗಳಲ್ಲಿ ಎಷ್ಟೇ ಸೊಗಸಾದ ಪದಾರ್ಥಗಳನ್ನೇ ಮಾಡಿರಲಿ; ಅದಕ್ಕೆ ಮನೆ ಅಡುಗೆಯ ಸವಿ ಬರಲಾರದು. ಮೇಲಾಗಿ ತನ್ನ ಅವರಿಗೆ ತಾನು ಸ್ವಂತದ ಕೈಯಿಂದ ಮಾಡಿಹಾಕಬೇಕೆಂಬ ಒಂದು ಔತ್ಸುಕ್ಯವು ಎಲ್ಲ ಪ್ರೇಮಜೀವಿಗಳಲ್ಲಿರುವುದುಂಟು. ಮನುಷ್ಯ ಸ್ವಭಾವದೊಳಗಿನ ಈ ಭಾಗ

ವನ್ನು ನೆನಪಿಗೆ ತಂದುಕೊಂಡರೆ, ಅಡುಗೆಮನೆಗಳನ್ನು ಹುಡಿಗೂಡಿಸುವ ಕೆಲ ಸವೂ, ಪರಶುರಾಮನು ಇಪ್ಪತ್ತೊಂದು ಸಲ ನಿಃಕ್ಷತ್ರಿಯ ಪೃಥಿಯನ್ನು ಮಾಡಿದ ಕಾರ್ಯವೂ (ಅದಾದ ಮೇಲೆಯೂ ಇಕ್ಷ್ವಾಕುವಂಶದ ಶ್ರೀರಾಮ ಚಂದ್ರನು ಹುಟ್ಟಿದನೆಂಬುದು ಗೊತ್ತಿರಲಿ!) ಎರಡೂ ಒಂದೇ.

ಇಷ್ಟಾಗಿಯೂ ಅಡಿಗೆ ಮನೆಯನ್ನು ಕೆಡಹಬೇಕೆಂದು ಎತ್ತುಗಡೆ ನಡೆ ಯಿಸಿದರೆ, ಕೆಡಹುವವರ ಮೈಮೇಲೆಯೆ ಅದು ಬೀಳದಿರಲಾರದು. ಹೊಟ್ಟೆಯ ಪಾಡಿಗಾಗಿ ಕಾರಖಾನೆ, ಕಚೇರಿ ಮೊದಲಾದವುಗಳಲ್ಲಿ ಗಂಡುಸಿ ನೊಡನೆ ಸ್ಪರ್ಧೆಮಾಡುತ್ತ ಅಲ್ಲಿ ಇಲ್ಲಿ ಅಲೆದಾಡುವುವರಲ್ಲಿ ಸ್ತ್ರೀಯರು ನಿಸರ್ಗದ ಮರ್ಯಾದೆಯನ್ನು ಮೀರಬೇಕಾಗುತ್ತದೆ. ಇದರ ದುಷ್ಪರಿಣಾಮಗಳು ಅವರ ಮೈ ಮತ್ತು ಮನಸುಗಳ ಮೇಲೆ ಆಗಿ ಅವರ ಸ್ವಂತದ ಹಾನಿಯಾಗು ವುದು; ನಾಡಿನ ಹಾನಿಯಾಗುವುದು. ಗಂಡುಸು ತನ್ನ ದೃಷ್ಟಿಕೋನವನ್ನು ಬಲಿಸಿಕೊಂಡು ಸ್ವಲ್ಪ ವಿವೇಕಿಯಾಗಿ ವರ್ತಿಸಿದರೆ, ತಾವು ಹೊರಗೆ ಅಲೆದಾಡಿ ಒಬ್ಬರ ಆಳಾಗಿ ದುಡಿದು ತರುವುದರಲ್ಲಿ ಏನಾದರೂ ವಿಶೇಷ ಗೌರವವಿದೆ ಯೆಂದು ಹೆಂಗುಸಿಗೂ ಎನಿಸಲಿಕ್ಕಿಲ್ಲ. ಗಂಡಿನ ತಪ್ಪು-ನಡೆವಳಿಯ ಮೂಲಕ ಹೆಣ್ಣಿನಲ್ಲಿ ಈ ಬಗೆಯ ಬುದ್ಧಿಯು ತಲೆದೋರಿದೆ. ಗಂಡು, ತಾನೆ ದುಡಿದು ತರತಕ್ಕವನು, ಸುಮ್ಮನೆ ಕುಳಿತು ತಿನ್ನುವಕೆಲಸಮಾಡುವುದು ಹೆಣ್ಣು- ಎಂದು ಹೆಮ್ಮೆಪಟ್ಟುಕೊಳ್ಳುವುದರಿಂದ ಅಡಿಗಡಿಗೆ ಹೆಣ್ಣಿನ ಅಪಮಾನವಾಗುತ್ತ ಲಿದೆ; ಅದರಿಂದ ಹೊರಗಣಿಂದ ತಾನೂ ಗಳಿಸಿತಂದು, ಗಂಡಿನ ಹಂಗಿನೊಳ ಗಿಂದ ಪಾರಾಗಬೇಕೆಂಬ ಈರ್ಷ್ಯಾಬುದ್ಧಿಯು ಹೆಣ್ಣಿನಲ್ಲಿ ಮೂಡುತ್ತಲಿದೆ.

ಬಾಳುವೆಯು ಸವಿಯಾಗಬೇಕಿದ್ದರೆ ಒಲವಿನವರು ಒಬ್ಬರೊಬ್ಬರ ಕಡೆಗೆ ವ್ಯಾಪಾರಿ ವೃತ್ತಿಯಿಂದ ನೋಡಲಾಗದು; ಅದರಿಂದ ಪ್ರೀತಿವಿಶ್ವಾಸ ಗಳು ಬೆಳೆಯಲಾರವು. ಪ್ರೀತಿ ವಿಶ್ವಾಸಗಳೆ ಸಂಸಾರಸೌಖ್ಯದ ತಳಹದಿ. ಅದುವೆ ಇಲ್ಲದಿದ್ದ ಬಾಳು ಬರಿಗೋಳು; ಸಂತೆಯೊಳಗಿನ ಭಂಡಾಟ. ಹೆಣ್ಣು ಏನೂ ಗಳಿಸದೆ ಮನೆಯಲ್ಲಿಯೆ ಇರುವುದೆಂದು ಆಕ್ಷೇಪಿಸುವ ಗಂಡು, ಸ್ವಲ್ಪ ಎಣಿಕೆಮಾಡಿ ನೋಡಲಿ, ಏನು ಕಾಣುವುದು ? ಇಬ್ಬರೂ ದುಡಿಯುವುದಕ್ಕೆ ಹೋದರೆ ಮನೆಯಲ್ಲಿ ಅಡುಗೆಯವರಿಗೆ ಹಣ ತೆತ್ತಬೇಕಾಗುವದು. ಮಕ್ಕಳ ಆರೈಕೆ, ಉಪಚಾರಗಳಿಗಾಗಿ ಎಷ್ಟು ಹಣಕೊಟ್ಟು ಇಟ್ಟರೂ ದಾದಿಯು

ತಾಯಿಗೆ ಸರಿದೊರೆಯಾಗಬಹುದೆ? ಆತ್ಮೀಯರೊಡನೆ ಕುಳಿತು ಉಂಡ ಊಟದ ಸವಿಯು, ಬಾಡಿಗೆಯ ಆಳಿನ ಕೈಯ ಬಡಿಸುವಿಕೆಯಲ್ಲಿ ದೊರೆತೀತೆ? ತಾಯಿಯ ಕರುಳು ಕಕ್ಕುಲತೆಗಳ ಸ್ವರ್ಗೀಯ ಆನಂದದ ಸ್ವಲ್ಪಾಂಶವನ್ನೂ ಅನುಭವಿಸದ ಮಕ್ಕಳು, ಮುಂದೆ ಮನುಷ್ಯರಾಗದೆ ರಕ್ಕಸರಾಗುವ ಹೆದರಿಕೆ ಇದೆ. ದಾದಿಯರು ತಾಯಂದಿರಿಗಿಂತಲೂ ಹೆಚ್ಚು ಶಿಶುಸಂಗೋಪನಶಾಸ್ತ್ರ, ಮಕ್ಕಳ ಮಾನಸಶಾಸ್ತ್ರ ಮೊದಲಾದವುಗಳಲ್ಲಿ ನಿಷ್ಣಾತರಾಗಿರಬಹುದು. ಆದರೆ ಇದೆಲ್ಲವೂ ಬುದ್ಧಿ; ಭಾವನೆ— ಹೃದಯವು ಇದೊಂದು ವಸ್ತುವೆ ಬೇರೆ. ಆ ತನ್ನತನವು ತಾಯಿಗಲ್ಲದೆ ಹೆರವರಿಗೆ ಬಾರದು. ಆದುದರಿಂದ ಈ ವಿಷಯದಲ್ಲಿ ತಂದೆಯೆಂಬುವವನು ತಾಯಿಗೆ ಎಷ್ಟು ಸಂಬಳವನ್ನು ಸಲ್ಲಿಸಿದರೂ ಅದು ಕಡಿಮೆಯೆ ಸರಿ. ತನ್ನ ಗೃಹಮಂತ್ರಿಯೆಂದು, ತನ್ನ ಸುಖದುಃಖ, ಅನುಕೂಲತೆ ಪ್ರತಿಕೂಲತೆಗಳಲ್ಲಿ ತನಗೆ ಹತ್ತಿರಿದ್ದು ನೆರ ವಾಗುವ ವ್ಯಕ್ತಿಯೆಂದು, ಗಂಡು ತನ್ನ ಹೆಣ್ಣಿಗೆ ಕೊಡತಕ್ಕ ಪ್ರತಿಫಲ ವೆಂದರೆ ಅವಳಿಗೆ ತನ್ನನ್ನೇ ಮಾಸಲ ಮುಡುಪಾಗಿರಿಸಿಕೊಳ್ಳುವುದಕ್ಕಿಂತ ಗುಂಜಿತೂಕ ಕಡಿಮೆಯಾಗಿದ್ದುದು ಅದಾವುದೂ ನಡೆಯದು. ನಿಜಸ್ಥಿತಿಯು ಹೀಗಿರುವುದರಿಂದ ಗಂಡಿಗೆ ಇದು ತನ್ನದು, ಇದು ಹೆಣ್ಣಿನದೆಂಬ ತಾರತಮ್ಯ ವನ್ನು ಮಾಡುವುದಕ್ಕೆ ಬಾಯಿಯೆ ಇಲ್ಲ. ಮೇಲ್ಕಾಣಿಸಿದ ಬಗೆಯಿಂದ ಲೆಕ್ಕಮಾಡಿದರೂ ಹೆಣ್ಣಿಗೆ ಗಂಡು ಸಲ್ಲಿಸಬೇಕಾಗತಕ್ಕ ಹಣವು ಅವನ ಗಳಿಕೆ ಗಿಂತ ಸ್ವಲ್ಪವೂ ಕಡಿಮೆಯಾಗುವುದಿಲ್ಲ. ಆದುದರಿಂದ ಹೆಣ್ಣಿಗೆ 'ನೀವು ಮನೆ ಹಿಡಿದುಕೊಂಡು ಕೂರುವವರು' ಎಂದು ಮನಸಿಗೆ ನೋವನ್ನುಂಟು ಮಾಡುವ ಮಾತನಾಡಿ, ಅವರಲ್ಲಿ ಮನೆಯನ್ನು ಕೆಡುಹಬೇಕೆಂಬ ಬುದ್ಧಿಯು ಅಂಕುರಿಸುವಂತೆ ನಡೆದುಕೊಳ್ಳುವುದು ಸರಿಯಲ್ಲ. ಮನೆಯಲ್ಲಿಯೆ ಸಾಕಷ್ಟು ಮರ್ಯಾದೆ ದೊರೆತರೆ ಯಾವ ಹೆಣ್ಣಿಗೆ ತಾನೆ ಮನೆಬಿಟ್ಟು ಹೋಗಬೇ ಕೆಂದೆನಿಸೀತು? ಆದುದರಿಂದಲೆ ಅವಳಿಗೆ ನಮ್ಮ ಹಿರಿಯರು 'ಗೃಹಲಕ್ಷ್ಮಿ' ಎಂದು ಕರೆಯುತ್ತಿದ್ದರು. ಮನೆಯ ವಿಶಿಷ್ಟ ಪರಿಸ್ಥಿತಿಯ ಮೂಲಕ ಹೆಣ್ಣುಮಕ್ಕಳಿಗೆ ಹೊರಗಿನ ಬೇರೆ ಏನಾದರೂ ಕೆಲಸ ಹಿಡಿಯಬೇಕೆಂಬ ಅವಶ್ಯಕತೆಯುಂಟಾಗಿದ್ದರೆ ಅದು ಒಂದು ಆಕಸ್ಮಿಕ ಕಾರಣದ ಮೂಲಕ ವಾಗಿದೆಯೆಂದೆ ತಿಳಿಯಬೇಕಲ್ಲದೆ, ಹೆಂಗುಸರು ಮೊದಲು ನಿರುದ್ಯೋಗಿ

ಗಳಾಗಿದ್ದರು. ಈಗ ಉದ್ಯೋಗಕ್ಕೆ ಹತ್ತಿದರೆಂಬ ವಿಚಾರದ ರೀತಿಯನ್ನು ಬದಲಿಸಿಕೊಳ್ಳಬೇಕು. ವ್ಯಾಪಾರ, ನೌಕರಿ ಮೊದಲಾದ ದಂದುಗಗಳ ಒತ್ತಾಯಕ್ಕಾಗಿ ತಾಯಿಯು ತೊಟ್ಟಿಲಿನ ದಾರವನ್ನು ಆಳಿನ ಕೈಯಲ್ಲಿ ಕೊಡುವ ರೂಢಿಯು ಹೆಚ್ಚಾದರೆ, ಅಥವಾ ಮಕ್ಕಳೆ ಬೇಸರವಾದರೆ ನಾಡಿನ ಅಳಿಗಾಲವು ತೀರ ಹತ್ತಿರಕ್ಕೆ ಬಂದಿತೆಂದು ತಿಳಿಯಲು ಅಡ್ಡಿಯಿಲ್ಲ.

ಜಯಂತಿ ಜುಲೈ ೧೯೩೮

---

# ಮದುವೆಗಳ ವಿಚಾರ

ಬರಲಿರುವ ಸಮಾಜದ ಮದುವೆಯ ವಿಚಾರವೇನು ?

ಗಾಳಿಯು ಯಾವ ದಿಕ್ಕಿಗೆ ಸುಳಿಯುತ್ತಿರುವುದೆಂಬುದನ್ನು ಸ್ಥೂಲವಾಗಿ ಒಳಗೊಳಗೆ ಎಲ್ಲರೂ ಬಲ್ಲರು. ಆದರೆ ಅದನ್ನು ಶಬ್ದಗಳಿಂದ ಬಿಡಿಸಿ ಆಡಲು ಹಲವರಿಗೆ ಒಪ್ಪಿಗೆಯಾಗಲಿಕ್ಕಿಲ್ಲ !

ತಾವು ಯಾರೊಡನೆ ಆಜನ್ಮ ಕಳೆಯತಕ್ಕದು ಎಂಬುದನ್ನು ನಿರ್ಧರಿಸುವ ಹಕ್ಕು ತಮ್ಮದು, ಎಂದು ತರುಣರು ಆಗ್ರಹಪಡುತ್ತಿದ್ದಾರೆ. ವರನ ಮಟ್ಟಿಗೆ ಈ ಹಕ್ಕು, 'ಸಾಮ್ರಾಜ್ಯಾಂತರ್ಗತ ಸ್ವರಾಜ್ಯದಷ್ಟು' ಬಹುತರವಾಗಿ ದೊರೆತಂತೆ ಆಗಿದೆ. ತರುಣನು ಹೆಣ್ಣು ನೋಡಿ ಒಪ್ಪಿಕೊಂಡ ಬಳಿಕ, ತಂದೆತಾಯಿಗಳು ಅದನ್ನು ನಿಶ್ಚಯಿಸುವರು; ಕಾಲಜ್ಞರಾದ ಹಿರಿಯರು, ಹೆಣ್ಣಿನ ಆಯ್ಕೆಯ ಸಂಪೂರ್ಣ ಸ್ವಾತಂತ್ರ್ಯವು ತನ್ನದೇ, ಎಂದು ಹಟಹಿಡಿವ ಪ್ರಸಂಗವು ಉಂಟಾಗದಂತೆ ಮಗನೊಡನೆ ಹಿತವಾಗಿ, ತಿಳುವಳಿಕೆಯಿಂದ ನಡಕೊಳ್ಳುವರು. ಆದರೆ ಈ ವಿಚಾರದಲ್ಲಿ ತಂದೆ ಮಕ್ಕಳಲ್ಲಿ ವಧೂ ನಿರ್ಣಯದ ಬಗೆಗೆ ಒಪ್ಪಿಗೆ ಅಥವಾ ಒಪ್ಪಂದವಾಗದೆ ಕುಸುಕುಸು, ಘುಸು ಘುಸುವಾಗಿ ಮನೆಗೋಡೆಯು ಬಿರಿತುದನ್ನು ಕಾಣುವ ಪ್ರಸಂಗಗಳು ಕಡಿಮೆಯಿಲ್ಲ.

ಕಂನಾಡಿನಲ್ಲಿ ವರಗಳೇ, 'ಸಾಮ್ರಾಜ್ಯಾಂತರ್ಗತ' ಸ್ವರಾಜ್ಯವನ್ನು ಇನ್ನೂ ಸಂಪೂರ್ಣ ಪಡೆಯದೆ ಇದ್ದಾಗ ಹೆಣ್ಣಿಗೆ 'ಸಂಸ್ಥಾನಿಕ ಸ್ವರಾಜ್ಯವೂ

ದೂರವೇ. ಹೇಳಿಕೇಳಿ ಅದು 'ಕೊಡಗೂಸು'. ತನ್ನ ಆ ಜನ್ಮಸಖನ ಆಯ್ಕೆಯ ಹಕ್ಕು ತನ್ನದೇ ಎಂಬ ಮಾತು, ಇನ್ನೂ ಸ್ತ್ರೀಯರ ಡಿಬೇಟಿಂಗ ಕ್ಲಬ್ಬಿನ ವಿಷಯವಾಗಿದೆ! ಇದನ್ನು ಆಚಾರದಲ್ಲಿ ತಂದ ಚದುರೆಯರ ಸಂಖ್ಯೆ ಅತ್ಯಲ್ಪ. ಆದರೂ ಮಗಳನ್ನು ಕೇಳದೆ ಯಾವನೊಬ್ಬ ವರನನ್ನು ಗೊತ್ತು ಪಡಿಸಿಬಿಡುವ ತಂದೆತಾಯ್ಗಳು ತಮ್ಮ ಹುಚ್ಚು ಸಾಹಸಕ್ಕಾಗಿ ಕೊನೆಗೆ ಮಿಡುಕಾಡುಬೇಕಾಗುವುದು.

ಗಳಿಸಾಳಿಯಾಗದೆ ಮದುವೆಯಾಗುವುದು ತರುಣನಿಗೆ ಮಾನಗೇಡು. ತನ್ನ ಕೈಹಿಡಿದವಳ ಊಟಉಡಿಗೆಗೆ ಇನ್ನೊಬ್ಬರಿಗೆ ಕೈಯೊಡ್ಡಬೇಕಾಗುವ ಸ್ಥಿತಿಯಲ್ಲಿ ಮದುವೆಯಾಗಲು ಯಾವ ಸ್ವಾಭಿಮಾನಿಯಾದ ತರುಣನೂ ಒಪ್ಪಲಾರ. ಇದರಿಂದ ವರನ ಮದುವೆಯ ವಯಸ್ಸು ಕನಿಷ್ಠ ೨೫–೩೦ಕ್ಕೆ ಬಂದಿತು. ಮಗಳ ಮದುವೆ ಬೇಗನೆ ಮುಗಿಸಿಬಿಡಬೇಕೆಂಬ ಆತುರದ ಸಂಪ್ರದಾಯವಂತರಿಗೂ ಈ ಕಾರಣದಿಂದ ಕನ್ಯೆಯನ್ನು ೧೮–೨೦ ವರುಷಗಳ ವರೆಗೆ ಮನೆಯಲ್ಲಿ ಬೆಳೆಯಿಸದೆ ಬೇರೆ ದಾರಿ ಉಳಿದಿಲ್ಲ. ಇಷ್ಟು ವಯಸ್ಸಿನ ವರೆಗೆ ಸುಮ್ಮನೆ ಮನೆಯಲ್ಲಿರುವುದಕ್ಕಿಂತ, ಕಲಿತರೇನು ಕೇಡು? ಎಂದು ಅನುಕೂಲವಿದ್ದಲ್ಲಿ ಹೆಣ್ಣುಮಕ್ಕಳಿಗೆ ಶಿಕ್ಷಣವೂ ದೊರೆಯುವುದು. ಸ್ತ್ರೀ ಶಿಕ್ಷಣಕ್ಕೆ ಮನಸಾ ಅನುಕೂಲವಿಲ್ಲದವರೂ ಪ್ರವಾಹಪತಿತರಾಗಿ ತಮ್ಮ ಕೊಡಗೂಸುಗಳಿಗೆ ವಿದ್ಯಾಭ್ಯಾಸ ಮಾಡಿಸಬೇಕಾಗುವುದು. ಮದುವೆಯಾಗದೆ ಬೆಳೆದ ಹೆಣ್ಣನ್ನು ಮನೆಯಲ್ಲಿಟ್ಟುಕೊಂಡು ಕುಳ್ಳಿರಬೇಕಾಗಿದೆಯಲ್ಲ, ಎಂಬ ಉಮ್ಮಳದ ಎದೆನೋವಿನಿಂದ ಬಳಲುತ್ತಿರುವ ತಾಯ್ತಂದೆಗಳಿಲ್ಲದ ಊರಿಲ್ಲ.

ಹುಡುಗ, ಹುಡುಗೆಯರ ಮದುವೆಯ ವಯಸ್ಸು ಅನಿವಾರ್ಯವಾಗಿ ಮುಂದೆ ಹೋಗುತ್ತಲಿದೆ. ಅವರು ಪ್ರೌಢರಾಗಿ ಸ್ವಂತದ ಒಳಿತು-ಕೇಡು ಗಳನ್ನು ತಿಳಿದುಕೊಳ್ಳುವ ವಯಸ್ಸಿನವರಾಗಿರುತ್ತಾರೆ. ಸ್ವಾವಲಂಬಿಗಳಾಗಿ ತಮ್ಮ ಕಾಲಮೇಲೆ ನಿಲ್ಲುವ ಸ್ಥಿತಿಗೆ ಬಂದಿರುತ್ತಾರೆ. ಇಂತಹ ಪರಿಸ್ಥಿತಿ ಯಲ್ಲಿ ಇವರ ಮದುವೆಯ ಸೂತ್ರಗಳು ಇನ್ನೂ ತಮ್ಮ ಕೈಯಲ್ಲಿಯೇ ಉಳಿಯಬೇಕೆಂದು ತಂದೆತಾಯ್ಗಳು ಹಂಬಲಿಸುವುದು ನಿಷ್ಕಾರಣ. ಹಲ ವೆಡೆಗಳಲ್ಲಿ ಮೇರೆ ಮೀರಿದ ವಾತ್ಸಲ್ಯ ಕಕ್ಕುಲತೆಯು ಇದಕ್ಕೆ ಕಾರಣವಾಗಿರು ತ್ತದೆ. ನಮ್ಮ ನಾಡಿನ ಶಿಷ್ಟಾಚಾರಗಳಲ್ಲಿ ಇಷ್ಟವಾದ ಕೆಲ ಪ್ರ ಮಾರ್ಪಾಡು

ಗಳು ಇನ್ನೂ ಆಗದೆ ಇದ್ದುದಕ್ಕೆ ಒಂದು ಮಹತ್ವದ ಕಾರಣವುಂಟು. ಸಹಜ ಸ್ವಾಭಾವಿಕವಾದ ವಾತಾವರಣದಲ್ಲಿ ಸ್ತ್ರೀ-ಪುರುಷರು ಒಬ್ಬರನ್ನೊಬ್ಬರನ್ನು ಕಾಣಲು, ಭೆಟ್ಟಿಯಾಗಲು ಸಾಮಾಜಿಕ ಸನ್ನಿವೇಶಗಳ ಏರ್ಪಾಟವು ಆಗುವ ತನಕ ಮದುವೆಗಳು ಸ್ವಯಂ-ವರಗಳಾಗುವುದಕ್ಕೆ ತುಂಬ ಆತಂಕಗಳಿವೆ.

ದಿನದಿನಕ್ಕೆ ಅವಿವಾಹಿತರ ಸಂಖ್ಯೆ ಬೆಳೆಯುತ್ತಿದೆ. ಮನದನ್ನ ಅಥವಾ ಮನದನ್ನೆ ದೊರೆಯದ್ದರಿಂದ, ಸರಿಯಾದ ಕೆಲಸ ಸಿಕ್ಕದೆ, ಸಂಬಳಗೇಡಿ ಯಾಗುವ ಭೀತಿಯಿಂದ, ಅಥವಾ ತಮ್ಮ ಮನೆತನಕ್ಕೆ ತಕ್ಕ ವರ ಅಥವಾ ವಧು ದೊರೆಯದೆ ಮದುವೆ ಇಲ್ಲದವರು ಹಲವರು; ದಿಲ್ಲಿ, ಮುಂಬೈ, ಕಲಕತ್ತೆ ಗಳಂತಹ ಹಿರಿಯೂರುಗಳಲ್ಲಿ ನೌಕರನಾಗಿದ್ದು ಮನೆ ದೊರೆಯದ್ದಕ್ಕಾಗಿ, ಅಥವಾ ಸಂಸಾರಿಗನಾಗಲು ಆ ಊರಿನ ಮಾನದಿಂದ ಸಾಕಷ್ಟು ವೇತನ ವಿಲ್ಲದ್ದರಿಂದ ಒದ್ದಾಟ ನಡೆದವರು ಕೆಲವರು. ಹೆಣ್ಣುಮಕ್ಕಳಲ್ಲಿ ಏನೂ ಕಲಿತಿಲ್ಲವೆಂಬ ಕಾರಣದಿಂದಲೇ ಕೆಲವರ ಮದುವೆಗೆ ತೊಂದರೆ! ತುಂಬ ಕಲಿತವಳೆಂದೂ ತೊಂದರೆ! ಯಾವುದಾಗಲಿ, ತಮ್ಮ ಜಾತಿಯ ಒಂದು ಗಂಡು ಆದರಾಯಿತು ಎಂದು ಕಣ್ಣುಮುಚ್ಚಿ ಮಗಳನ್ನು ನೂಕಿ ಬಿಡಲು ಸಿದ್ಧರಿಲ್ಲದ ತಾಯ್ತಂದೆಗಳಿಗೆ ವರದಕ್ಷಿಣೆಗೆ ಸಾಕಷ್ಟು ದುಡ್ಡಿಲ್ಲದೆ ಇದ್ದುದೇ ಒಂದು ಮಹತ್ಪಾಪ. ಸಕಾಲದಲ್ಲಿ ಸರಿಯಾದ ವರನು ಸಿಕ್ಕದೆ ನೌಕರಿಯಲ್ಲಿ ಸೇರಬೇಕಾದ ಸ್ತ್ರೀಯರ ವರ್ಗವೊಂದು. ದಾದಿಗಳು, ಕಾರ ಕೂನರು, ಅಧ್ಯಾಪಿಕೆಯರು, ಕಲೋಪಾಸಕರುಗಳಂತಹ ವೃದ್ಧಕುಮಾರಿಯರ ಪಂಗಡವು ಇಂದಿನ ಸಾಮಾಜಿಕ ಸ್ಥಿತಿಯ ಅನಿವಾರ್ಯವಾದ ಫಲವು.

ಹೆಂಗಳೆಯರು ಸ್ವಾವಲಂಬಿಗಳಾಗಿ ಆರ್ಥಿಕ ಸ್ವಾತಂತ್ರ್ಯ ಪಡೆದ ಬಳಿಕ ಗಂಡನೆಂಬ ತುಂಟನ ಕಾಟದಲ್ಲಿ ಏಕೆ ಸಿಲುಕಬೇಕು? ವ್ಯಕ್ತಿತ್ವ, ವೈಯಕ್ತಿಕ ಸ್ವಾತಂತ್ರ್ಯಕ್ಕೆ ಏಕೆ ಎರವಾಗಬೇಕು? ಎಂಬ ಭಾವವು ಅವರಲ್ಲಿ ಒಡಮೂಡು ವುದು, ಮಾನವ ಸ್ವಭಾವಕ್ಕೆ ಹೊರತಾದುದಲ್ಲ. ಅವರು ಗಂಡನಿಗಿಂತಲೂ ಇನಿಯನನ್ನು ಹಾರಯಿಸುವರು. ಇನ್ನುಮೇಲೆ ಹೆಣ್ಣುಮಕ್ಕಳಿಗೆ ಗಂಡಸರಂತೆ ಪಾಲಿನಹಕ್ಕು ಬರಲಿದೆ. ಆರ್ಥಿಕ ಸ್ವಾತಂತ್ರ್ಯವುಳ್ಳ ಪ್ರಮಿಳೆಯರಿಂದ ಸಮಾಜದಲ್ಲಿ ಸ್ವಯಂ-ವರ ಪದ್ಧತಿಯು ಪ್ರಶಸ್ತವಾಗಿ ರೂಢವಾಗುವುದು. ಗಂಡನಾಗಿಯೇ ಹೆಣ್ಣನ್ನು ಆಳುವೆನೆಂಬ ಹಲವರ ಬಿಂಕವು ಮುಕ್ಕಾಗದೆ

ಇರದು. ಹೆಣ್ಣಿನೊಡನೆ ಇನಿಯನಾಗಿ, ನಲ್ಲನಾಗಿ ಗೆಳೆತನದಿಂದ ಬಾಳುವ ಕಲೆಯನ್ನು ಅರಿತುಕೊಳ್ಳುವ ಅವಶ್ಯತೆಯು ಗಂಡಿನ ಒಗರಿನ ಒರಟನ್ನು ಹಣ್ಣಿಸದೆ ಇರದು.

ಅನಿವಾರ್ಯವಾಗಿ ಒಂದಿಲ್ಲೊಂದು ಕಾರಣಕ್ಕಾಗಿ ಅವಿವಾಹಿತರಾಗಿ ಉಳಿವ ಗಂಡು, ಹೆಣ್ಣುಗಳ ಸಂಖ್ಯೆ ಹೆಚ್ಚಾದಂತೆ ಇನ್ನೊಂದು ಬಗೆಯ ಸಾಮಾಜಿಕ ಅಸ್ವಾಸ್ಥ್ಯವು ತಲೆದೋರುವುದು. ಮದುವೆಯು ಮುಂದೆ ಬೀಳುತ್ತಿದ್ದರೂ ದೇಹಧರ್ಮಗಳ ಒತ್ತಾಯ ಬೆನ್ನು ಬಿಡದು. 'ಅನಿಚ್ಛನ್ನಪಿ' ಅವರು ಒಬ್ಬರ ನ್ನೊಬ್ಬರು ಹಾರಯಿಸದೆ ಇರರು. ಈ ಇಳಿದಾರಿಯಲ್ಲಿ ಜಾರದಂತೆ ನಮ್ಮ ಗೃಹಶಿಕ್ಷಣ, ಸಂಸ್ಕೃತಿ, ಸಂಪ್ರದಾಯಗಳು ಉಂಟು. ಆದರೂ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಾಣಿಸಿಕೊಂಡಿರುವಂತೆ ಸ್ತ್ರೀಪುರುಷರ ನಡುವಿನ ಸಂಬಂಧದ (ಮದುವೆಯ?) ಪ್ರಕಾರಗಳೂ ಪ್ರಯೋಗಗಳೂ ಇಲ್ಲಿಯೂ ನಡೆಯತಕ್ಕವೆ. ಶಿಷ್ಟರೆಂಬವರಿಂದ ಬಹಿರಂಗವಾಗಿ ಆಚರಿಸಲ್ಪಡುವ ವರೆಗೆ ಇವು ನಮ್ಮಲ್ಲಿ ಇನ್ನೂ ಬಂದಿಲ್ಲ (ಭ್ರಷ್ಟ, ಬಿಳಿಯರ ಆಚರಣೆಯದು) ಎಂಬುದೇ ಸಾಮಾನ್ಯ ಜನರ ಲೆಕ್ಕಾಚಾರ. ಹದಿನೆಂಟು ವರುಷ ಮಿಕ್ಕಿದರೂ 'ಅಷ್ಟವರ್ಷಾ ಭವೇತ್ ಕನ್ಯಾ' ಎಂಬ ಮಂತ್ರವನ್ನೆ ಇಂದಿಗೂ ಹೇಳುವುದಿಲ್ಲವೆ? 'ಕರ್ಣ'ರ ಕತೆಗಳು ಕಿವಿಯಿಂದ ಕಿವಿಗೆ ಬರುತ್ತಿದ್ದರೂ ಅವು ಕೇಳಿಲ್ಲವೆಂಬಂತೆ ನಡೆವುದು ಶಿಷ್ಟಾಚಾರ. 'ಮದುವೆ ಬೇಡ; ಆದರೆ ಮಗುವಿನ ಹಂಬಲವಿದೆ. ಗಂಡಸಿನ ನೆಳಲಾಗಿ ಇರಲು ಮನಸು ಒಪ್ಪದು; ಆದರೂ ತಾಯ್ತನದ ಆನಂದವು ತನಗೆ ಬೇಕೇ ಬೇಕು' ಎಂದು ನಿರ್ದಾಕ್ಷಿಣ್ಯವಾಗಿ ಹೇಳಿ ಹಾಗೆ ನಡೆದುಕೊಂಬ ಚಿತ್ರಾಂಗನೆಯರನ್ನು ಕಾಣಲು ಬಹಳ ದಿನಗಳು ಬೇಕಾಗಲಿಕ್ಕಿಲ್ಲ. ಮನುಷ್ಯ ಕೃತ ಕಟ್ಟಳೆಗಳನ್ನು ಕಡೆಗಣಿಸಿದರೂ ಸೃಷ್ಟಿಯ ಸನಾತನಧರ್ಮವನ್ನು ಮೀರಿ ಯಾರೂ ಬಾಳಲಾರರು.

ಮಾನವ ಹೃದಯವು ಸ್ವಾಭಾವಿಕ ಭಾವನೆಗಳ ಗೋರಿಯಾಗುವುದ ಕ್ಕಿಂತ ದಾರುಣವಾದ ದುರಂತವು ಬೇರೊಂದಿಲ್ಲ. ಸೃಷ್ಟಿಕ್ರಮದಲ್ಲಿ ಸ್ವಾಭಾವಿಕ ವಾದ ಭಾವನೆಗಳು ಅರಳಿ, ಅಥವಾ ದಿವ್ಯಭಾವವನ್ನು ತಾಳಿ ಸಫಲವಾಗು ವಂತೆ ಸಮಾಜದಲ್ಲಿ ಇಂಬು ಇಟ್ಟಿರಬೇಕು. ಅದರಲ್ಲಿ ವ್ಯಕ್ತಿಗೆ ವೈಯಕ್ತಿಕ

ಜೀವನದ ಸಫಲತೆಯುಂಟು. ಸಾಮಾಜಿಕ ಸ್ವಾಸ್ಥ್ಯ ಮತ್ತು ವಿಕಾಸವುಂಟು. ತಪ್ಪು ತಡೆಗಳನ್ನು ತಿದ್ದಿಕೊಳ್ಳಲು ಅವಕಾಶವಿರುವಂತೆ ಇಂಬು ಇಟ್ಟು ಬರೆಯಬೇಕು; ಇಂಬು ಇಟ್ಟು ಮಾತಾಡಬೇಕು; ಇಂಬೇ ಮರ್ಯಾದೆ. ಇಂಬು ಇಲ್ಲದ ಶೀರ ಹತ್ತಿಯಾಗಿ ಉಸಿರುಗಟ್ಟುವಂತೆ ಠಿಕ್ಕಾಗಿ ಬಿಗಿಯಾದ ಬಂಧನಗಳು ಬಹಳ ಹೊತ್ತು ಬಾಳವು; ಬಾಳಗೊಡವು. ಇಂಬಿಲ್ಲದ ಸಮಾಜ ರಚನೆ ಇಂದಿನದು! ಒಂದು ಕಾಲಕ್ಕೆ ಭಾರತವು ಏಳ್ಗೆಯಲ್ಲಿದ್ದಿತು. ಆಗ ಎಲ್ಲ ಬಗೆಯ ಜನಗಳಿಗೂ ಬಾಳಲು ಇಂಬು ಇಟ್ಟು ಸಮಾಜ ಕಟ್ಟಿದ್ದರು. ಏನೋ ಅಚಾತುರ್ಯದಿಂದ ತಾಯಿಯಾದ ಕೊಡಗೂಸಿಗೆ ಆತ್ಮಹತ್ಯೆಮಾಡಿಕೊಂಬ ಹೊತ್ತು ಬರಲಾಗದು. ಮಹಾಭಾರತದ ಕೆಳಗಣ ವಾಕ್ಯಗಳಿಂದ ಪ್ರಾಚೀನ ಧರ್ಮಜ್ಞರು ಈ ಮಾತಿಗೂ ಇಂಬಿಟ್ಟಿದ್ದರೆಂಬುದನ್ನು ಮನಗಾಣಬಹುದು. ಶ್ರೀಕೃಷ್ಣನು ಕರ್ಣನಿಗೆ ಹೇಳಿದ ಮಾತಿದು:

> ಕಾನೀನಶ್ಚ ಸಹೋಢಶ್ಚ ಕನ್ಯಾಯಾಂ ಯಶ್ಚ ಜಾಯತೇ ।
> ವೋಢಾರಂ ಪಿತರಂ ತಸ್ಯ ಪ್ರಾಹುಃ ಶಾಸ್ತ್ರವಿದೋ ಜನಾಃ ।
>
> — ಉದ್ಯೋ. ೧೪೩. ೮

ಸ್ಮೃತಿಕಾರರು ಸೂಚಿಸಿದ ಮರ್ಯಾದೆಗಳನ್ನು ಮೀರಿ ಹಿಂದೂ ಸಮಾಜವು ಮರ್ಯಾದೆಗೇಡಾಗುತ್ತಲಿದೆ. ಹೆಣ್ಣುಮಕ್ಕಳ ವಿಚಾರದಲ್ಲಿ ಮುಸಲ್ಮಾನರ ಆಗಮನದ ತರುವಾಯ, ಹಿಂದೂ ಸಮಾಜವು ಅತ್ಯಂತ ಅನುದಾರ ರೀತಿಯಲ್ಲಿ ವರ್ತಿಸುತ್ತ ನಡೆದಿತು. ಗೌತಮಾದಿಗಳ ಅಭಿಪ್ರಾಯದಂತೆ ಸ್ತ್ರೀಯರು ಯಾವಾಗಲೂ ಪವಿತ್ರರು. ಬಲಾತ್ಕಾರದಿಂದ ಅವರ ಮಾನಭಂಗ ಮಾಡುವ ಪಾಪಿಯೇ ನಿಂದ್ಯನು; ಸ್ತ್ರೀಯನ್ನು ಅಪವಿತ್ರಳೆಂದೆಣಿಸದೆ ಸಂಸ್ಕಾರದಿಂದ ಮರಳಿ ಸ್ವೀಕರಿಸಲು ದೇವಲ, ಅತ್ರಿ, ವಸಿಷ್ಠಾದಿಗಳ ಸ್ಪಷ್ಟವಾದ ಆಜ್ಞೆಗಳಿವೆ.

> ಸ್ತ್ರೀಯಃ ಪವಿತ್ರಮತುಲಂ ನೈತಾ ದುಷ್ಯಂತಿ ಕರ್ಹಿಚಿತ್ ।
> ಮಾಸಿ ಮಾಸಿ ರಜೋ ಹ್ಯಾಸಾಂ ದುರಿತಾನ್ಯಪಕರ್ಷತಿ ।
>
> ಗೌತಮ. ೯. ೬೩

> ನ ಸ್ತ್ರೀ ದುಷ್ಯತಿ ಜಾರೇಣ...ನಾಗ್ನಿರ್ದಹನ ಕರ್ಮಣಾ ।
> (ಬಲತ್ಕಾರೋಪಭುಕ್ತಾ ವಾ ಚೌರಹಸ್ತಗತಾಪಿವಾ)

ನ ತ್ಯಾಜ್ಯಾ ದೂಷಿತಾ ನಾರೀ ನಾಸ್ಯಾಸ್ತ್ಯಾಗೊ ವಿಧೀಯತೇ ।
ಪುಷ್ಪಕಾಲ ಮುಪಾಸೀತ ಋತು ಕಾಲೇನ ಶುದ್ಧ್ಯತಿ ॥
—ವಸಿಷ್ಠಸ್ಮೃ. ೧೭. ೩ ಮತ್ತು ಅತ್ರಿ ೧೯೭. ೯೮

ವ್ಯಭಿಚಾರಾದೃತೌ ಶುದ್ಧಿಃ ಸ್ತ್ರೀಣಾಂ ಚೈವ ನ ಸಂಶಯಃ ।
ಗರ್ಭೇ ಜಾತೇ ಪರಿತ್ಯಾಗೋ ನಾನ್ಯಥಾ ಮಮ ಭಾಷಿತಮ್ ।
—ಬೃಹದ್ಯಮ

ಅಸವರ್ಣೇನ ಯೋ ಗರ್ಭಃ ಸ್ತ್ರೀಣಾಂ ಯೋನೌ ನಿಷಿಚ್ಯತೇ ।
ಅಶುದ್ಧಾ ಸಾ ಭವೇತ್ ನಾರೀ ಯಾವತ್ ಶಲ್ಯಂ ನ ಮುಂಚತಿ ॥
ವಿನಿಃಸೃತೇ ತತಃ ಶಲ್ಯೇ ರಜಸೋ ವಾಪಿ ದರ್ಶನೇ ।
ತದಾ ಸಾ ಶುಧ್ಯತೇ ನಾರೀ ವಿಮಲಂ ಕಾಂಚನಂ ತಥಾ ॥
—ಅತ್ರಿಸ್ಮೃತಿ

ಬಲವದ್ದತ್ತಂ, ಬಲಾದ್ಭುಕ್ತಂ ಬಲಾದ್ಯಚ್ಚಾಪಿ ಲೇಖಿತಮ್ ।
ಸರ್ವಾನ್ ಬಲಕೃತಾನರ್ಥಾನಕೃತಾನ್ ಮನುರಬ್ರವೀತ್ ॥—ಮನು

ಇವರಂತೆ ಶಾಂತಿಪರ್ವದಲ್ಲಿ (೨೬೭. ೩೮) ಹೇಳಿದೆ. ಒಬ್ಬ ಗಂಡನನ್ನು ಬಿಟ್ಟು ಇನ್ನೊಬ್ಬನ ಕೈ ಹಿಡಿವವಳಿಗೆ 'ಪುನರ್ಭೂ' ಎಂಬ ಹೆಸರುಂಟು. ಸ್ತ್ರೀಯು ತ್ಯಾಗ ಮಾಡತಕ್ಕದ್ದಲ್ಲ. ಹೆರವರಿಗೆ ಬಸುರಾಗಿದ್ದರೆ ಹೆರೆಯುತ್ತಲೆ ಅವಳು ಶುದ್ಧಳು. ಇಲ್ಲವಾದರೆ ಮುಟ್ಟಾದೊಡನೆ ಪವಿತ್ರಳು. ಏನು ಸುಟ್ಟರೂ ಅಗ್ನಿ ಪವಿತ್ರನೆ. ಎಲ್ಲಿ ಬಿದ್ದರೂ ಹೊನ್ನು ಅಶುದ್ಧವಾದಿತೆ? ಒತ್ತಾಯದಿಂದ ಒಪ್ಪಹಾಕಿಸಿಕೊಂಡ ಲೇಖವು ಹೇಗೆ ಸುಳ್ಳೋ ಹಾಗೆ ಬಲಾತ್ಕಾರದಿದಾಂದ ಭೋಗವು ಸುಳ್ಳು; ಆಗಿಲ್ಲವೆಂದೇ ಎಣಿಸಬೇಕಾಗಿ ಮನುಮಹರ್ಷಿಯ ಅಭಿಪ್ರಾಯ.

ಋಷಿಗಳ ಈ ಬಗೆಯ ದೃಷ್ಟಿಕೋನವೇ ಮಧ್ಯಕಾಲದಲ್ಲೂ ಉಳಿದಿದ್ದರೆ ಮುಸಲ್ಮಾನರ ಸಂಖ್ಯೆ ಇಷ್ಟು ಮಿತಿಮೀರಿ ಬೆಳೆಯುತ್ತಿದ್ದಿಲ್ಲ. ಹೆಣ್ಣು ಮಕ್ಕಳು ಪುಕ್ಕರೂ, ಹೇಡಿಗಳೂ, ಆಗುತ್ತಿದ್ದಿಲ್ಲ. ಪಾವಿತ್ರ್ಯದ ಹುಚ್ಚು ಕಲ್ಪನೆಗಳ ಭೂತ ಬಡಿದವರಾಗಿ ಅವರನ್ನು ಹೇಡಿಗಳನ್ನಾಗಿ ಮಾಡಿದ ಪಾಪ ಗಂಡಸರ ತಲೆಯ ಮೇಲೆಯೆ ಇದೆ. ಅವರ ಈ ಕೃತಿಯಿಂದ ಹೆಂಗಸು ಹೇಡಿ ಅಬಲೆಯಾದಳು. ಗಂಡಸು ಊನ ಅರ್ಧಾಂಗನಾದನು.

ಹಿಂದೆ ಆದುದ್ದು ಆಯ್ತು. ಮಹಾತ್ಮಾಜೀಯವರು ಪ್ರಾಚೀನ ಋಷಿಗಳಷ್ಟೇ ಉದಾರಭಾವದಿಂದ ನವಕಾಲಿ ಮೊದಲಾದ ಕಡೆಯಲ್ಲಿ ಹೆಣ್ಣುಮಕ್ಕಳ ಪುನರುದ್ಧಾರಮಾಡಿದ್ದಾರೆ. ಶ್ರೀರಾಮಚಂದ್ರನ ದರ್ಶನದಿಂದ ಅಹಲ್ಯೆಯು ಮನುಷ್ಯಳಾಗಲಿಲ್ಲವೆ? ಮಧ್ಯಕಾಲದ ಗಂಡರ ಶಾಪದಿಂದ ಕಲ್ಲಾದ ಸ್ತ್ರೀಸಮಾಜವನ್ನು ಗಾಂಧಿಜೀಯವರು ಮರಳಿ ಮನುಷ್ಯಕೋಟಿಗೆ ತಂದಿರುವರು. ಗಂಡಸಿನೊಡನೆ ಸಮಾನಸ್ಕಂಧಳಾಗಿ ಮನೆಯ ಹಾಗೂ ಸಾರ್ವಜನಿಕ ಸೇವೆಯಲ್ಲಿ ಭಾಗವಹಿಸಲು ಅನುವುಮಾಡಿಕೊಟ್ಟಿದ್ದಾರೆ. ಮಾನವಕುಲದ ತಾಯಿಯಾಗಿ ಲೋಕಕ್ಕೆ ತ್ಯಾಗ, ಕರುಣೆ, ಪ್ರೀತಿ, ವಿಶ್ವಾಸ ಸೇವೆಗಳ ಪಾಠವನ್ನು ಕಲಿಸುತ್ತ ವ್ಯಕ್ತಿವೈಶಿಷ್ಟ್ಯವನ್ನು ವಿಕಾಸಪಡಿಸಿಕೊಳ್ಳಲು ಸ್ತ್ರೀಯರಿಗೆ ಮಾರ್ಗ ತೋರಿಸಿದ್ದಾರೆ.

ಹೊಸ ಹಿಂದೂ ಕಾನೂನಿಗೆ ಅನುಸರಿಸಿ ಹಿಂದೂ ಜಾತಿಯವರಲ್ಲಿ ಬೇಕಾದವರನ್ನು ಮದುವೆಯಾಗಬಹುದು; ಬೇಕಾದ ಜಾತಿಯ ಹುಡುಗ ದತ್ತಕತೆಗೆದುಕೊಳ್ಳ ಬಹುದು. ಮದುವೆಯ ಬಿಡುಗಡೆಗೂ, ಕೆಲವೊಂದು ವಿಶೇಷ ಕಾರಣಗಳಿಗಾಗಿ, ಅನುಮತಿಯಿದೆ. ಇವು ಪರಿಸ್ಥಿತಿಗೆ ತಕ್ಕ ಮಾರ್ಪಾಟಗಳೇ ಆಗಿವೆ. ಭಾರತದ ಒಳಜಾತಿಗಳಲ್ಲಿ ಐಕ್ಯ, ಸಮಾನ ಭಾವಗಳು ಬೆಳೆಯಲು ಮಿಶ್ರವಿವಾಹಗಳು ಆಗುಬೇಕಾದುದು ಅನಿವಾರ್ಯ. ಇನ್ನೊಂದು ಜಾತಿಯ ನಲ್ಲಿಯಲ್ಲಾದ ಸಂತತಿಯನ್ನು ಎಷ್ಟೇ ಆತ್ಮೀಯತೆಯಿಂದ ನಡಸಿಕೊಂಡರೂ ಪ್ರತ್ಯಕ್ಷ ಮಗನನ್ನಾಗಿ ತಕ್ಕೊಳ್ಳಲು ಇದ್ದ ಆತಂಕವು ಇನ್ನು ದೂರವಾಗಲಿದೆ. ಮದುವೆಯ ಜಾಲದಲ್ಲಿ ತಿಳಗೇಡಿತನದಿಂದ ಅಥವಾ ಮೋಸಹೋಗಿ ಸಿಕ್ಕುಬಿದ್ದೆವೆಂದು ಆಜನ್ಮ ಗೊಣಗುತ್ತ, ತಿಣಕುತ್ತ, ಗೃಹಕಲಹಗಳು ನಡೆಯದಿರಲೆಂದು ಬಿಡುಗಡೆಯ ಸೀಳುದಾರಿಯನ್ನು ಇಟ್ಟಿದ್ದು ಲೇಸಾಯ್ತು.

ಜಾತೀಯತೆಯು ಅಳಿಯಲು ಈಗಿನ ಮತ, ಧರ್ಮಕ್ಕನುಸರಿಸಿರುವ ಪಂಗಡಗಳು ಹಿಂದೆಬಿದ್ದು, ಸಾಂಸ್ಕೃತಿಕ ಸಂಬಂಧದ ಗುಂಪುಗಳು ತಲೆದೋರಬೇಕು. ವೈದ್ಯಕೀ ವೃತ್ತಿಯವರು ಅಧ್ಯಯನ ಅಧ್ಯಾಪನಗಳೇ ಮುಖ್ಯ ಹೋರೆಯಾಗಿರುವವರು, ಸಾಹಿತಿಗಳು, ಪ್ರತಿಕಾವ್ಯವಸಾಯದವರು, ವಕೀಲರು, ವರ್ತಕರು ಎಂದು ಮುಂತಾದವರ ಸಂಘಗಳು ಈಗ ಇಲ್ಲವೆಂತಲ್ಲ.

ಆದರೆ ಆ ಸದಸ್ಯರಲ್ಲಿ ಜಾತೀಯತೆಗೇ ಪ್ರಾಧಾನ್ಯವಿದ್ದು, ಅವರಲ್ಲಿ ಆತ್ಮೀಯತೆಯು ತೀರ ಕಡಿಮೆಯಿರುತ್ತದೆ. ಅವರ ಸಂಬಂಧಗಳು ಬೇರೂರಿ ಬೆಳೆಯುತ್ತಿರುವ ವೃಕ್ಷದ ಸ್ವರೂಪವನ್ನು ಇನ್ನೂ ತಾಳಿಲ್ಲ. ತಮ್ಮ ವ್ಯವಸಾಯಕ್ಕೆ ಸಂಬಂಧಪಟ್ಟ ಕೆಲವೊಂದು ಕೆಲಸಕ್ಕಾಗಿ ಸೇರಿದವರು; ಆ ಕಾರ್ಯಕಲಾಪಗಳಲ್ಲಿ ಕೂಡ ಜಾತೀಯತೆಯ ದೃಷ್ಟಿಯು ನಷ್ಟವಾಗಿರುವುದಿಲ್ಲ. ಅಧ್ಯಕ್ಷ ಕಾರ್ಯದರ್ಶಿಗಳ ಆಯ್ಕೆಯಲ್ಲಿ ಜಾತೀಯ ದೆವ್ವ ಮೈಮೇಲೆ ಬರುತ್ತದೆ. ಒಂದೊಂದು ವೃತ್ತಿಯ ಸಮಾನಸಂಸ್ಕೃತಿಯ ಮನೆತನಗಳಲ್ಲಿ ಅನ್ನ-ಕನ್ಯಾ ವ್ಯವಹಾರಗಳು ಆರಂಭವಾದಲ್ಲಿ ಈ ಸಂಘ-ಸಂಸ್ಥೆಗಳೊಳಗಿನ ಜಾತೀಯತೆಯು ಕ್ರಮವಾಗಿ ತನ್ನತಾನೇ ಹಿಮ್ಮೆಟ್ಟುವುದು. ಅಲ್ಲದೆ ಆಯಾ ಜ್ಞಾನಶಾಖೆ, ಉದ್ಯೋಗಾದಿಗಳ ಅಭಿವೃದ್ಧಿಯೂ ಆಗುವದು.

ಕಾಲೇಜಿನ ತರುಣರಲ್ಲಿ ಭಿನ್ನ ಮತದವರು ಒಡನಾಡಿಗಳಾಗಿ ಜೀವದ ಗೆಳೆಯರಾಗಿ ಬೆಳೆಯುತ್ತಾರೆ. ಆದರೆ, ಅವರವರ ಮನೆಯ ಜಾತೀಯ ಭಾವನೆಯು ಅವರ ಸ್ನೇಹವೃದ್ಧಿಗೆ ಮುಂದಿನ ಜೀವನದಲ್ಲಿ ಅಡ್ಡಿಯನ್ನುಂಟು ಮಾಡುತ್ತಿರುತ್ತದೆ. ಇಂತಹ ಎಡರುಗಳಲ್ಲಿ ವೈವಾಹಿಕ ಬಂಧನದಿಂದ ನಾಡಿನ ಒಕ್ಕಟ್ಟಿಗೆ ಬಲಬರುತ್ತದೆ. ರಾಜಕೀಯ, ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗ ವಹಿಸುತ್ತಿರುವಾಗ ತೀರ ಆತ್ಮೀಯರಾಗಿ ಒಬ್ಬರೊಬ್ಬರೊಡನೆ ಗುಟ್ಟು ಕೊಟ್ಟು ನಡಕೊಳ್ಳುವ ಭಿನ್ನ ಮತೀಯರು ಅಪರೂಪವಲ್ಲ. ವಿಚಾರದ ಮಟ್ಟದಲ್ಲಿ, ಸಾಮಾಜಿಕ ಸ್ಥಿತಿಗಳಲ್ಲಿ, ಆರ್ಥಿಕ ಪರಿಸ್ಥಿತಿಯಲ್ಲಿ ಇಬ್ಬರು ಸಮಾನಸ್ಕಂಧರಾಗಿರುತ್ತಾರೆ. ಆದರೆ ಜಾತಿಭೇದವು ಅವರ ಸಾಮರಸ್ಯಕ್ಕೆ ಅಡ್ಡಬರುತ್ತಿರುತ್ತದೆ. ಜಾತಿಯ ಅಡ್ಡಗೋಡೆಯನ್ನು ತೆಗೆದರೆ ಅವರು ಒಂದೆ ಮನೆಯವರಾಗುವರು. ಬರಲಿರುವ ಹಿಂದೂ ಕಾಯಿದೆಯು ಇವಕ್ಕೆಲ್ಲ ತುಂಬ ಪೋಷಕವಾಗಿದೆ. ಅಸಹಕಾರದ ಆಂದೋಲನದಲ್ಲಿ ಈ ಬಗೆಯಾದ ಹಲಕೆಲವು ಸಂಬಂಧಗಳು ಬಂದಿವೆ. ಗಾಂಧಿ-ಚಕ್ರವರ್ತಿ ಮನೆತನಗಳ ಬೀಗತನವು ಅವೆಲ್ಲವುಗಳ ಪ್ರಾತಿನಿಧಿಕವಾಗಿದೆ. ಬ್ರಾಹ್ಮಣ-ಬ್ರಾಹ್ಮಣೇತರ ಐಕ್ಯದ ಮುಂಗುರುಹು ಇದು. ನೆಹರು-ಗಾಂಧಿಗಳ ವಿವಾಹವು ಭಾವೀ ಹಿಂದೂ ಸಮಾಜದ ಶುಭಸೂಚನೆ.

ಇದೆಲ್ಲವೂ ಸರಿಯಾಯ್ತು. ಎಲ್ಲ ಮುಸಲ್ಮಾನೇತರ ಭಾರತೀಯ

ಸಮಾಜವೂ ಒಂದುಗೂಡಿ ಹಿಂದೂವೆನಿಸಬಹುದು (ವೈಯಕ್ತಿಕ ಧಾರ್ಮಿಕ ಸ್ವಾತಂತ್ರ್ಯವನ್ನಿಟ್ಟುಕೊಂಡು). ಆದರೆ ಪಾಕಿಸ್ತಾನವು ಸ್ವತಂತ್ರ ರಾಷ್ಟ್ರವಾಗಿ ರುವ ವರೆಗೆ ಮುಸಲ್ಮಾನರ ತೊಡಕು ಬೇಗನೆ ಬಿಟ್ಟೀತೆಂದು ತೋರುವುದಿಲ್ಲ. ಜರ್ಮನ್ ಯುವಕ ಅಥವಾ ಯುವತಿಯರೊಡನೆ ಇಂಗ್ಲಂಡ, ಅಮೇರಿಕಾ, ರಶಿಯಾದಿ ರಾಷ್ಟ್ರದ ತರುಣ-ತರುಣಿಯರು ಮದುವೆಯಾಗುವುದು ಆಯಾ ರಾಷ್ಟ್ರಗಳ ದೃಷ್ಟಿಯಿಂದ ಬಾಧಕವೆಂದು ಎಣಿಸಲ್ಪಡುವುದಕ್ಕೆ ಯಾವ ಕಾರಣವೊ ಅದುವೆ ಹಿಂದೂ ಮತ್ತು ಮುಸ್ಲಿಂರಲ್ಲಿ ಈಗ ಉಂಟು. ವಿವಾಹ ವಿಚಾರದಲ್ಲಿ ಹಿಂದಕ್ಕೆ ಜಾತೀಯ ದೃಷ್ಟಿಯು ಮುಖ್ಯವಾಗಿದ್ದಂತೆ ಇನ್ನು ಮೇಲೆ ರಾಷ್ಟ್ರೀಯ ದೃಷ್ಟಿಗೆ ಪ್ರಥಮ ಸ್ಥಾನವು ಬರಲಿದೆ; ಅಲ್ಲ, ಬಂದೇ ಇದೆ.

ಮೊನ್ನೆ ಕೇಂದ್ರ ಜಾನಪದದಲ್ಲಿ ಮಾನ್ಯ ಮಂತ್ರಿಗಳಿಗೆ ಸದಸ್ಯರೊಬ್ಬರು ಪ್ರಶ್ನೆ ಕೇಳಿದರು: ಪರದೇಶದವರನ್ನು ಮದುವೆಯಾದವರಿಗೆ ಸರಕಾರ ತಮ್ಮಲ್ಲಿ ಹೊರ ( ಹಾಗೂ ಒಳ ) ನಾಡಿನೊಳಗಿನ ವರಿಷ್ಠಾಧಿಕಾರದಲ್ಲಿ ನೇಮಿಸಲು ಆತಂಕಪಡುವುದಿಲ್ಲವೆ?

ಇಂತಹ ಮದುವೆಗಳಿಗೆ ಸರಕಾರವು ಅಷ್ಟು ಸಮ್ಮತಿಸುವುದಿಲ್ಲವೆಂದೂ ವಿಶೇಷ ಯೋಗ್ಯತೆಯಿದ್ದುದಕ್ಕಾಗಿ ತೀರ ಅವಶ್ಯಕವೆನಿಸಿದರೆ ಮಾತ್ರ ಇಂತಹ ರನ್ನು ಅಪವಾದವೆಂದು ತಮ್ಮ ನಿಯೋಗದಲ್ಲಿ ಇಟ್ಟುಕೊಳ್ಳಬಹುದಾಗಿಯೂ ಸರಕಾರದ ಪರವಾಗಿ ಉತ್ತರವು ದೊರೆತಿತು.

ರಾಷ್ಟ್ರಹಿತಕ್ಕಾಗಿಯೆ ಮದುವೆಗಳ ನೋಂದಣಿ ಅವಶ್ಯ. ಕೇವಲ ಧಾರ್ಮಿಕ ವಿಧಿ ಮಾತ್ರ ಮಾಡಿಸತಕ್ಕವರು, ಎಂಬ ವಿಚಾರವು ಇನ್ನು ನಡೆಯದು. ಪರರಾಷ್ಟ್ರದ ಹೆಣ್ಣುಗಂಡಿನ ಸಂಬಂಧಗಳು ತಮ್ಮ ನಾಡಿನಲ್ಲಿ ಎಷ್ಟಿವೆ ಎಂಬುದು ನಿಶ್ಚಿತವಾಗಿ ಗೊತ್ತಿದ್ದರೆ ಮಾತ್ರ ಸರಕಾರವು ಅವರ ವಿಷಯಕ್ಕೆ ಜಾಗರೂಕ ವಾಗಿರಲು ಸಾಧ್ಯ. ಪಾಕಿಸ್ತಾನವು ಸ್ವತಂತ್ರ. ಅದು ಪರರಾಷ್ಟ್ರವೆಂದು ಸಾರಲಾಗಿದೆ. ಹಾಗಾದರೆ ಇಲ್ಲಿಯ ಮುಸ್ಲಿಂರು ಪಾಕಿಸ್ತಾನಿ ಮುಸಲ್ಮಾನ ರೊಡನೆ ಬೀಗತನ ಬೆಳಸುವುದು ಪರರಾಷ್ಟ್ರದೊಡನೆ ಸಂಬಂಧ ಮಾಡಿದಂತೆ ಎಂದು ಎಣಿಸಲೇ ಬೇಕಲ್ಲವೆ? ಈಗ ಇಲ್ಲಿಯ ಮುಸಲ್ಮಾನರ ಪರಿಸ್ಥಿತಿ ತ್ರಿಶಂಕುವಿನಂತಾಗಿದೆ. ದುರ್ದೈವದಿಂದ ಹಿಂದುಸ್ತಾನ-ಪಾಕಿಸ್ತಾನಗಳಲ್ಲಿ

ಪ್ರತ್ಯಕ್ಷ ಯುದ್ಧವು ಆರಂಭವಾದರಂತೂ ಭಾರತದೊಳಗಿನ ಮುಹಮ್ಮದೀಯರ ಸ್ಥಿತಿ ಇನ್ನೂ ವಿಚಿತ್ರವಾಗುವುದು. ಇಂತಹ ಅವಸ್ಥೆಯಲ್ಲಿ ಹಿಂದೂ-ಮುಸಲ್ಮಾನರಲ್ಲಿ ಮದುವೆಗಳು ತೀರ ಅನಿಷ್ಟ.

ಜಮಿಯತ್-ಉಲ್-ಉಲೇಮಾ, ಮೋಮಿನ ಮುಸ್ಲಿಂ ಮಹಾಸಭೆ ಮೊದಲಾದ ಸಂಸ್ಥೆಗಳೂ, ಸುಹರ್ವರ್ದಿ ಪ್ರಭೃತಿ ಒಂದು ಕಾಲಕ್ಕೆ ಲೀಗಿನ ಅತ್ಯಾಚಾರಿಗಳ ನೇತಾರರೂ ಆದ ಪ್ರಮುಖರೂ ಇನ್ನುಮೇಲೆ ಇಲ್ಲಿಯ ಮುಸಲ್ಮಾನರೆಲ್ಲ ಭಾರತನಿಷ್ಠರಾಗಿಯೇ ಉಳಿಯತಕ್ಕದ್ದೆಂದು ಪ್ರತಿಜ್ಞಾಪೂರ್ವಕವಾಗಿ ಹೇಳುತ್ತಿದ್ದಾರೆ. ನಿಜಾಮು ಪಾಕಿಸ್ತಾನ ಕೂಡ ಕಾದಬೇಕಾದಾಗ ತಾವು ಹಿಂದುಸ್ತಾನದ ಪಕ್ಷ ವಹಿಸತಕ್ಕವರೆಂದೂ ಮಾತನಾಡುತ್ತಿದ್ದಾರೆ. ಇವರಲ್ಲಿ ಎಲ್ಲರೂ ಸುಳ್ಳಾಡುವರೆಂಬುದು ಅನ್ಯಾಯ. ಆದರೂ ಕುರಾನಿನಲ್ಲಿ ಹೇಳಿದ್ದೆಲ್ಲ ಅಕ್ಷರಶಃ ಪಾಲಿಸಲ್ಪಡತಕ್ಕದ್ದೇ; ಅದು ತಮ್ಮ ಕರ್ತವ್ಯವೆಂದು ಎಲ್ಲಿಯ ವರೆಗೆ ನಂಬಿರುವರೊ, ಬೆಳಗೂ ಬೈಗೂ ಮಕ್ಕಾ ಮದೀನಾದತ್ತ ಕಣ್ಣಿಟ್ಟು ಇವರ ಪ್ರಾರ್ಥನೆಗಳು ಎಲ್ಲಿಯ ವರೆಗೆ ಅನುದಿನವೂ ಪ್ರತಿ ಮಶೀದಿಗಳಲ್ಲಿ ನಡೆತ್ತಿವೆಯೊ, ತಮ್ಮ ನಡೆನುಡಿ ಉಡುಪುಗಳಲ್ಲಿ ಭಾರತೀಯತೆಗಿಂತ ತುರ್ಕ, ಅರಬಿ, ಫಾರ್ಸಿಗಳ ಅಂಶವೇ ಹೆಚ್ಚು ಹೆಚ್ಚಾಗಿ ಇರಬೇಕೆಂಬ ಮನೀಷೆಯು ಉರ್ದು, ಹಿಂದುಸ್ತಾನಿ, ಫೈಜ, ಟೋಪಿ ಮೊದಲಾದ ತೆರನಾಗಿ ಎಲ್ಲಿಯ ವರೆಗೆ ವ್ಯಕ್ತವಾಗುತ್ತಿದೆಯೊ ಅಲ್ಲಿಯ ವರೆಗೆ ಮುಸಲ್ಮಾನರ ಧರ್ಮಾಂಧತೆಯು ಅಳಿದು ಅವರು ಸಂಪೂರ್ಣ ಭಾರತೀಯ ನಾಗರಿಕರಾದಾರೆಂದು ಗ್ರಹಿಸುವುದು ರಾಷ್ಟ್ರೀಯ ಗಂಡಾಂತರಕ್ಕೆ ಕಾರಣವಾಗದೆ ಇರದು. ಈ ಮಾತನ್ನು ದ್ವಿರುಕ್ತಿಯುಸಿಸಿದರೂ ಎಷ್ಟು ಬಾರಿ ಜನರ ಗಮನಕ್ಕೆ ತಂದರೂ ಕಡಿಮೆಯೆನಿಸುತ್ತದೆ.

ಪೋಪನಿಂದ ಪಲ್ಟುಹರಕೊಂಡು ಯುರೋಪದೊಳಗಿನ ಕ್ರಿಸ್ತಿಧರ್ಮಗಳಲ್ಲಾದ ನವಪರಿವರ್ತನದಂತೆ ಹಿಂದುಸ್ತಾನದೊಳಗಿನ ಮುಹಮ್ಮದೀಯರಲ್ಲೂ ಹೊಸ ಮಾರ್ಪಾಡು ಆಗುವದು ಅತ್ಯಾವಶ್ಯಕ. ತಮ್ಮ ಧರ್ಮಗ್ರಂಥದೊಳಗಿನ ಅತಿವಾದದ ಅವಿಚಾರದ ಅಂಶಗಳನ್ನು ತಾವು ಒಪ್ಪುವುದಿಲ್ಲವೆಂದು ಸಾರಿ, ಮೌ. ಅಝುದರಂತಹರು ಆಧುನಿಕಕಾಲಕ್ಕೆ ತಕ್ಕಂತಹ ಹೊಸ ಕುರಾನ ಸಂಗ್ರಹವನ್ನು ಸಿದ್ಧಪಡಿಸಿ ಪ್ರಚಾರದಲ್ಲಿ ತರುವ ಎದೆಗಾರಿಕೆಯನ್ನು ತೋರಿಸ

ಬೇಕು. ಮುಹಮ್ಮದೀಯ ಲೂಥರನೊಬ್ಬನು ಹುಟ್ಟಿ ಭಾರತೀಯ ಮುಸ್ಲಿಂ ಪಥವನ್ನು ಸ್ಥಾಪಿಸಬೇಕು. ಅದು ತನ್ನ ವೈಶಿಷ್ಟ್ಯದಿಂದ ಪಾಕಿಸ್ತಾನಗಳಿಂದ ಭಿನ್ನ, ದೂರವೆಂಬುದು ಸಿದ್ಧವಾಗಬೇಕು. ಭಾರತೀಯ ಈ ಪಂಥವು ಪಾಕಿಸ್ತಾನಾದಿಗಳ ಮತಕ್ಕಿಂತ ಮಿಗಿಲಾದುದೆಂದೂ ಭಾರತದಲ್ಲಿ ಜನ್ಮ ತಾಳಿದ್ದು ತಮ್ಮ ಭಾಗ್ಯವೆಂದೂ ಮುಸಲ್ಮಾನ ಜನವಲ್ಲಿಲ್ಲ ಶ್ರದ್ಧೆಯು ಮೈಗೂಡುವ ವರೆಗೆ ಈ ಜನವನ್ನು ಹಿಂದುಸ್ತಾನದವರು ಸಂದೇಹದಿಂದ ನೋಡಿದರೆ ತಪ್ಪಲ್ಲ; ಭಾರತ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವ ದೃಷ್ಟಿಯಿಂದ ಈ ಸಂದೇಹ ದೃಷ್ಟಿಯು ಅವಶ್ಯಕ ಕರ್ತವ್ಯವೆಂದೇ ಹೇಳಬೇಕಾದೀತು.

ತಮ್ಮ ನಡೆನುಡಿಗಳಲ್ಲಿ ಭಾರತೀಯತೆಯನ್ನು ಹಿಂದೂತನವನ್ನು ತಂದುಕೊಳ್ಳದೆ, ಅದರಿಂದ ತಾವು ಬೇರೆಯೆ ಎಂಬಂತೆ ತೋರಿಸಿಕೊಳ್ಳುವುದು ಮುಸಲ್ಮಾನರಿಗೆ ಇನ್ನು ಮೇಲೆ ತೊಂದರೆಗೆ ಕಾರಣವಾಗುವುದು. ಅದನ್ನು ತಪ್ಪಿಸಲು ಅನೇಕರು ಆರ್ಯಸಮಾಜಾದಿಗಳಿಂದ ಸಂಸ್ಕಾರಹೊಂದಿ ಹಿಂದೂಗಳಾಗಲು ಒಲವುಳ್ಳವರಾಗುವುದು ಸ್ವಾಭಾವಿಕ. ಹಿಂದು ಹೆಣ್ಣು ಅಥವಾ ಗಂಡು ಮುಸಲ್ಮಾನರೊಡನೆ ಪ್ರೀತಿಬಂಧನದಲ್ಲಿ ಸಿಲುಕಿದಾಗ ಅವರು ಮುಸಲ್ಮಾನರಾಗುವುದೇ ಈ ವರೆಗಿನ ವಾಡಿಕೆಯಾಗಿತ್ತು. ಏಕೆಂದರೆ ಹಿಂದೂ ಸಮಾಜವು ರಾಷ್ಟ್ರೀಯ ದೃಷ್ಟಿಯಿಂದ ಎಚ್ಚತ್ತಿದ್ದಿಲ್ಲ; ಇನ್ನು ಮೇಲೆ ಅಂತಹ ಪ್ರಸಂಗಗಳಲ್ಲಿ ಅವರು ಹಿಂದೂ ಪಂಗಡದಲ್ಲಿ ಸೇರಲು ಬಯಸುವುದೇ ಅವರ ಬಾಳ್ವೆಗೆ ಹೆಚ್ಚು ಅನುಕೂಲವಾದೀತು. ಹಿಂದೂ ಸಮಾಜವು ಇಂತಹರನ್ನು ಅಳವಡಿಸಿಕೊಳ್ಳಲು ಅವಶ್ಯಕವಾದ ಇಂಬುವುಳ್ಳದ್ದೂ ಆಗುತ್ತಿದೆ.

ತಂದೆಯಿಂದ ಜಾತಿಯನ್ನು ನಿರ್ಧರಿಸುವುದಂತೂ ಈಗ ಅವಶ್ಯಕವೇ. ಆದರೆ ಹಿಂದೂ ಸಮಾಜವು ಈ ವರೆಗೆ ಪರಧರ್ಮಿಗಳ ಎಂದರೆ (ಭಾರತದ ಹೊರಗಿನ ಮತಪ್ರಸಾರಕರ) ಮಾಯಾಜಾಲದಲ್ಲಿ ಸಿಲುಕಿ ಎಣಿಕೆಗೆ ಮೀರಿದ ಹಾನಿಗೆ ಒಳಗಾಗಿದೆ. ಈ ಹಾನಿಯು ತುಂಬಿ ಬರಬೇಕಾದರೆ, ಉತ್ತರ ಹಿಂದುಸ್ತಾನದ ಪ್ರಸಿದ್ಧ ಮುಖಂಡ ಸನ್ಯಾಸಿಗಳೊಬ್ಬರು ಪ್ರತಿಪಾದಿಸುವಂತೆ, ಗಂಡಾಗಲಿ, ಹೆಣ್ಣಾಗಲಿ ಯಾವುದೊಂದು ಪಕ್ಷವು ಹಿಂದುವಾಗಿದ್ದರೂ ಆ

ವಿವಾಹಿತರು ಹಿಂದುಗಳೆಂದೇ ಎಣಿಸಲ್ಪಡುವಂತೆ ಕಾನೂನು ಆಗಿ ಅದು ಬೇಗನೆ ಆಚಾರದಲ್ಲಿ ಬಂದಷ್ಟು ಒಳಿತು. ಈ ವರೆಗೆ ಹಿಂದೂಸಮಾಜವು ಎರಡೂ ಬದಿಯಿಂದಲೂ ಹಾನಿಗೆ ಗುರಿಯಾಗಿದೆ. ಹಿಂದುವೆಂಬುವವರು ಬೇಗನೆ ಎಚ್ಚತ್ತು ಈ ತಪ್ಪನ್ನು ತಿದ್ದಿಕೊಳ್ಳದೆ ಇದ್ದಲ್ಲಿ ನಮ್ಮ ಸಮಾಜದ ಮೇಲೆ ಗಂಡಾಂತರವು ಬರುತ್ತಿರುವ ದಾರಿಗಳನ್ನು ಇನ್ನು ನಾವೇ ತೆರೆದು ಇಟ್ಟಂತಾಗುವುದು. ಅನೇಕ ಮೂರ್ತಿಭಂಜಕರೂ ಭಾರತ ವಿಚ್ಛೇದಕರೂ ಜನ್ಮತಾಳಿ ಎದುರಾಳಿಗಳಾಗಿ ಹೊರಬಿದ್ದುದು ಈ ದಾರಿಯಿಂದಲೇ.

ಮಿಶ್ರವಿವಾಹಗಳೆಂದೊಡನೆ ಮನಸಿಗೆ ಹೇಗೊ ಎನಿಸುವುದು. ಮಿಶ್ರ ವಿವಾಹಕ್ಕಾಗಿ ಮಿಶ್ರವಿವಾಹ ಮಾಡಬೇಕಿಲ್ಲ. ರಾಷ್ಟ್ರೀಯ ಐಕ್ಯಕ್ಕೆ, ಮಾನವನ ಉನ್ನತಿಗೆ ಸಹಾಯಕವಾಗುತ್ತಿದ್ದರೆ ಹೇಗೊ ಎನಿಸುವ ಮನೋಭಾವವನ್ನು ವಿವೇಕದಿಂದ ತಿದ್ದಿಕೊಳ್ಳುವುದು ವಿಚಾರಿಗಳ ಕರ್ತವ್ಯವಾಗಿದೆ. ಜಾತೀಯತೆ ಯಳಿದು ಭಾರತದ ಒಂದು ಜನಾಂಗ ನಿರ್ಮಾಣವಾಗಬೇಕಿದ್ದರೆ, ರಾಷ್ಟ್ರೀಯ ಸೈನ್ಯದ ಅಂತಃಶಕ್ತಿಯು ಜಾತಿಭೇದಗಳ ಮೂಲಕ ನಷ್ಟವಾಗಬಾರದಾಗಿದ್ದರೆ, ಎಂತಹ ಕಿರುಕುಳ ಮನೆತನದಲ್ಲಿ ಹುಟ್ಟಿದ್ದರೂ ಗುಣಕ್ಕೆ ಮನ್ನಣೆ ದೊರೆತು ವ್ಯಕ್ತಿಗಳೊಳಗಿನ ಮಾನವತೆಯು ವಿಕಾಸವಾಗಬೇಕಿದ್ದರೆ ವಿವಾಹಾದಿಗಳಲ್ಲಿ ವ್ಯಕ್ತಿಯ ಸಂಸ್ಕೃತಿಗೆ ಪ್ರಥಮಸ್ಥಾನವಿರಬೇಕು. ತನ್ನ ಶ್ರೇಷ್ಠ ಗುಣಗಳಿಂದ, ಪೌರುಷ, ಪ್ರಯತ್ನಗಳಂಥ ಯಾವ ಪದವಿಯನ್ನೂ ಪಡೆಯಲು ಎಲ್ಲರಿಗೆ ಅರ್ಹತೆಯಿರಬೇಕು. ಇದರಿಂದಲೇ ನಾಡಿನ ಏಳಿಗೆ. ಇದು ನಿಜವಿದ್ದರೆ ಕ್ರಮವಾಗಿ ಮಿಶ್ರವಿವಾಹಗಳು ಪ್ರಚಾರದಲ್ಲಿ ಬರಲೇಬೇಕೆಂಬುದನ್ನು ಒಪ್ಪ ಬೇಕಾಗುತ್ತದೆ ಮೇಲಣ ಮೂಲಭೂತ ವಿಚಾರವೇ ತಪ್ಪಿದ್ದಲ್ಲಿ ತಿಳಿದವರು ಹಾಗೆ ಅದನ್ನು ಸಮಂಜಸವಾದ ರೀತಿಯಲ್ಲಿ (ಕೇವಲ ಶಬ್ದಪ್ರಮಾಣದಿಂದಲ್ಲ) ಸಿದ್ಧಪಡಿಸಬೇಕಾಗಿ ಬಿನ್ನಹ.

ಅಮೇರಿಕೆಯಲ್ಲಿ ಬೇರೆ ಬೇರೆ ದೇಶಗಳಿಂದ ಬಂದ ಜನರು ಅಲ್ಲಿ ನೆಲೆಗೊಂಡು ಅಲ್ಲಿಯ ನಾಗರಿಕರಾಗಿ ಒಬ್ಬರೊಡನೊಬ್ಬರು ಬೆರೆಯುತ್ತಿದ್ದಾರೆ. ಅಲ್ಲಿ ಮಿಶ್ರವಿವಾಹದ ಪ್ರಶ್ನೆಯು ಶಾಸ್ತ್ರೀಯ ಅಭ್ಯಾಸದ ಅವಶ್ಯಕತೆಯುಂಟಾ ಗಿದೆ. ಸಮಾನ ಸಂಸ್ಕೃತಿಯ, ತೀರ ಭಿನ್ನವಲ್ಲದ ಜನಾಂಗಗಳಲ್ಲಿ ಮದುವೆ

ಗಳಾಗುವುದರಿಂದ ಹೊಸ ಪೀಳಿಗೆಯು ಉತ್ತಮಗೊಳ್ಳುವುದೆಂದು ಬಲ್ಲಿದರು ನಿರ್ಧರಿಸಿದ್ದಾರೆ.

The mixture of elements, not too dissimilar, provided the social heritage is not unduly disturbed, is on the whole benificial. It results in the increase of vigour and energy in the offspring.

—Mr. Cassel in Jenetics & Uginics.

Immigrants are desirable, who are of good blood, and undesirable who are of bad blood.

—Duvenport.

Inter-marriages of divers strains is important, both from point of view mentioned above, and on account of the increased vigour resulting from the heterozynous conditions, but there are important limitations to the width of cross which are desirable.

-- Heridity & Uginics.

ಒಳ್ಳೆಯ ಮನೆತನಗಳಲ್ಲಿ ವಿವೇಕಯುಕ್ತರಾಗಿ ಸಂಯಮದಿಂದ ಮಿಶ್ರ ವಿವಾಹಗಳು ನಡೆದರೆ ಅದರಿಂದ ರಾಷ್ಟ್ರಕ್ಕೆ ಲಾಭವೇ ಇದೆ. ಮಾನವತೆಯ ವಿಕಾಸಕ್ಕೂ ಇದು ಸಹಕಾರಿ. ಮಹಾಭಾರತದಲ್ಲಿ ಕೃಷ್ಣ, ಭೀಮ, ಅರ್ಜುನಾದಿಗಳು ಮಿಶ್ರವಿವಾಹ ಮಾಡಿಕೊಂಡ ಉದಾಹರಣಗಳುಂಟು. ಆರ್ಯರು ಮತ್ತು ಯದು-ತುರ್ವ (ಹಟ್ಟಿಕಾರ) ಸಮ್ಮಿಶ್ರಣವೆ ಯಾದವರ ಕೌರವರ ಪೀಳಿಗೆಯು. ಇವರ ಮುಂದಿನ ರಾಷ್ಟ್ರಕೂಟ, ಚಲುಕ್ಯಾದಿ ಕಂನಾಡ ಅರಸು ಕುಲಗಳು. ಚಲುಕ್ಯ, ರಾಷ್ಟ್ರಕೂಟರು ಆಂಧ್ರ, ತಮಿಳ, ಲಾಟ, ವಂಗ ಮೊದಲಾದ ದೇಶದ ಕನ್ನೆಯರನ್ನು ಮದುವೆಯಾದುದುಂಟು; ( **ಕಂನಾಡ ಕತೆಯಲ್ಲಿ** ಇದರ ವಿವರಗಳು ಬಂದಿವೆ. )

Continued inbreading in a small society is certainly prejudicial. Probably alternate periods of fusion with immigrants and stabilising the results, give a nation the best chance of producing a fine type of men and women.

—Dean Inge.

ನಮ್ಮ ದೇಶದಲ್ಲಿ ಕೆಲವು ತೀರ ಸಣ್ಣ ಸಣ್ಣ ಜಾತಿಯ ಗುಂಪುಗಳಾಗಿವೆ. ಅವರಲ್ಲಿ ಹಲವರಿಗೆ ಮದುವೆಯಾಗದೆಯೆ ಉಳಿಯಬೇಕಾಗುತ್ತಿದೆ. ಇಲ್ಲವೆ ತೀರ ಹತ್ತಿರದಲ್ಲಿ ಎರಡು ಮೂರೇ ಮನೆತನಗಳಲ್ಲಿ ರಕ್ತಸಂಬಂಧವು ಮತ್ತೆ ಮತ್ತೆ ತಿರುಗುತ್ತಿರುತ್ತದೆ. ಇದು ಹಿಳ್ಳೆಯ ವಂಶೋತ್ಪತ್ತಿಗೆ ಹಾನಿಕರವೆಂದು ಆಧುನಿಕ ಶಾಸ್ತ್ರಗಳು ಸಪ್ರಮಾಣವಾಗಿ ಕಂಡುಹಿಡಿದಿವೆ. ಪ್ರಾಚೀನರ ಬೆಂಬಲವೂ ಇದಕ್ಕುಂಟು. ಈ ಕಾರಣದಿಂದಲೇ ಮಾತುಲ ಕನ್ಯಾದಿ ವಿವಾಹಗಳು ನಿಷಿದ್ಧ. ಇಂತಹ ಸಂದರ್ಭಗಳಲ್ಲಿ ಸಾಧಾರಣವಾಗಿ ತಮ್ಮ ಸಮಾನ ಇನ್ನೊಂದು ಜಾತಿಯವರೊಡನೆ ರಕ್ತಸಂಬಂಧ ಬೆಳಿಸುವಲ್ಲಿ ಎರಡು ಪಂಗಡಗಳಿಗೂ ಲಾಭವಿದೆ. ಸುಸಂತಾನದ ಆಶೆಯಿದೆ. ದನಗಳ ತಳಿ, ನಾಯಿಯ ಪೀಳಿಗೆಯೂ ಉತ್ಕೃಷ್ಟವಾಗಿರಬೇಕೆಂದು ಎಚ್ಚರಪಡುವೆವು. ಆದರೆ ಮಾನವ ಸಂತಾನದ ಅಭಿವೃದ್ಧಿಗಾಗಿ ಅಷ್ಟು ಶಾಸ್ತ್ರಶುದ್ಧವಾದ ಗಮನವನ್ನು ಕೊಡಲು ಸಾಧ್ಯವಾಗದಾಗಿದೆ. ಶಾರೀರಿಕ ಆರೋಗ್ಯ, ಬುದ್ಧಿ-ಹೃದಯಗಳ ಸಂಸ್ಕಾರಗಳನ್ನೇ ಕೇವಲ ಲಕ್ಷಿಸಿ ಮಾನವರ ಮದುವೆಗಳಾಗುವುವಕ್ಕೆ ಹಲವಾರು ತೊಂದರೆಗಳಿವೆ. ದೇಶ, ಧರ್ಮ, ಭಾಷೆ, ಆಚಾರಾದಿ ಸಂಗತಿಗಳ ವಿಚಾರವು ಇಲ್ಲಿ ಅಡಿಗಡಿಗೆ ನಡುವೆ ಬರುತ್ತದೆ. ಇದನ್ನು ಶಕ್ಯವಿದ್ದಷ್ಟು ಕಡಿಮೆ ಮಾಡುವ ದಿಕ್ಕಿನಲ್ಲಿ ಮುಂದುವರೆಯುವುದು ವಿಚಾರಿಗಳ ಕೆಲಸವಾಗಿದೆ.

ನಾಗರಿಕತೆಯನ್ನು ಅಳೆಯಬಹುದು. ಆದರೆ ಸಾಂಸ್ಕೃತಿಕ ದೃಷ್ಟಿಯಿಂದ ಯಾರು ಎಷ್ಟು ಎತ್ತರದವರೆಂದು ಹೇಳಲು ಬಾಹ್ಯಸಾಧನಗಳಿಲ್ಲ. ಕೀಳ್ದಾರಿಗೆ ಹೋಗುವ ಅಪೇಕ್ಷೆ ಯಾರಿಗೆ ತಾನೆ ಇದ್ದೀತು? ಪ್ರತಿಯೊಬ್ಬರೂ ತಮ್ಮ ತಮ್ಮ ಏಳ್ಗೆಯ ದೃಷ್ಟಿಯಿಂದಲೇ ಮುಂದಡಿಯಿಡುವರೆಂಬುದು ಒಂದು ಸಾಮಾನ್ಯ ಗೃಹೀತ ಸಿದ್ಧಾಂತ. ಆದುದರಿಂದ ಸಂಸ್ಕೃತಿಯ ಸಮಾನ ಮಟ್ಟದಲ್ಲಿ

ಇರುವವರ ಆಪ್ತ-ಬಾಂಧವ್ಯಗಳು ಬೆಳೆದು ಭಾರತದಲ್ಲಿ ಐಕ್ಯವೂ ಸಾಂಸ್ಕೃತಿಕ ವಿಕಾಸವೂ ಭರದಿಂದ ಆಗುವುದಕ್ಕೆ ಇಂಬು ದೊರೆಯುವುದು.

ಆತ್ಮವಿಕಾಸ, ಸಂತಾನ-ಸುಸಂವರ್ಧನದಲ್ಲಿ ಮದುವೆಯ ಸಾಫಲ್ಯ. ಆದರೆ ತಾರುಣ್ಯದ ಆಕರ್ಷಣದಲ್ಲಿ ಹಿಂದುಮುಂದಿನ ಯಾವ ವಿಚಾರಕ್ಕೆ ಎಡೆಗೊಡದೆ ದುಡುಕಿ ಮುಂದೆ ಪಶ್ಚಾತ್ತಾಪಕ್ಕೊಳಗಾಗುವುದುಂಟು. ಅಂತ ರ್ಜಾತೀಯ ವಿವಾಹಗಳಲ್ಲಿ ಮನೆಮನೆಗಳ ಸಂಪ್ರದಾಯ ಭಿನ್ನತೆಯ ಕಿಕ್ಕಾಟ; ಅಂತರ್‌ಪ್ರಾಂತೀಯ ವಿವಾಹಗಳಲ್ಲಿ ಆಚಾರಭೇದಗಳಲ್ಲದೆ, ಭಾಷಾಭೇದ ವೊಂದು ಹೆಚ್ಚಿನ ತೊಡಕು. ಕೇವಲ ಪೂರ್ವ ಸಂಪ್ರದಾಯದಂತೆಯೇ ಆಗುತ್ತಿರುವ ಮದುವೆಗಳಲ್ಲೂ ಗಂಡಾಂತರಗಳು ಕಡಿಮೆಯಿಲ್ಲ. ಹಾಗೆ ಆಗಿರುವ, ಆಗುತ್ತಿರುವ ಮದುವೆಗಳಲ್ಲಿ ದಾಂಪತ್ಯಸುಖದ ಅಭಾವವೂ ಆಭಾಸವೂ ಅನುಭವಕ್ಕೆ ಬರುತ್ತಿದ್ದರೂ ಅದು ಶಿಷ್ಟಸಂಪ್ರದಾಯವಾಗಿ ಬಿಟ್ಟಿದೆ. ಹೊಸ ಬಗೆಯ ಹಾದಿಯಲ್ಲಿ ಹೊರಟವರ ಮೇಲೆ ಇದನ್ನು ರೂಢಿಸುವ ಹೊಣೆ ಗಾರಿಕೆಯುಂಟೆಂಬುದನ್ನು ಅವರು ಮರೆಯಲಾಗದು. ಮದುವೆಯೆಂದರೆ ಸಾಮರಸ್ಯಯೋಗದ ಸಿದ್ಧಿಗಾಗಿ ವ್ರತಿಗಳಾಗಿ ಆ ಸಾಧನದ ಸಂಕಲ್ಪಬದ್ಧವಾದ ಗಂಡು-ಹೆಣ್ಣು.

ತಮ್ಮೊಳಗಿನ ಮಾನವತೆಯನ್ನೂ ದೈವೀಭಾವವನ್ನು ವಿಕಾಸಗೊಳಿಸಿ ಕೊಳ್ಳಲು ಪೋಷಕವಾದ ಆಚಾರಗಳನ್ನು ಭಿನ್ನಸಂಪ್ರದಾಯಗಳೊಳಗಿಂದಲೂ ಸ್ವೀಕರಿಸಲು ಇಬ್ಬರ ಮನಸ್ಸು ಸಿದ್ಧವಿರಬೇಕು. ಭಾರತಹಿತವೇ ತಮ್ಮ ಗುರಿಯಾಗಿದ್ದರೂ ತಾವು ನೆಲಸಿದ ಪ್ರಾಂತದ ಮುಖಾಂತರವಾಗಿಯೆ ಸೇವೆ ಯನ್ನು ಸಲ್ಲಿಸಿ ಆ ಗುರಿಯನ್ನು ಸಾಧಿಸುವುದು ಸರಿಯಾದ ಮಾರ್ಗ. ಮನೆ ಯಲ್ಲಿ ಗಂಡನ ಭಾಷೆಯೊ, ಹೆಂಡತಿಯ ಭಾಷೆಯೊ ಎಂಬ ಕಿಕ್ಕಾಟದಲ್ಲಿ ಕೆಲವು ದಂಪತಿಗಳು ಹಿಂದೀ ಅಥವಾ ಇಂಗ್ರೇಜಿಗೆ ಮಾರಿಕೊಂಡುದು ಕಂಡುಬರು ತ್ತದೆ. ಇದರಿಂದ ಅವರು, ತಾವು ನೆಲಸಿದ ಪ್ರಾಂತಕ್ಕೆ ಕೇಡುಬಗೆಯುವರು. ಅವರ ಹಾಗೂ ಅವರ ಸಂತಾನದ ವಿಚಾರ, ಸೇವೆಯ ಲಾಭವು ಆ ಪ್ರಾಂತಕ್ಕೆ ದೊರೆಯುವುದಿಲ್ಲ. ಇಷ್ಟೇ ಅಲ್ಲ, ಆ ದಂಪತಿಗಳೂ ಆ ಪ್ರಾಂತದ ಜೀವನ ದೊಡನೆ ಸಮರಸರಾಗದೆ ಸಾಮಾಜಿಕ ಸಂಬಂಧ-ಸಂಪರ್ಕಗಳಿಂದ ದೊರೆಯ ತಕ್ಕ ಅನುಪಮ ಆನಂದಕ್ಕೆ ಎರವಾಗುವರು. ಅವರೂ ಅವರ ಮಕ್ಕಳೂ

ಸಮಾಜಬಾಹಿರರಂತೆ, ವಲಸೆಗೆ ಬಂದ ಅನಾಥರಂತೆ, ಕರುಣಾಸ್ಪದರಾಗಿ ತೋರುತ್ತಾರೆ. ಪ್ರಾಂತದ ಭಾಷೆಗೆ ಮನ್ನಣೆ ಕೊಡದ ತಪ್ಪಿಗಾಗಿ ದೊರೆವ ಪ್ರಾಯಶ್ಚಿತ್ತವದು. ವಯಸ್ಸಿನ ವೈಷಮ್ಯದಂತೆ, ಆರ್ಥಿಕ ವೈಷಮ್ಯವೂ ವೈವಾಹಿಕ ಸೌಖ್ಯಕ್ಕೆ ಬಾಧಕ. ಸಾಂಸ್ಕೃತಿಕ ಮಟ್ಟದಲ್ಲಿರುವ ವ್ಯತ್ಯಾಸವೂ ಕಡಿಮೆ ಇದ್ದಷ್ಟು ಹಿತಕರ.

ವಿವಾಹಗಳಿಂದಲೆ ಐಕ್ಯವು ಸಾಧಿಸುವುದೆಂಬ ನಿಶ್ಚಿತವಿಲ್ಲದಿದ್ದರೂ ಅದು ಅತ್ಯಂತ ನಿಕಟಸಂಬಂಧಕ್ಕೆ ಒಂದು ಹಾದಿಯೆಂಬುದನ್ನು ಯಾರೂ ಅಲ್ಲಗಳೆಯು ಲಾರರು. ನಿಕಟಸಂಬಂಧಗಳು ಐಕ್ಯಕ್ಕೆ ಪೂರ್ವಪೀಠಿಕೆ. ಆದ ಕಾರಣ ಈಗಿರುವಷ್ಟಾದರೂ ಭಾರತವು ಅಖಂಡವಾಗಿ ಉಳಿಯಬೇಕೆಂದು ತ್ರಿಕರಣ ಪೂರ್ವಕವಾಗಿ ಹಂಬಲಿಸುವವರು, ದೇಹದ ಅಂಗಾಂಗಗಳಲ್ಲಿ ನಿಕಟ ಸಜೀವ ಸಂಬಂಧವಿರುವಂತೆ, ಜಾತಿಪಂಗಡಗಳಲ್ಲಿ, ಪ್ರಾಂತ-ಪ್ರಾಂತಗಳಲ್ಲಿ ಸಾಮ ರಸ್ಯವು ಉಂಟಾಗುವಂತೆ ನಮ್ಮ ನಡೆನುಡಿಗಳಲ್ಲಿ ಅಗತ್ಯವಾದ ಮಾರ್ಪಾಟ ಗಳನ್ನು ಮಾಡಿಕೊಳ್ಳುವ ಮನಸಿನ ಸಿದ್ಧತೆ ನಮ್ಮಲ್ಲಿದೆಯೆ ?

---

## ಸಂಕ್ರಮಣ

ಸಂಕ್ರಾಂತಿಯ ಮುಖ ಒಂದು ದಿಕ್ಕಿಗೆ; ಅವಳು ನಡೆದುದು ಇನ್ನೊಂದು ದಿಕ್ಕಿಗೆ, ಎಂಬ ಸೋಜಿಗವೆನಿಸುವ ವರ್ಣನೆಯು ಜ್ಯೋತಿಷಿಗಳಿಂದ ಕೇಳ ದೊರೆಯುತ್ತದೆ. ಪಂಚಾಂಗದಲ್ಲಿ ಓದಲು ಸಿಕ್ಕುತ್ತದೆ. ಸಂಕ್ರಾಂತಿಯ ನೈಜ ವರ್ಣನೆಯದು.

ಸಂಕ್ರಮಣಾವಸ್ಥೆಯಲ್ಲಿ ಲೋಕದ ನಡೆವಳಿಯೆ ಹಾಗಿರುತ್ತದೆ. ಜನ ಕಾಲಪರಿಸ್ಥಿತಿಯ ಒತ್ತಾಯದಲ್ಲಿ ಸಿಕ್ಕು ಮುಂದೆ ಸಾಗಿರುತ್ತಾರೆ. ಆದರೆ ಅವರ ಕಣ್ಣು ಎಡೆಬಿಡದೆ ಭೂತಕಾಲದ ಮೇಲೆ! ನಿತ್ಯ ಸಂಕ್ರಮಣದಲ್ಲಿ ಬೆನ್ನ ಕಡೆಗೆ ಸ್ವಲ್ಪ ಹೊರಳಿದ ಮುಖವು, ಮಹಾಸಂಕ್ರಾಂತಿಯಲ್ಲಿ ತೀರ ವಿಪರೀತ ವಾಗಿರುತ್ತದೆ. ಸಂಪೂರ್ಣ ವಿರುದ್ಧ ದಿಕ್ಕಿಗೆ!

ಇವಾಗ ನಮ್ಮಲ್ಲಿಯೆ ನೋಡಿ: ನಾವಿದ್ದುದು ೨೦ನೆಯ ಶತಮಾನದ ಮಧ್ಯದಲ್ಲಿ; ಆದರೆ ಕೆಲವರ ಕಣ್ಣು ಕ್ರಿಸ್ತಶಕದ ೬೦೦೦ ವರುಷಗಳ ಹಿಂದಿನ ಹರಪ್ಪಾ ಮೋಹೇಂಜೊದಾರೊ ಸಂಸ್ಕೃತಿಯಲ್ಲಿ ನಟ್ಟಿವೆ; ಕೆಲವರವು ವೇದ ಕಾಲದಲ್ಲಿ ಹೊರಳಾಡುತ್ತಿವೆ; ಕೆಲವರವು ಬುದ್ಧ-ಮಹಾವೀರರಲ್ಲಿ ಸೆರೆಸಿಕ್ಕಿವೆ. ಕೆಲವರವು ಪೈಗಂಬರನನ್ನು ಕಾಣಲು ಹಲಬುತ್ತಿವೆ. ಹಲವರವು ೮, ೧೨, ೧೪ನೆಯ ಶತಮಾನಗಳಲ್ಲಾದ ತಮ್ಮ ತಮ್ಮ ಮತಾಚಾರ್ಯರ ಹೆಜ್ಜೆಗಳನ್ನು ಹುಡುಕುತ್ತಿವೆ. ನೆಟ್ಟ ದೃಷ್ಟಿ ಒಂದು ದಿಕ್ಕಿನಲ್ಲಾದರೆ, ಇವರು ತುಳಿಯುತ್ತಿರುವ ದಾರಿ ಆಧುನಿಕ ನಾಗರಿಕತೆಯದು!

ಸೃಷ್ಟಿಕ್ರಮದಲ್ಲಿ, ಬೆನ್ನಿಗೆ ಮುಖ ತಿರುವಲು ಅವಕಾಶವೆ ಇಲ್ಲ. ಅವಶ್ಯಕವಿದ್ದಲ್ಲಿ ಎಡಬಲಕ್ಕೆ ಸ್ವಲ್ಪ ತಿರುಗಿ ನೋಡಬಹುದು; ಅಷ್ಟೆ. ಒಂದು ದಿಕ್ಕಿಗೆ ನೋಡುತ್ತ ಇನ್ನೊಂದು ದಿಕ್ಕಿಗೆ ನಡೆವವರು ಎಡಹಿ ಬೀಳುವರೆಂದು ಹೇಳಲು ಯಾವ ಜ್ಯೋತಿಷಿಯೂ ಬೇಕಾಗಿಲ್ಲ. ಅಡಿಗಡಿಗೆ ಭಾರತೀಯರು ಮುಗ್ಗರಿಸುತ್ತ ಕುಪ್ಪಳಿಸುತ್ತಿರುವ ಕಾರಣವನ್ನು ಇಲ್ಲಿ ಕಂಡುಕೊಳ್ಳಬಹುದು. ಸಂಕ್ರಮಣದಲ್ಲಿ ಮೂಗಿನ ನೇರಕ್ಕೆ ನೋಡುವವರಿಗೆ ಮುಂದಿನ ದಾರಿಯು ಸರಿಯಾಗಿ ತಿಳಿದೀತು. ಭೂತದಲ್ಲಿ ದೃಷ್ಟಿ ನೆಟ್ಟವರು ಭವ್ಯದತ್ತ ಸರಿಯಾಗಿ ಸಾಗಲಾರರು. ಮನುಷ್ಯರಿಗೆ ಹಿಂಬದಿಗೆ ಕಣ್ಣಿಲ್ಲ; ಮುಂಬದಿಗಿವೆ. ಮುನ್ನೋಟಕ್ಕೆ, ಮುನ್ನಡೆಗಾಗಿ ಇವೆ.

ಎರಡು ಕಡೆಗೆ ಸಿಲುಕಿ, ಬುದ್ಧಿ-ಹೃದಯಗಳ ಕಾಳಗದ ಕಣವಾದ ಮನುಷ್ಯನು ಸರಗುಂದಿದವನಾಗುವನು. ಪೌರುಷಹೀನನಾಗುವನು. ಹಳೆಯ ಒಂದು ಕಾಲದ ವಿಚಾರಗಳಲ್ಲಿ ಆಸಕ್ತಿ, ಶ್ರದ್ಧೆ; ಇಂದಿನ ಜೀವನದಲ್ಲಿ ಅನಿವಾರ್ಯವಾಗಿ ಇರಬೇಕಾದ ಪ್ರಸಂಗ. ಇಂತಹ ಜನಗಳು ಭೂತವ್ಯಕ್ತಿಗಳೇ ಸರಿ. ಇಂದಿನ ಅವರ ಬಾಳು ಭೂತದ ಕೇವಲ ಛಾಯೆ. ಇಂತಹರು ಇಂದಿನ ಜೀವನದಲ್ಲಿ ಆಗಾಗ ಹೊಸ-ಹಳೆಯ ತಿಕ್ಕಾಟದಲ್ಲಿ ತೊಳಲುತ್ತಾರೆ. ಆಡುವುದೊಂದು ಮಾಡುವುದೊಂದು ಇಂತಹ ಪ್ರಸಂಗಗಳು ಅನಿವಾರ್ಯವಾಗಿ ತಲೆದೋರುತ್ತವೆ. ಕೆಲವನ್ನಿಲ್ಲಿ ಉದಾಹರಿಸಬಹುದು.

ರಾಷ್ಟ್ರಧರ್ಮ ಮತ್ತು ಜಾತಿಧರ್ಮದಲ್ಲಿ ಪ್ರಧಾನವಾವುದು, ಗೌಣವಾವುದೆಂಬ ನಿರ್ಣಯವಿಲ್ಲದುದಕ್ಕಾಗಿ ಆಗುವ ಆಂತರಿಕ ಘರ್ಷಣವು ತುಂಬ ತಾಪದಾಯಕ

ವಾಗಿದೆ. ಕಾಂಗ್ರೆಸ್ಸಿನಲ್ಲಿ ಕೆಲಸ ಮಾಡಬೇಕೆಂಬ ಹುಮ್ಮಸ; ಆದರೆ ಅಸ್ಪೃಶ್ಯೋದ್ಧಾರದ ಚಳವಳಿ ತಮ್ಮ ಪೂರ್ವಪರಂಪರೆಗೆ ವಿರುದ್ಧ! ಸ್ವರಾಜ್ಯ ಸಿದ್ಧಿಗಾಗಿ ಸೆರೆಮನೆಗೆ ಹೋಗಿ ರಾಷ್ಟ್ರಸೇವೆ ಸಲ್ಲಿಸಿದ ಆತ್ಮತೃಪ್ತಿ; ಆದರೆ ಪಂಚಗವ್ಯಾದಿ ಪ್ರಾಯಶ್ಚಿತ್ತ ಪಡೆಯದಿದ್ದರೆ ಪಾಪವು ತಟ್ಟೀತೆಂಬ ಪುಕ್ಕು! ಹಳ್ಳಿಹಳ್ಳಿಗಳಲ್ಲಿ ಗ್ರಾಮಸೇವೆಗೆಯ್ಯುವಾಗ, ಸ್ವರಾಜ್ಯಾಶ್ರಮದಲ್ಲಿ ಶಿಕ್ಷೆಯನ್ನನುಭವಿಸುವಾಗ ಸೋದರರಕಿಂತಲೂ ಆತ್ಮೀಯರಾದ ಕೆಲವು ಗೆಳೆಯರಾಗಿದ್ದಾರೆ; ಅವರ ಶಿಕ್ಷಣ ಹೃದಯಸಂಸ್ಕಾರ ತನಗಿಂತ ಎಳ್ಳಷ್ಟೂ ಕಡಿಮೆಯಿಲ್ಲ. ಹೊರಗೆ ಅವರೊಡನೆ ಸಹಪಂಕ್ತಿಯಲ್ಲಿ ಉಂಡು ತಣಿದವನಿಗೆ ಮನೆಯಲ್ಲಿ ಬರುತ್ತಲೆ ಅಡ್ಡಪಂಕ್ತಿ! ಭಾಷಣ–ಲೇಖನಗಳಿಂದ ಜಾತೀಯತೆಯನ್ನು ಹಳಿದು ರಾಷ್ಟ್ರೀಯತೆಯ ಮೇಲ್ಮೆಯನ್ನು ಕೊಂಡಾಡುವುದು; ಸಂಘ–ಸಂಸ್ಥೆಗಳ ಆಯ್ಕೆ, ಅಧಿಕಾರ ಸ್ಥಾನ ಪಡೆವ ಸಂಧಿ ಬರುತ್ತಲೆ ಲಿಂಗ, ಜನಿವಾರಗಳನ್ನು ಮುಂದೆ ಮಾಡಿ ಕೆಲಸ ಸಾಧಿಸುವುದು!

ಹೀಗಾಗುವುದಕ್ಕೆ ಕಾರಣಗಳೆರಡು: ಒಂದು ಸ್ವಾರ್ಥ, ಇನ್ನೊಂದು ಧರ್ಮಭ್ರಷ್ಟೆ. ಧರ್ಮದ ಸೋಗಿನಲ್ಲಿ ಸ್ವಾರ್ಥವು ತನ್ನ ಕಾಯಕ ಸಾಧಿಸುತ್ತಿರುವಾಗ ಅದರ ದುಷ್ಪರಿಣಾಮಗಳು ಇನ್ನೂ ಭೀಕರ. ತಾನು ಸ್ವಾರ್ಥಕ್ಕಾಗಿ ಹೀಗೆ ಮಾಡುತ್ತಿದ್ದೇನೆಂಬ ಅರಿವು ದೃಢವಾದ ಹಾಗೆ ಆ ಕೆಲಸದ ಸೊಗಸು ಕಡಿಮೆಯಾಗುತ್ತದೆ. ಆದುದರಿಂದ ಸ್ವಾರ್ಥವು ಯಾವಾಗಲೂ ಧರ್ಮ, ಪರೋಪಕಾರಗಳ ವೇಷದಲ್ಲಿ ಮಾನವನನ್ನು ತನ್ನ ಇಷ್ಟದಂತೆ ಕುಣಿಸುತ್ತದೆ. ಸಜ್ಜನರು ಕೂಡ ಸ್ವಾರ್ಥಿಗಳಾಗುವುದು ಈ ಬಗೆಯಿಂದಲೆ. ತಾವು ಮಾಡುತ್ತಿರುವುದು ಕೇವಲ ಮುಖ್ಯವಾಗಿ ಸ್ವಾರ್ಥ; ಅದರೊಡನೆ ಸ್ವಲ್ಪ ಪರೋಪಕಾರವೂ ಘಟಿಸುವುದಲ್ಲ, ಅಷ್ಟಾದರೂ ಕಡಿಮೆಯೆ? ಎಂಬ ನರಿಗಳುಂಟು. ಇಂತಹರನ್ನು ಹುಡುಕಿ ಹೊರಗೆ ಹಾಕುವ ತತ್ಪರತೆಯಿರದ ಸಮಾಜವು ಆತ್ಮಹಾನಿಯನ್ನು ಮಾಡಿಕೊಳ್ಳುತ್ತದೆ.

ಧರ್ಮದ ನಿಜಸ್ವರೂಪವನ್ನು ಗ್ರಹಿಸಲಿಕ್ಕಾಗದೆ ಹಳೆ,ಹೊಸದರ ಎಳೆದಾಟದಲ್ಲಿ ನುಗ್ಗಾಗುವವರ ಪಂಗಡ. ರೂಢಿ, ಸಂಪ್ರದಾಯಗಳಿಗೇ ಧರ್ಮವೆಂದು ಈ ಜನದ ನಂಬುಗೆ! ಅದು ಧರ್ಮದ ಬಾಹ್ಯರೂಪ; ದೇಹ-ದೇಹವು ಅನಿತ್ಯ. ಕಾಲಕಾಲಕ್ಕೆ ಬದಲಾಗುವುದು ಅನಿವಾರ್ಯ. ಧರ್ಮದ ಜೀವಾಳವು ಬೇರೆಯಿದೆ.

'ಯತೋಽಭ್ಯುದಯ ನಿಶ್ಶ್ರೇಯಸ ಸಿದ್ಧಿಃ ಸ ಧರ್ಮಃ' ಮನುಷ್ಯನ ಏಳ್ಗೆಗೆ ಕಾರಣವಾಗತಕ್ಕಂತಹದೇ ಧರ್ಮ. ಧರ್ಮವನ್ನಾಚರಿಸಿ ಅಧೋಗತಿಗೆ ಹೋಗುವುದುಂಟೆ? 'ಧಾರಣಾತ್ ಧರ್ಮಮಿತ್ಯಾಹುಃ' ಸಮಾಜಸುಧಾರಣೆಗೆ ಕಾರಣವಾಗುವಂತಹದೇ ಧರ್ಮ. ಸಮಾಜದ ಒಡಕು, ಕೆಡುಕಿಗೆ ಕಾರಣವಾಗುವುದೆಲ್ಲವೂ ಅಧರ್ಮ.

ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥ — ಮನು.

ಇದು ಧರ್ಮದ ತಿರುಳು. ಜೀವಾಳ. ಈ ಗುಣಗಳನ್ನು ಅಳವಡಿಸಿಕೊಳ್ಳುವುದೇ ನಿಜವಾದ ಧರ್ಮ. ಇದಿಲ್ಲದೆ ನಾಮ, ಮುದ್ರೆ, ಲಿಂಗ, ಜನಿವಾರ, ಗಡ್ಡಗಳೆಲ್ಲವೂ ಡಂಭಾಚಾರ. ಅಭಯವೃತ್ತಿ, ದಯೆ, ಆರ್ಜವ, ಜ್ಞಾನ, ದಾನ, ದಮ ಮೊದಲಾದ ಗುಣಗಳ ಸಂಪತ್ತನ್ನು ಪಡೆಯುವುದರಲ್ಲಿಯೆ ಧರ್ಮಸಾಧನೆಯಲ್ಲದೆ, ಇದಕ್ಕೆ ಹೊರತಾದ ಆಚಾರ, ರೂಢಿ, ಸಂಪ್ರದಾಯಗಳೆಲ್ಲವೂ ನಿರ್ಜೀವ.

ಈ ಜೀವಾಳಕ್ಕೇ ಸನಾತನ ಧರ್ಮವೆಂಬ ಹೆಸರು. ಇದುವೆ ನಿತ್ಯ ನೂತನ. 'ಮೂಲದಲ್ಲಿ ಎಲ್ಲ ಧರ್ಮಗಳೂ ಒಂದು; ಧರ್ಮ-ಧರ್ಮಗಳಲ್ಲಿ ದ್ವೇಷ, ಅಸೂಯಾದಿ ಭಾವಗಳು ಇರಲಾರವು; ಯಾವ ಧರ್ಮ ಪಂಥದವರಾಗಲಿ, ಅವರು ನಿಜವಾದ ಧರ್ಮವಂತರಾಗಿದ್ದರೆ ಅವರಲ್ಲಿ ಕಲಹಗಳು ಉಂಟಾಗಲಾರವು. ಒಂದುಗೂಡಿ ಪ್ರೀತಿಯಿಂದ ಅವರು ಇರಬಲ್ಲರು,' ಎಂದು ಗಾಂಧೀಜಿಯವರು ಆಗಾಗ ಹೇಳುತ್ತಿದ್ದುದು ಧರ್ಮದ ಈ ವ್ಯಾಖ್ಯೆಯನ್ನು ನೆನೆದುಕೊಂಡೇ. ರೂಢಿ, ಸಂಪ್ರದಾಯಗಳೇ ನಿಜವಾದ ಧರ್ಮವೆಂದರೆ ಯಾವ ಎರಡು ಭಿನ್ನ ಧರ್ಮಗಳು ಹೋಗಲಿ, ಒಂದೇ ಧರ್ಮದ ಉಪಪಂಥಗಳು ಕೂಡ ಕೂಡಿ ನಡೆಯಲಾರವು.

ಧರ್ಮಗಳು ಮೂಲದಲ್ಲಿ ಒಂದೇ ಎಂದು ಸಾರುತ್ತಿದ್ದ ಗಾಂಧೀಜಿಯವರು, ಅದರ ಜೊತೆಗೆ ಇನ್ನೊಂದು ಮಾತನ್ನೂ ವಿಶದಗೊಳಿಸುತ್ತ ಬಂದಿದ್ದರೆ ಅವರು ಹಾರಯಿಸುತ್ತಿದ್ದ ಸುಪರಿಣಾಮಗಳು ಬೇಗನೆ ಕಂಡುಬರಬಹುದಾಗಿತ್ತು. ಗೀತಾ, ಉಪನಿಷತ್ತು, ಕುರಾಣಾದಿ ಗ್ರಂಥಗಳಿಂದ ಆಯ್ದು ಉತ್ತಮೋತ್ತಮ ಭಾಗಗಳನ್ನು ಅವರು ಸಾರ್ವಜನಿಕವಾಗಿ ಪಠನ ಮಾಡುತ್ತಿದ್ದರು. ಇಂತಹ ಉತ್ತಮವಾದ ಭಾಗಗಳನ್ನಷ್ಟೇ ಆ ಗ್ರಂಥಗಳಿಂದ ಆಯ್ದುಕೊಳ್ಳಬೇಕಲ್ಲದೆ,

ಯಾವ ಇಡೀ ಗ್ರಂಥವೂ ಅಮರ ಉಕ್ತಿಗಳಿಂದ ಕೂಡಿರುವುದಿಲ್ಲವೆಂಬ ವಾಸ್ತವ ಸಂಗತಿಯನ್ನು ಅವರು ಜನಸಾಮಾನ್ಯರಿಗೆಲ್ಲ ಸಾರಿ ಹೇಳುವುದು ಅವಶ್ಯವಿತ್ತು. ಮಹಾತ್ಮಾಜಿಯವರ ಬಾಯಿಂದ ಬಂದಿದ್ದರೆ ಈ ಅಪ್ರಿಯ ಸತ್ಯವು ಅಷ್ಟು ಕಟುವೆನಿಸುತ್ತಿದ್ದಿಲ್ಲ. ಅದರಿಂದ ಇಷ್ಟಪರಿಣಾಮವೂ ಆಗದೆ ಇರುತ್ತಿದ್ದಿಲ್ಲ.

ಗಾಂಧೀಜಿ ಕುರಾನ ಹೊಗಳುತ್ತಾರೆ. ಆದುದರಿಂದ ಇಡಿ ಕುರಾನವು ಅಮರ ತತ್ವಗಳ ಗ್ರಂಥವೆಂದು ಸಾಮಾನ್ಯ ಜನ ನಂಬಿ ಬಿಡುವುದು. ಮುಸಲ್ಮಾನಿ ಧರ್ಮದಲ್ಲಿ ನಂಬುಗೆ ಇಲ್ಲದ ಕಾಫೀರರ ಕೊಲೆಮಾಡಲು ಪ್ರಚೋದಿಸುವ ಕೆಲವು ವಚನಗಳು ಕುರಾನಿನಲ್ಲೇ ಇವೆಯಂತೆ. ಅವನ್ನು ಭಾಷಾಂತರಿಸಿ ಗಾಂಧೀಜಿಯವರ ನಿದರ್ಶನಕ್ಕೊ ತರಲಾಯಿತೆಂದು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಒಂದು ವಿಶಿಷ್ಟಕಾಲದಲ್ಲಿ ವ್ಯೈದೋರಿದ ಧರ್ಮಗ್ರಂಥಗಳೊಳಗಿನ ಎಲ್ಲ ವಚನಗಳು ಎಲ್ಲ ಕಾಲದಲ್ಲೂ ಸರಿಹೋಗಲಾರವು. ತಿರುಳಿನಂತಿರುವ ಕೆಲವೊಂದು ಭಾಗವು ಮಾತ್ರ ಸಾರ್ವಕಾಲಿಕವಾಗಿರುತ್ತದೆ, ಎಂದು ಮಹಾತ್ಮಾಜಿಯವರು ಪ್ರಾಮುಖ್ಯತೆಯಿಂದ ಮೇಲಿಂದ ಮೇಲೆ ಹೇಳುತ್ತ ಬಂದಿದ್ದರೆ ಚೆನ್ನಾಗುತ್ತಿತ್ತು.

ಅಮರ ಗಂಗೆಯಾದರೂ ಹರಿವ ನೆಲದ ಮಣ್ಣಿನ ಗುಣ ಅದರಲ್ಲಿ ಸೇರತಕ್ಕುದೇ. ದಿವ್ಯ ದೈವೀ ಸಂದೇಶವಾದರೂ, ಅದು ಯಾವ ದೇಹದ ಮೂಲಕವಾಗಿ ವ್ಯಕ್ತವಾಗುವುದೋ, ಆ ದೇಹವು ಬೆಳೆದ ದೇಶ-ಕಾಲ-ಪರಿಸ್ಥಿತಿಯ ಪರಿಣಾಮಗಳು ಆ ಸಂದೇಶದ ಶಬ್ದಯೋಜನೆಯಲ್ಲ, ವಿಚಾರದ ರೀತಿಯಲ್ಲಿ ಆಗತಕ್ಕುದು ಅನಿವಾರ್ಯ. ಭಕ್ತಿಯ ಆವೇಶದಲ್ಲಿ ಭಾವಿಕರಿಗೆ ಈ ಮಾತಿನ ಅರಿವು ಉಳಿಯುವುದಿಲ್ಲ. ಧರ್ಮಗ್ರಂಥದಲ್ಲಿ ಕಾಣಿಸಿಕೊಂಡಿರುವ ಚ-ವೈ-ತು-ಹಿಗಳಲ್ಲೂ ಅಗಾಧವಾದ ಅರ್ಥವನ್ನು ತುಂಬಿಸುವರು. ವಿಶಿಷ್ಟ ಕಾಲದ ಹಿನ್ನೆಲೆಯಲ್ಲಿಯೆ ಕೆಲವು ಮಾತುಗಳಿಗೆ ಅರ್ಥವಾಗುತ್ತಿದ್ದರೂ ಅವು ಸನಾತನ ಸೂಕ್ತಿಗಳೆಂದು ಜನ ಭ್ರಮಿಸಿದೆ.

ಮನುಧರ್ಮಶಾಸ್ತ್ರದಲ್ಲಿ ಮೇಲೆ ಉಲ್ಲೇಖಿಸಿದ ಧರ್ಮದ ವ್ಯಾಖ್ಯೆಯು ಶಾಶ್ವತ ವಚನ; ಆದರೆ 'ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ;' ಅಥವಾ ದ್ವಿಜರ ಹೊರತು ವೇದಾಧಿಕಾರ ಬೇರಾರಿಗೂ ಇಲ್ಲ; ವೇದ ಕೇಳಿದರೆ ಅವರ ಕಿವಿಯಲ್ಲಿ

ಕಾದ ಶೀಸದ ರಸ ಸುರುವಬೇಕು, ಎಂಬೀ ಬಗೆಯ ಸ್ಮೃತಿ ವಚನಗಳು ಸಾರ್ವಕಾಲಿಕವಾಗಲಾರವು. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರು ದ್ವಿಜ ರೆಂದು ಕರೆಯಲ್ಪಡುತ್ತಿದ್ದು ಅವರೆಲ್ಲ ಒಂದಾಗಿ ಶೂದ್ರರನ್ನು ಬಹಿಷ್ಕರಿಸಿದ್ದರು. ಆದರೆ ಕಾಲಕ್ರಮದಲ್ಲಿ ಅದೂರದೃಷ್ಟಿಯ ಬ್ರಾಹ್ಮಣರು ಅಚಾತುರ್ಯದಿಂದ ಎಲ್ಲರನ್ನೂ ಶೂದ್ರರೆಂದು ಬಗೆಯಲಾರಂಭಿಸಿ ತಾವೇ ಏಕಾಕಿಗಳಾದರು. ಅಂದಿನ ಕೃತಿ ಅವರ ಇಂದಿನ ಪಾಡಿಗೆ ಬೀಜಾರೋಪಣ. ಎಲ್ಲರೊಡನೆ ಕೂಡಿ ನಡೆವುದನ್ನು ಮರೆತು ಮಡಿವಂತಿಕೆಯಲ್ಲಿ ಸಿಡಿದು ದೂರ ನಿಂತರು. ಇದರ ಅನಿಷ್ಟ ಫಲಗಳನ್ನು ಅನುಭವಿಸುವ ಕಾಲವು ಆರಂಭವಾಗಿದೆ. ಕಹಿಯನ್ನು ಅನುಭವಿಸುತ್ತಿರುವಾಗ ಇದಕ್ಕೆ ಕಾರಣವಾದ ಮನು ವಚನವು ಶ್ಲಾಘ್ಯವೆಂದು ಹೇಳುವುದು ಯುಕ್ತವಾದೀತೆ ?

ಇಂತಹ ಕಾಲಿಕ ವಚನಗಳನ್ನು ಕಾಲಕಾಲಕ್ಕೆ ತಿದ್ದಿಕೊಳ್ಳುತ್ತ ಹೋಗುವುದು ಒಳಿತು ವೇದಕಾಲದ ಯಜ್ಞದ ಸ್ವರೂಪವು ಉಪನಿಷತ್ತು, ಗೀತೆಯ ಕಾಲಕ್ಕೆ ಮಾರ್ಪಟ್ಟಿದೆ. ಜ್ಞಾನಯಜ್ಞ, ತಪೋಯಜ್ಞ, ದಾನ ಯಜ್ಞಗಳು ಅಗ್ನಿಯಲ್ಲಿ ಹವಿಸ್ಸನ್ನು ಸುರುವಿ ಆಹುತಿ ಕೊಡುವ ಯಜ್ಞದ ಸ್ಥಾನದಲ್ಲಿ ಬಂದಿಲ್ಲವೆ? ಧರ್ಮದ ಮೂಲತತ್ವಗಳನ್ನು ನೆನೆದು ಅದರ ಬಾಹ್ಯ ಸ್ವರೂಪವಾದ ರೂಢಿ, ಸಂಪ್ರದಾಯಾದಿ ನಡೆವಳಿಗಳನ್ನು ಕಾಲಕಾಲಕ್ಕೆ ಮಾರ್ಪಡಿಸಿಕೊಳ್ಳದೆ ಇದ್ದರೆ ಆ ಧರ್ಮಪಂಥವು ಅವ್ಯವಹಾರ್ಯವಾಗುತ್ತದೆ.

ಎಲ್ಲ ಧರ್ಮಗಳಲ್ಲಿಯೂ ಇಂತಹ ಕಾಲಿಕ ಭಾಗವು ಇದ್ದೇ ಇರುತ್ತದೆ. ಅದನ್ನು ಆಯಾ ಮತೀಯರು ಬಿಚ್ಚುಮನಸ್ಸಿನಿಂದ ಒಪ್ಪಿಕೊಳ್ಳಲು ಸಿದ್ಧ ರಾಗುವ ವರೆಗೆ ಧರ್ಮ-ಧರ್ಮಗಳಲ್ಲಿ ಹೊಡೆದಾಟವೆ ಹೊಡೆದಾಟ! ಶಾಲೆ-ಕಾಲೇಜ ನಲ್ಲಿ ಧಾರ್ಮಿಕ ಶಿಕ್ಷಣದ ಮಾತು ಬೇಡವೆಂಬುವುದಕ್ಕೂ ಇದೇ ಕಾರಣ. ಕಾಲಿಕ ಭಾಗವನ್ನು ಒಪ್ಪಿಕೊಂಡು ಅದನ್ನು ಕಡೆಗಣಿಸಿ ಸಾರ್ವಕಾಲಿಕ ಶಾಶ್ವತ ಅಂಶ ಗಳನ್ನು ಸ್ವೀಕರಿಸುತ್ತ ಸಾಗಿದರೆ ಬೇಕಾದಷ್ಟು ಧರ್ಮಪಂಥಗಳಿದ್ದರೂ ಕಲಹಕ್ಕೆ ಕಾರಣವಿಲ್ಲ.

‘ ದ್ಯಾವಾ ಭೂಮಿರ್ ಜನಯನ್ ದೇವ ಏಕಃ ’ ಎಂದು ಅನುದಿನವೂ ಉದ್ಘೋಷಿಸುವವರು ಎಲ್ಲರನ್ನೂ ದೇವರ ಮಕ್ಕಳೆಂದು ಬಗೆದು ಬಂಧುಭಾವ ದಿಂದ ಬಾಳಲು ಹಿಂಜರಿಯಬೇಕೆ? ‘ ದಯೆಯೆ ಧರ್ಮದ ಮೂಲವಯ್ಯ ’

ಎಂಬವರು ವಿಶಿಷ್ಟ ಲಾಂಛನಗಳನ್ನು ಧರಿಸದ ಬೇರೆ ಮತದವರನ್ನು ಹಳಿಯ ಬೇಕೆ? ದೂರೆಣಿಸಬೇಕೆ? ಜನಿವಾರದ ನಗೆಯಾಡಿ ಲಿಂಗಧಾರಣೆಯ ಹಟ ಹಿಡಿವುದೂ ನಗೆಗೀಡು ಅಲ್ಲವೆ? 'ದಯೆಯಿರಲಿ;' 'ಎಲ್ಲರನ್ನೂ ಸಮಾನ ಬಗೆಯಿರಿ' ಎಂದು ಉಪದೇಶಿಸುವಾಗ ಹಿಂದಿನವರ ಕಣ್ಣೆದುರು ಕೇವಲ ತಮ್ಮ ಮತದವರಷ್ಟೇ ಇರುತ್ತಿದ್ದರು. ತಮ್ಮ ಧರ್ಮದ ಪರಿಘದಲ್ಲಿ ಬಾರದೆ ಇದ್ದವರ ಗಣನೆಯೆ ಇರುತ್ತಿದ್ದಿಲ್ಲ. ನಮ್ಮ 'ಜಗದ್ಗುರು'ಗಳ ಜಗತ್ತಿನ ವಿಸ್ತಾರವೆಷ್ಟು? ಆಯಾ ಮಠೀಯರು ಹಬ್ಬಿಕೊಂಡಿರುವ ಪ್ರದೇಶವಷ್ಟೆ ತಾನೆ! ಶ್ರೀಬಸವಣ್ಣನವರು ಅಸ್ಪೃಶ್ಯತೆಯ ಸೂತಕವನ್ನು ಹೋಗಲಾಡಿಸಿದ್ದು ನಿಜ. ಆದರೆ ಎಷ್ಟರ ಮಟ್ಟಿಗೆ? ಲಿಂಗಧಾರಣ ಮಾಡಿ ಶಿವಶರಣರಾದವರು ಜಾತಿಸೂತಕದಿಂದ ಮುಕ್ತರೆಂದು ಉಪದೇಶಿಸಿದರು. ಇಲ್ಲಿ ಒಂದು ವಿಶಿಷ್ಟ ಮತವಿಚಾರವು ಹಿನ್ನೆಲೆಯಾಗಿದೆ. ಮಹಾತ್ಮಾಜಿಯವರು ಅಸ್ಪೃಶ್ಯತೆಯನ್ನು ತೊಡೆಯಲು ಹೇಳಿದ ಕಾರಣಗಳು ಇದಕ್ಕಿಂತ ಭಿನ್ನವಾಗಿವೆ. ಮಾನವರೆಲ್ಲ ಒಂದು. ಅವರಲ್ಲಿ ಜನ್ಮದಿಂದ ಮೇಲು ಕೀಳೆಣಿಸಿ ಸ್ಪೃಶ್ಯಾಸ್ಪೃಶ್ಯತೆಯ ಮಾತನ್ನು ತರಲಾಗದೆಂದು ಮಹಾತ್ಮಾಜಿಯವರು ಯುಗ ಧರ್ಮಕ್ಕನುಸಾರವಾಗಿ ಉಪದೇಶದ ರೀತಿಯಲ್ಲಿ ವ್ಯತ್ಯಾಸವಾಗುವುದೆಂಬುದಕ್ಕೆ ಇದು ದೃಷ್ಟಾಂತ.

ಲಿಂಗ ಕಟ್ಟಿಕೊಳ್ಳಬೇಕು; ಜನಿವಾರ ಧರಿಸಬೇಕು; ಗಡ್ಡ ಇಡಬೇಕು.... ಇಂತಹ ಕಾಲಿಕ ಸಂಗತಿಗಳನ್ನು ಸಾಣಿಸಿ, ಸಣ್ಣಿಸಿ ಸಾರ್ವಕಾಲಿಕವಾಗಿ ನಿಲ್ಲುವ ವಿಚಾರಗಳನ್ನಷ್ಟೇ ಸ್ವೀಕರಿಸತಕ್ಕದ್ದು. ಎರಡರ ಮಿಶ್ರಣವಿಲ್ಲದ ಮತ, ಧರ್ಮಗಳೇ ಇಲ್ಲ. ಇದನ್ನು ಎಲ್ಲರೂ ಒಪ್ಪುವ ವರೆಗೆ ಧಾರ್ಮಿಕ ಮತದ್ವೇಷಗಳು ತಗ್ಗಲಾರವು. ಆದಕಾರಣ ಮೇಲಣ ವಿಚಾರವನ್ನು ಎಷ್ಟು ವ್ಯಾಸಪೀಠಗಳಿಂದ ತಿಳಿಸಿ ಹೇಳಿದರೂ ಕಡಿಮೆ. ಎಷ್ಟು ಲೇಖನಗಳಲ್ಲಿ ವಿಶದೀಕರಿಸಿದರೂ ಕಡಿಮೆ. ಜನಗಳಿಗೆ ಈ ಮಾತು ಬಿಂಬಿಸಿದಷ್ಟೂ ಭಿನ್ನ ಮಠೀಯರಲ್ಲಿ ಐಕ್ಯವು ದೃಢವಾಗುವುದು. ಯಾವ ಮತದಲ್ಲಿ ಒಳ್ಳೆಯದಿದ್ದರೂ ಅದನ್ನು ಸ್ವೀಕರಿಸಲು ಮನಸು ಸಿದ್ಧವಾಗುವುದು.

ಭವ್ಯವಾಗಿ ನಿಲ್ಲಿಸಿದ ಮತ, ಧರ್ಮಗಳ ಮಹಾಮಂದಿರಗಳು ಕುಸಿದು ಬೀಳುವುದೇಕೆ? ಗೋಡೆಯ ಇಟ್ಟಿಗೆಗಳಲ್ಲಿ ಗಾಳಿ–ಮಳೆಗಳ ಆಘಾತಕ್ಕೆ ತಡೆಯದ ಕೆಲವು, ಸವೆದು ಸಣ್ಣಾಗಿ ಗೋಡೆಯು ಉಳಿದ ಭಾರಕ್ಕೆ ಬಿರಿಯು

ವುದು. ಕಟ್ಟಡವು ಸಡಿಲುವುದು. ಬೆಚ್ಚಗೆ ಇರಬೇಕೆಂದು ಕಟ್ಟಿರುವ ಪುರಾಣ ಮಠ–ಮಂದಿರಗಳ ಪಾಡು ಈಗ ಹೀಗೆಯೆ ಆಗಿದೆ. ಆದರೂ ಅದು ಬಿದ್ದಿಲ್ಲವೆಂಬ ಭ್ರಾಂತಿಯಲ್ಲಿ ಇರುವ ಪ್ರಯತ್ನವೇ ನಡೆದಿದೆ! ಇಂದಿನ ಪರಿಸ್ಥಿತಿಯಲ್ಲಿ ಮಠ ನಿಯಮಗಳಂತೆ ಸಂಪ್ರದಾಯಗಳನ್ನು ನಡಸಿಕೊಂಡು ತನ್ನ ಜೀವಮಾನವನ್ನು ಕಳೆಯುವುದು ಶಕ್ಯವಿಲ್ಲ; ಅವುಗಳಲ್ಲಿ ಅಗತ್ಯವಾದ ಕೆಲವು ಮಾರ್ಪಾಟಗಳು ಆಗಲೇಬೇಕೆಂದು ಎನಿಸುತ್ತಿದ್ದರೂ ಧೈರ್ಯವಾಗಿ ಹಾಗೆ ಹೇಳುವುದಕ್ಕೆ ಯಾರ ಬಾಯಿಯೂ ಬಾರದು! ಕಲಿಯುಗ. ಹೀಗೆ ಆಗತಕ್ಕದ್ದೇ ಎಂದು ಹೇಗೊ ಸಮಾಧಾನ ತಂದುಕೊಂಡು ಆಭಾಸದ ಜೀವನ ದಲ್ಲಿಯೆ ಕಾಲ ಕಳೆಯುತ್ತಿರುವರು!

ಜಾತಿಭೇದದ ಕಟ್ಟುಗಳು ಸಡಿಲುತ್ತಿವೆ. ಏಕೆ? ಕಲಿಯುಗ ಬಂತು; ಧರ್ಮ ಹಾಳಾಯ್ತು ಎಂಬುದು ಸ್ಥೂಲವಾದ ಮುಗ್ಧಮಾತು. ಮನೋವೃತ್ತಿ ಯಲ್ಲಿ ಈಗ ಆದ ವ್ಯತ್ಯಾಸವೆ ಇದಕ್ಕೆ ಮುಖ್ಯ ಕಾರಣ. ಮೊದಲಿನಷ್ಟು ಅಥವಾ ಮೊದಲಿನ ರೀತಿಯಲ್ಲಿ ಪಾರಲೌಕಿಕ ಭೀತಿ ಉಳಿದಿಲ್ಲ. ಆಧುನಿಕ ಭೌತಶಾಸ್ತ್ರದ ಸಂಶೋಧನ, ಜಾಗತಿಕ ಧರ್ಮಶಾಸ್ತ್ರ, ಇತಿಹಾಸ, ಪುರಾಣಾದಿ ಗಳ ತುಲನಾತ್ಮಕ ಅಭ್ಯಾಸ, ಮಾನವವಂಶವಿಜ್ಞಾನ, ಸಮಾಜಶಾಸ್ತ್ರಗಳ ಬೆಳವಣಿಗೆ, ಆಧುನಿಕ ನಾಗರಿಕತೆಯ ಒತ್ತಡ ಇತ್ಯಾದಿ ಬೇರೆ ಕಾರಣಗಳೂ ಹಳೆಯ ಧಾರ್ಮಿಕ ರೂಢಿ-ಸಂಪ್ರದಾಯಗಳ ಮೇಲೆ ಬಲವಾದ ಆಘಾತ ಮಾಡುತ್ತಿವೆ.

ಧಾರ್ಮಿಕ ಶ್ರದ್ಧೆಯಿಂದ ಜಾತಿಗಳು ಬೆಳೆದಿಲ್ಲ. ಬದುಕಲು ಸೌಕರ್ಯ ಗಳು ಹೆಚ್ಚು ಹೆಚ್ಚು ದೊರೆಯಲಾರಂಭಿಸಿದಂತೆ ಒಂದೊಂದು ಮತದ ಪ್ರಸಾ ರವು ಆದುದನ್ನು ಇತಿಹಾಸವು ಹೇಳುತ್ತದೆ. ಕಾಂಗ್ರೆಸು ಅಧಿಕಾರಾರೂಢ ವಾಗುತ್ತಲೆ ಗಾಂಧೀಟೊಪ್ಪಿಗೆಗಳು ಸಾರ್ವತ್ರಿಕವಾಗತೊಡಗಿದವು. ಆ ಮೊದ ಲು ಗಾಂಧೀಪಂಥಿಗಳನ್ನು ಕಂಡು ಅವ್ಯವಹಾರಿಗಳೆಂದು ಗೇಲಿ, ಇವರಿಗೆ ದೂರಿಂದಲೇ ಶರಣು ಮಾಡುತ್ತಿದ್ದವರು ಈ ಜನವನ್ನು ಹುಡುಕಿಕೊಂಡು ಬರುತ್ತಿರುವರು. ಉತ್ತರಾದಿಮಠದ ಮೋತೀಚೂರಿನ ಸಮಾರಂಭಕ್ಕೆ ಮೋತಿ ಮೇಲಿನ ಭಸ್ಮ ಒರಿಸಿಕೊಂಡು ಊಟಕ್ಕೆ ಹೋದ ಬ್ರಾಹ್ಮಣರುಂಟು .ಕಲ್ಯಾ ಣದಲ್ಲಿ ನಡೆಯುತ್ತಿದ್ದ ಗಣಾರಾಧನೆಗೆ ಬದನೆಕಾಯಿಗಳನ್ನು ಲಿಂಗವೆಂಬಂತೆ

ಧರಿಸಿಬಂದ ಭಕ್ತರಿದ್ದಂತೆ. ಶ್ರೀಬಸವಣ್ಣನವರು ಈ ಗುಟ್ಟನ್ನು ಅರಿತು ಬದನೆ ಕಾಯಿಗಳು ಲಿಂಗಗಳಾಗುವಂತೆ ಪವಾಡ ಮಾಡಿದರಂತೆ. ಪವಾಡದ ಮಾತು ಅದಂತಿರಲಿ. ಬದುಕಿಗೆ ಅನುಕೂಲ ದೊರೆತಂತೆ, ಬದುಕು ದೊರೆಯುಹತ್ತಿದಂತೆ—ಬದುಕಿಗಾಗಿ ಜನ ಯಾವುದೊಂದು ಮತಕ್ಕೂ ಮುಕ್ಕುರುವರು; ಎಂಬುದು ಮೇಲಣ ಸಂಗತಿಗಳಿಂದ ಸಿದ್ಧವಾಗುತ್ತದೆ.

ತಮ್ಮ ತಮ್ಮ ಜಾತಿ, ಮತಪ್ರಸಾರದ ಗಡಿಬಿಡಿ ಏತಕ್ಕಾಗಿ? ಸ್ವರ್ಗದೊಳಗಿನ 'ಸೀಟು ರಿಝರ್ವ' ಆಗುವುದೆಂದೆ? ಅಥವಾ ತಮ್ಮ ಜಾತಿಯು ಮತಗಳ ಬಲದಿಂದ ಇಹದೊಳಗಿನ ಸ್ಥಾನಮಾನಗಳನ್ನು ನಿಶ್ಚಿತಮಾಡಿಕೊಳ್ಳುವ ಲೋಭದಿಂದೇ? ಬ್ರಾಹ್ಮಣ ಸಂಘ, ಲಿಂಗಾಯತ ಶಿಕ್ಷಣ ಸಂಸ್ಥೆ ಇಸ್ಲಾಂ ಸಮಿತಿಗಳಂತಹ ಧಾರ್ಮಿಕ ಹೆಸರಿನ ಸಂಸ್ಥೆಗಳಿಂದ ತಮ್ಮ ಸಮಾಜಕ್ಕೆ ಪಾರಲೌಕಿಕ ಆನಂದವು ದೊರೆಯಲೆಂದು ಕಾರ್ಯವೇನಾದರೂ ಸಾಗಿದೆಯೆ? ದುಡ್ಡು, ನೌಕರಿ ಪುಂಬರಶಿಪ್ಪು, ಮಂತ್ರಿಪದಗಳ ಮೇಲೆಯೆ ಇವರ ಎಲ್ಲ ಕಣ್ಣು ಇದೆಯೆ? ಇದೆಲ್ಲವೂ ಧರ್ಮದ ಹೆಸರಿನಲ್ಲಿ ನಡೆದ ವ್ಯಭಿಚಾರವಲ್ಲವೆ? ಅನ್ಯಾಯವಾಗಿ ಜಾತಿ ಧರ್ಮದ ಹೆಸರನ್ನು ಬಳಸದೆ, ಸಮಾಜದಲ್ಲಿ ಸಾಂಸ್ಕೃತಿಕ ಆರ್ಥಿಕ, ಔದ್ಯೋಗಿಕ ಗುಂಪುಗಳಾಗಿ ಅದಕ್ಕನುಗುಣವಾದ ಹೆಸರುಗಳನ್ನು ಇಟ್ಟುಕೊಳ್ಳುವುದೇ ಪ್ರಾಮಾಣಿಕ ರೀತಿಯಲ್ಲವೆ? ಐಹಿಕ ಚಟುವಟಿಕೆಗಳಲ್ಲಿ ಜಾತಿ. ಧರ್ಮಗಳ ಹೆಸರನ್ನು ಉಪಯೋಗಿಸಿಕೊಳ್ಳುವುದು ಶುದ್ಧ ಅಪ್ರಾಮಾಣಿಕತನ; ಅಧರ್ಮ; ಅನಾಚಾರ. ಈ ಬಗೆಯ ಅನಾಚಾರವೇ ಆಚಾರ, ಧರ್ಮ ಎಂದು ಬಗೆವ ವರೆಗೆ ಭಾರತಕ್ಕೆ ಸ್ವಾತಂತ್ರ್ಯವು ಒಗ್ಗಲಾರದು. ನಿಶ್ಚಿತವಾಗಿ ಕೈಗೆ ಬಂದ ತುತ್ತು ಬಾಯಿಗೆ ಬಾರದೆ ಹೋದೀತು!

ಆಧ್ಯಾತ್ಮ, ಅನುಭಾವವೆಂಬುದು ಕೇವಲ ವೈಯಕ್ತಿಕ. ಸತಿ-ಪತಿ ಭಾವದಂತೆ, ಜೀವ-ಶಿವ ಅಥವಾ ನರ-ನಾರಾಯಣರ ಸಂಬಂಧದಂತೆ—ಏಕಾಂತಿಕ. ಸಾರ್ವಜನಿಕ ವ್ಯಾಪಾರದಲ್ಲಿ ಇದರ ಪಾವಿತ್ರ್ಯವುಳಿಯದು. ಸಮಾಜ ಧರ್ಮವು ಮಾತ್ರ ಸಾಮೂಹಿಕ. ಸಮಷ್ಟಿಯಾದುದು ಸಮಾಜ. ಯಾವುದೊಂದೆ ಜಾತಿ, ಪಂಗಡವು ಸಮಾಜವಾಗಲಾರದು. ಕೈ ಕಾಲು ಅಥವಾ ತಲೆ ಇದು ಅಂಗ. ಅಂಗಾಂಗಗಳೆಲ್ಲ ಸಮ್ಯಗ್ರೀತಿಯಲ್ಲಿ ಸಹಕರಿಸಿ ಒಂದಾಗಿದ್ದಾಗಲೆ ಅದು ಸಜೀವ ದೇಹವೆನಿಸುವುದು. ಕೇವಲ ಒಂದು ಬಗೆಯುವರಿಗೆ ಮಾತ್ರ ಬೆಲೆ

ಯಿದ್ದಲ್ಲಿ ಸಹಸ್ರಶೀರ್ಷ ಪುರುಷನ ಭಗ್ನಮೂರ್ತಿಯದು. ಮುಖ, ಬಾಹು, ಊರು, ಪಾದ ಮೊದಲಾದ ಅಂಗಾಂಗಗಳೆಲ್ಲ ಒಂದುಗೂಡಿದ ವಿರಾಟ್ ರೂಪವೇ ಪೂಜಾರ್ಹವಾದುದು. ಭಗ್ನ, ಭಿನ್ನಮೂರ್ತಿ ಪೂಜಿಸಲಾಗದೆಂದು ಧರ್ಮಜ್ಞರ ಆಜ್ಞೆಯಿದೆ. ಬ್ರಾಹ್ಮಣ, ಲಿಂಗವಂತ, ಜೈನ, ರಡ್ಡಿ, ಕುರುಬಾದಿ ಒಂದೊಂದೇ ಅಂಗಗಳು ತಮ್ಮ ತಮ್ಮ ಪ್ರತಿಷ್ಠೆಗೇ ಹೋರಾಡಿ ಇಡೀ ದೇಹದ ಸ್ವಾಸ್ಥ್ಯ-ಸೌಖ್ಯವನ್ನು ಮರೆತುವು. ಅಂಗಾಂಗಗಳು ಕಾದಾಡಿ ತಮ್ಮ ತಮ್ಮಲ್ಲಿ ಅಸಹಕಾರವನ್ನು ಆರಂಭಿಸಿದಲ್ಲಿ ದೇಹದ ಗತಿ ಏನಾಗಬೇಕೊ ಜಾತೀಯ ಕಲಹಗಳಿಂದ ಅದುವೆ ಭಾರತದ ಹಣೇಬರಹವಾಗಿದೆ. ಧರ್ಮದ ಹೆಸರಿನಲ್ಲಿ ನಡೆದ ಜಾತೀಯ ಸ್ವಾರ್ಥದ ಕೃತಿಗಳೆಲ್ಲ ಭಾರತವನ್ನು ಪಾರ ತಂತ್ರ್ಯದ ಪಾತಾಳಕ್ಕೆ ಇಳಿಸುವ ಪಾಪಾಚರಣೆಯಾಗಿವೆ.

ಸಮಾಜದ ಹಿನ್ನೆಲೆಯಿಲ್ಲದೆ ವ್ಯಕ್ತಿಗೆ ಅಸ್ತಿತ್ವವಿಲ್ಲ. ವ್ಯಕ್ತಿಯು ಒಂದು ಶೂನ್ಯವಿದ್ದಂತೆ. ಸಮಾಜವು ಅದರ ಹಿಂದಿನ ಅಂಕೆ. ಅಂಕೆಯ ಬೆಲೆಯಿಂದ ಶೂನ್ಯಕ್ಕೆ ಮಹತ್ವ. ಸ್ವತಃ ವ್ಯಕ್ತಿಯು ಯಾವಾಗಲೂ ಅತ್ಯಲ್ಪ. ಸಮಾಜ ದೊಡನೆ ಬರುವ ಸಂಬಂಧದೊಡನೆ ಇವನ ವಿಕಾಸವು ಅವಲಂಬಿಸಿರುತ್ತದೆ. ವ್ಯಕ್ತಿಯ ಸುಖ, ಆನಂದ, ಅಭಿವೃದ್ಧಿಗಳೆಲ್ಲವೂ ಸಾಪೇಕ್ಷವಾಗಿವೆ. ಆದುದ ರಿಂದ ಸಮಾಜವನ್ನು ಕಡೆಗಣಿಸುವವನು ಆತ್ಮಹಾನಿ ಮಾಡಿಕೊಳ್ಳುತ್ತಾನೆ. ತಮ್ಮ ಜಾತಿಮತಗಳನ್ನಷ್ಟೇ ಸಮಾಜವೆಂದು ಬಗೆದ ಸಂಕುಚಿತ ವಿಚಾರಿಯ ಆನಂದವೂ ಅಭಿವೃದ್ಧಿಯೂ ಅಷ್ಟೇ ಸಂಕೋಚಗೊಳ್ಳುತ್ತದೆ.

ಇನ್ನೊಬ್ಬರೊಡನಾಟದಲ್ಲಿಯೆ ವ್ಯಕ್ತಿಯ ಅಂತರಂಗದೊಳಗಿನ ಗುಣಾವ ಗುಣಗಳ ಆವಿಷ್ಕರಣವಾಗಿ ಅವನಿಗೆ ತನ್ನ ಸ್ವರೂಪಜ್ಞಾನವಾಗುವುದು. ವಿಷಯದಿಂದ ದೂರವಿರುವ ವರೆಗೆ ಎಲ್ಲರೂ ಸಜ್ಜನರೇ, ಸಾಧುಗಳೇ. ಆದರೆ ಅವರು ನಿಜವಾದ ಸಾಧುಗಳೋ ? ಅವರ ಆತ್ಮಾನುಭವದ ಮಾತು ಬರಿಯ ಶಬ್ದಜಾಲ. ಲೋಕದಲ್ಲಿದ್ದು ಲೋಕದ ಒಡನಾಟದಲ್ಲಿ ಬಂದ ಅನುಭವ ದಿಂದಾದ ವಿಕಾಸವೆ ನಿಜವಾದ ಆತ್ಮವಿಕಾಸ.

'ಪಾದೋಽಸ್ಯ ವಿಶ್ವಾಭೂತಾನಿ'. ಭೂತಮಾತ್ರಗಳ ರೂಪದಲ್ಲಿ ಕಾಣಿಸಿ ಕೊಳ್ಳುವ ಪರಮ ಆತ್ಮಶಕ್ತಿಯನ್ನು ಮರೆತು ನಿರ್ಜೀವ ಮೂರ್ತಿ ಪೂಜೆ ಯಲ್ಲಿ ತೊಡಗುವುದು ಅದೊಂದು ಮುದುಮಕ್ಕಳ ಬೊಂಬೆಯಾಟ. ನಿಜ

ವಾದ ದೇವಪೂಜೆಯು ಯಾವುದೆಂಬ ಬಗೆಗೆ ಆದ್ಯರ ಸೂಕ್ತ ವಚನಗಳಿವೆ. ' ದೇಹವೆ ದೇಗುಲ 'ವೆಂದೂ ಅಂತರಂಗದಲ್ಲಿ ಪರಮಾತ್ಮನು ನೆಲಸಿರುವ ನೆಂದೂ ಬಸವಣ್ಣನವರ ಅನುಭಾವ. ' ಸರ್ವಸ್ಯೈವ ಜನಸ್ಯಾಸ್ಯ ವಿಷ್ಣುಃ ಅಭ್ಯಂತರೇ ಸ್ಥಿತಃ । ತಂ ಪರಿತ್ಯಜ್ಯ ಯೇ ಯಾಂತಿ ಬಹಿರ್ ವಿಷ್ಣುಂ ನರಾ ಧಮಾಃ ' ॥ ಎಂದು ಪುರಾಣದ ಆದೇಶ. ಲೋಕಸೇವೆಯೆ ಈಶಸೇವೆ. ಸಮಾಜವೆ ' ಸಹಸ್ರಶೀರ್ಷ ಪುರುಷನು '. ಅದರ ಆರಾಧನೆಯಲ್ಲಿಯೆ ಭೂಮಾ ಸುಖದ ಅನುಭಾವ ಬರಬೇಕು. ಇದುವೆ ವಿಶ್ವತೋಮುಖನಾದ ಪರಮಾತ್ಮನ ಸೇವೆಯು ವಿಶ್ವಧರ್ಮ.

ಇದು ಬರಲಿರುವ ಸಮಾಜ ಧರ್ಮವು. ಆತ್ಮವಿಕಾಸದ ಹಳೆಯ ದಾರಿ ಯಿಂದ ಇದು ಸ್ವಲ್ಪ ಬೇರೆಯಾಗಿದೆ. ತಾನು—ತನ್ನ ಕುಟುಂಬ—ತನ್ನ ಜಾತಿ; ಕೊನೆಗೆ ಸ್ವರ್ಗ; ಅಥವಾ ಮೋಕ್ಷ: ಈ ಹಳೆಯ ದಾರಿಯಲ್ಲಿ ರಾಷ್ಟ್ರವು ಎಲ್ಲಿಯೂ ಹತ್ತುವುದಿಲ್ಲ! ಆದುದರಿಂದ ರಾಷ್ಟ್ರೀಯ ಸ್ವಾತಂತ್ರ್ಯವು ನಮಗೆ ಈ ವರೆಗೆ ಬೆಟ್ಟಿಯಾಗಲೇ ಇಲ್ಲ. ರಾಷ್ಟ್ರಕ್ಕೆ ಪ್ರದಕ್ಷಿಣೆಗೆಯ್ದು ' ವಸುಧೈವ ಕುಟುಂಬ'ದ ಗುರಿಯನ್ನು ಮುಟ್ಟುವುದು, ಇಂದಿನ ಯಾತ್ರಾಕ್ರಮ. ಆದುದರಿಂದ ಇನ್ನು ಮುಂದೆ ಜಾತಿವಿಶಿಷ್ಟ, ಧರ್ಮಕ್ಕೆ ಕರೆದೊಯ್ವ ಅಡ್ಡಹಾದಿಯನ್ನು ಬಿಟ್ಟು ರಾಷ್ಟ್ರದ ಮುಖಾಂತರವಾಗಿ ಮಾನವಲೋಕದ ಸೇವೆಯಲ್ಲಿ, ಪರಮಾತ್ಮನ ವಿರಾಟ್‌ರೂಪದ ಆರಾಧನೆಯಲ್ಲಿ ಭಾಗವಹಿಸುವ ಮಹದಾನಂದದತ್ತ ತೆರಳು ವುದು ಕಾಲೋಚಿತವಾದ ಶ್ರೇಯೋಮಾರ್ಗವಾಗಿದೆ.

ರಾಷ್ಟ್ರೀಯತ್ವವು ಇಂದಿನ ಯುಗಧರ್ಮ. ಆದರೆ ರಾಷ್ಟ್ರಾಭಿಮಾನವು ಘೋರ ಮಹಾಯುದ್ಧಗಳಿಗೆ ಕಾರಣವಾಗುತ್ತಿರುವುದು ಸುಳ್ಳಲ್ಲ. ಈ ಕಾರಣ ದಿಂದ ಯಾವುದೇ ಭೌಗೋಲಿಕ ಹೆಮ್ಮೆ ಅನಿಷ್ಟವೆಂದೂ ಪ್ರಾದೇಶಿಕ ಅಭಿ ಮಾನವು ಇರಲೇಕೂಡದೆಂದೂ ಪ್ರತಿಪಾದಿಸುವ ವಿಶ್ವಬಂಧುತ್ವ ಪಂಥಿಗಳು ಕೆಲವರುಂಟು. ವಿಶ್ವಬಂಧುತ್ವವು ಕೊನೆಯ ಗುರಿ; ನಿಜ. ಆದರೆ ಆ ಕೊನೆ ಯನ್ನು ಮುಟ್ಟಲು ನಡುವಿನ ಕೆಲವು ಮೆಟ್ಟಲುಗಳಿವೆ. ಅವನ್ನು ಮರೆತರೆ ಕಾಲುಜಾರಿ ಬೀಳುವಲ್ಲಿ ಸಂದೇಹವಿಲ್ಲ.

ಸ್ವಾರ್ಥತ್ಯಾಗದ ಉಪದೇಶ ಕೆಲವೆಡೆಗಳಲ್ಲಿ ನಿರರ್ಥಕವಾಗುತ್ತದೆ. ಯಾರಲ್ಲಿ ' ಸ್ವ-ಅರ್ಥ 'ವೇ ಇಲ್ಲವೋ ಅವರು ತ್ಯಾಗ ಮಾಡುವ 'ಅರ್ಥ'ವೇನು?

ಧನ, ವಿದ್ಯೆ, ತೇಜಸ್ಸಿನ ಸಂಪಾದನೆಯಿಲ್ಲದೆ ತ್ಯಾಗದ ಮಾತು ಬಾಲಿಶ ಇಂತಹ 'ಸ್ವಾರ್ಥತ್ಯಾಗಿ'ಗಳು ಆತ್ಮವಂಚಕರೊ, ಪರವಂಚಕರೊ, ಎಬಡರೊ, ಎಗ್ಗರೊ ಆದ ಪರಾವಲಂಬಿಗಳಾಗುವರು. ಈ ಬಗೆಯ ಪರೋಪಕಾರಿಗಳ ಹಿಡುಗು ಸಮಾಜದ ನೈತಿಕ ಮಟ್ಟವನ್ನು ಕೆಳಕ್ಕೆ ತರುವುದು. ಅಭಿಮಾನ, ಅಹಂಕಾರತ್ಯಾಗದ ದುಷ್ಪರಿಣಾಮಗಳೂ ಇದೇ ತೆರನಾಗಿವೆ. ಸ್ವ-ಅಭಿಮಾನ ವಿಲ್ಲದವನ ಆತ್ಮವಿಶ್ವಾಸವು ಕ್ಷೀಣವಾಗುವುದು; ಮನಸು ದುರ್ಬಲವಾಗುವುದು. ದುರ್ಬಲ ಮನಸಿನವರು ಪರಾವಲಂಬನದಲ್ಲಿ ಸಮಾಧಾನ ತಾಳುವರು. ಈ ಕಾರಣದಿಂದ ಸ್ವ-ಅರ್ಥ, ಸ್ವ-ಅಭಿಮಾನ, ತನ್ನತನದಲ್ಲಿ ವಿಶ್ವಾಸವು ವ್ಯಕ್ತಿ ಯೊಳಗಿನ ಗುಣವಿಕಾಸಕ್ಕೆ ಮೂಲಾಧಾರ. ಅದನ್ನೆ ಕತ್ತರಿಸುವುದು ಆತ್ಮನಾಶ. ಸ್ವ-ಅರ್ಥದಿಂದ ಸ್ವಾರ್ಥ, ಅಭಿಮಾನದಿಂದ ಅಹಂಕಾರ ದೂರವಿಲ್ಲ. ಅಹಂಕಾರ, ಸ್ವಾರ್ಥಗಳೇ ಲೋಕಹಾನಿಗೆ ಕಾರಣವೆಂಬುದು ಸರಿ. ಬೆಂಕೆ, ಮಿಂಚುಗಳಿಂದ ಲೋಕದ ಹಾನಿಯಾಗುವುದನ್ನು ಎಲ್ಲರೂ ಬಲ್ಲರಾದರೂ ಜಾಣ್ಮೆಯಿಂದ ಅದನ್ನೆ ಲಾಭಕರವಾಗುವಂತೆ ಯೋಜಿಸಿಕೊಂಡಿಲ್ಲವೆ? ಅಹಂಕಾರದ ಪ್ರೋಷಣೆಯಿಂದ ಕಲಹ, ಕಾಳಗಗಳು ತಲೆದೋರುವುವಾದರೆ ಅಹಂಕಾರವು ಕಮರಿದಲ್ಲಿ ಹೇಡಿತನ, ನಿಷ್ಕ್ರಿಯತೆಗಳು ಆವರಿಸುವುವು.

ಜೀವದ ವಿಕಾಸಕ್ಕೆ ದೇಹವು ಹೇಗೆ ಅನಿವಾರ್ಯವೋ ಹಾಗೆ ಮಾನವ ಕುಟುಂಬದ ಸೇವೆಗೆ ರಾಷ್ಟ್ರವೆಂಬುದು ದುರ್‌ನಿವಾರ್ಯ. ಮೋಕ್ಷಸಂಪಾದನೆಯ ಗಡಿಬಿಡಿಯಲ್ಲಿ ದೇಹವನ್ನು ಕೀಳ್ಗಳೆದು ದೇಹನಾಶ ಮಾಡಿಕೊಳ್ಳುವ ದಾರಿ ಯಲ್ಲಿ ನಡೆವ ವೇದಾಂತಿಗಳು, ಭಕ್ತರು ಉಂಟು. ಯೋಗ್ಯವಾದ ರಾಷ್ಟ್ರಾಭಿ ಮಾನವನ್ನೂ ಬೇಡವೆಂಬ ವಿಶ್ವಬಂಧುತ್ವವಾದಿಗಳೂ ಆ ಸಾಲಿನವರೇ. ಅಗಾಧ ವಾದ ಮಾನವ ಕುಟುಂಬದ ಹೆಸರಿನಲ್ಲಿ ಆಗಬೇಕಾದ ಸೇವೆಯನ್ನು ತಾನು ನಿಂತಿರುವ ನೆಲ, ಜನ, ಭಾಷೆ, ಸಂಸ್ಕೃತಿಗಳ ಮೂಲಕವಾಗಿಯೆ ಸಲ್ಲಿಸಬೇಕಷ್ಟೆ? ಯಾವ ಮಹಾಕಾರ್ಯವಾಗಲಿ, ತನ್ನಿಂದ—ತನ್ನ ಸುತ್ತಲಿಂದಲೆ ಆರಂಭವಾಗ ಬೇಕಷ್ಟೆ? ಕಾಲ ಕೆಳಗಿನ ನೆಲವನ್ನು ಮರೆತು ವಿಶ್ವದ ಮಾತನಾಡುವುದು ಬರಿಯ ಆಭಾಸ; ತಾಯಿಯಾಗಲು ಒಲ್ಲದವಳ ಪುತ್ರವಾತ್ಸಲ್ಯದಂತೆ.

ಭಾರತವು ಜಾಗತಿಕರಂಗದಲ್ಲಿ ತನ್ನ ಸ್ಥಾನ-ಮಾನಗಳನ್ನು ಕಾಯ್ದು ಕೊಂಡು ಮುಂದುವರೆಯಬೇಕಾದರೆ ಹೊಸ ಬಗೆಯ ಸಮಾಜರಚನೆಯಾಗಲಿ

ಬೇಕು. ಉಳಿದ ರಾಷ್ಟ್ರಗಳಲ್ಲೆಲ್ಲ ಆರ್ಥಿಕ ದೃಷ್ಟಿಯಿಂದ ನಿಯೋಜಿತ-ಸಮಾಜ ಗಳು ( Planned Society ) ಅಸ್ತಿತ್ವದಲ್ಲಿ ಬರತೊಡಗಿವೆ. ಇದಿಲ್ಲದೆ ಔದ್ಯೋಗಿಕ ಅಭಿವೃದ್ಧಿಯೆ ಅಸಾಧ್ಯ. ಎಲ್ಲ ಉದ್ಯೋಗಗಳ ರಾಷ್ಟ್ರೀಕರಣ ವಾಗಿ ದೇಶದಲ್ಲಿ ಈಗಿರುವ ಆರ್ಥಿಕ ವೈಷಮ್ಯವು ಬೇಗನೆ ನಷ್ಟವಾದಷ್ಟು ಲೇಸು. ಧನ ಅಥವಾ ಅಧಿಕಾರಲೋಭಿಗಳಾದ ಕೆಲವು ಜನರೇ ತಮ್ಮ ಸ್ವಾರ್ಥಸಾಧನೆಗಾಗಿ ಅಜ್ಞರಾದ ಸಾಮಾನ್ಯ ಜನರ ತಲೆಯಲ್ಲಿ ಧಾರ್ಮಿಕ ಅಥವಾ ಜಾತಿಯ ಗಾಳಿಯನ್ನು ತುಂಬಿ ತಮ್ಮ ಕಾಯಕ ಸಾಧಿಸಲು ಅವರನ್ನು ಉಪ ಯೋಗಿಸಿಕೊಳ್ಳುತ್ತಲಿದ್ದಾರೆ. ಒಳಹೊಕ್ಕು ನೋಡಿದಲ್ಲಿ ಇಂದಿನ ಲೌಕಿಕ ವ್ಯವಹಾರಗಳಲ್ಲಿ ಜಾತಿ, ಧರ್ಮದ ಮಾತಿಗೆ ಅವಕಾಶವೇ ಇಲ್ಲ.

ಮೋಟಾರ ಯುನಿಯನ್, ಗಿರಣಿ ಕಾಮಗಾರ ಸಂಘ, ಸಿಂಪಿಗರ ಕೂಟ, ಬರಹಗಾರರ ಬಳಗ, ಅರಳೆ ವರ್ತಕರ ಸಮಿತಿ ಎಂದು ಮುಂತಾದ ಸಂಸ್ಥೆಗಳ ವ್ಯವಹಾರಗಳ ಅಭಿವೃದ್ಧಿಗೆ ಧರ್ಮ ಅಥವಾ ಜಾತಿಯ ಅವಶ್ಯಕತೆ ಯೇನಾದರೂ ಇದೆಯೆ? ಆದರೆ ಸದಸ್ಯ, ಅಧ್ಯಕ್ಷ, ಕಾರ್ಯದರ್ಶಿ, ಕೋಶಾ ಧ್ಯಕ್ಷರಂತಹ ಸ್ಥಾನಗಳನ್ನು ಆಕ್ರಮಿಸಲು—ಸ್ವಾರ್ಥ ಸಾಧಿಸಲು ಜಾತಿಯ ಭೂತದ ವೇತಾಳ ಮಂತ್ರವನ್ನು ಉಪಯೋಗಿಸುವ ಸುಡುಗಾಡಸಿದ್ಧರು ನಮ್ಮ ಜೀವನದ ಎಲ್ಲ ರಂಗಗಳಲ್ಲೂ ಮಾಟ ಮೋಸಗಳ ಕಾಯಕ ನಡಸಿದ್ದಾರೆ. ಜಾತಿಯ ಹೆಸರಿನಲ್ಲಿ ಅಧಿಕಾರಸ್ಥಾನಗಳನ್ನು ಆಕ್ರಮಿಸುವರು; ಸಿರಿವಂತರಾಗು ವರು. ಸಿರಿವಂತಿಕೆಯನ್ನು ಇವರು ತಮ್ಮ ಜಾತಿಯ ಬಡವರಿಗಾಗಿ, ಯಾರ ಮತಗಳ ಬೆಂಬಲದಿಂದ ಇವರು ಮುಂದೆ ಬಂದರೊ ಅವರಿಗೆ ಹಂಚಿದ ಉದಾಹರಣಗಳು ಯಾವ ಜಾತಿಯಲ್ಲಾದರೂ ಉಂಟೆ? ಅಧಿಕಾರ, ಸಿರಿವಂತಿಕೆ ಬಂದೊಡನೆ ಇವರ ಕಣ್ಣು ತಿರುಗುವುವು. 'ಧೃತ-ರಾಷ್ಟ್ರ'ರಾಗುವರು. ಒಂದೊಂದು ಸ್ಥಾನನನ್ನಾಕ್ರಮಿಸಿ, ರಾಷ್ಟ್ರೀಯ ಶಕ್ತಿಯನ್ನು ಧಾರಣಮಾಡಿ ದುರುಪಯೋಗ ಮಾಡುವರು.

ಪುಣ್ಯಮಾಡಿ ಮೇಲಣ ಜಾತಿಯವರಾಗಿ, ಸಿರಿವಂತರಾಗಿ ಹುಟ್ಟುತ್ತಾ ರೆಂಬ ವಿಚಾರದ ಬುಡ ಸಡಿಲಿದೆ. ಆಚಾರಹೀನರೆಂದು ಹೇಳುವ ಬಿಳಿಯರು ರಾಜ್ಯವೈಭವವನ್ನೂ ಲೋಕದಲ್ಲಿ ಪ್ರಶಸ್ತಿಯನ್ನೂ ಪಡೆದು, ನಮ್ಮಲ್ಲಿ 'ಪವಿತ್ರ ಕುಲ'ದವರೆಂಬ ಹೆಮ್ಮೆಯುಳ್ಳವರನ್ನು ತಮ್ಮ ಅಡಿಯಾಳಾಗಿರಿಸಿರುವರು.

ರಾಜಕೀಯ, ಸಾಮಾಜಿಕ ಪರಿಸ್ಥಿತಿಯು ಕೆಲವೊಂದು ವಿಶಿಷ್ಟಜನಗಳ ಮೇಲ್ಮೆಗೆ ಅಥವಾ ಕೀಳ್ಮೆಗೆ ಕಾರಣವಾಗುತ್ತದೆ. ಅವರು 'ಭೂ-ದೇವರು' ಆಗುತ್ತಾರೆ. ಪುರೋಹಿತ ವರ್ಗವು ಒಂದು ಕಾಲಕ್ಕೆ ಭೂ-ದೇವರು; I. C. S. ನವರು ಮೊನ್ನೆ ತಾನೆ ಭೂದೇವರಿದ್ದರು. ಅವರು ತೇಜೋಹೀನರಾಗಿ ರಾಜಕೀಯ ಪಕ್ಷದ ಹಿರಿಯಾಳುಗಳು ಇದೀಗ ಭೂದೇವತೆಗಳಂತೆ ಮೆರೆಯುತ್ತಲಿದ್ದಾರೆ. ಹಿಂದಿನ ಜನ್ಮದ ವಿಚಾರವನ್ನು ತರುವುದೇ ಆದರೆ ಇಂದಿನ ಪುಣ್ಯವಂತ ಜಾತಿಗಳೇ ಬೇರೆ! ಹಾಗಾದರೆ ನಿನ್ನೆಯವು ಈಗ ಪಾಪ ಮಾಡಿದವರವೊ ?

ಪುನರ್ಜನ್ಮವೆಂಬುದು ಇಲ್ಲವೆಂತಲ್ಲ. ಆದರೆ ಪಾಪ-ಪುಣ್ಯದ ನಮ್ಮ ತಿಳುವಳಿಕೆ ಸರಿಯಾಗಿಲ್ಲವೆಂದು ಇದರ ಅರ್ಥ. ಕಾಲೋಚಿತ ಸನ್ಮಾರ್ಗದಲ್ಲಿ ನಡೆದವರಿಗೆ ಒಳ್ಳೆಯ ಫಲವು ದೊರೆಯುವುದು ಲೆಕ್ಕಾಚಾರ. ಆದರೆ ಇಂತಹ ಜಾತಿಗಳೇ ಪುಣ್ಯವಂತರವೆಂಬ ಸಿದ್ಧಾಂತ ನಿರಾಧಾರ. ವ್ಯಕ್ತಿಯ ಶೀಲ ಅವನ ದೈವ. ಇಲ್ಲವಾದರೆ ಪುಣ್ಯವಂತರವು ಎಂಬ ಜಾತಿಗಳು ಬೀಳಲು ಕಾರಣವೇನು? ಜಾತಿಯ ಶ್ರೇಣಿಗಳ ಬೆಲೆ ಕಾಲಕಾಲಕ್ಕೆ ಬದಲಾಗುವುದು ಸ್ವರ್ಗದಲ್ಲೊ ? ಭೂಲೋಕದಲ್ಲೊ ?

ಜಾತಿಯ ಮೇಲ್ಮೆ ಅಥವಾ ಕೀಳ್ಮೆಗೆ ಪಾರಲೌಕಿಕ ಸಂಬಂಧವೇನೂ ಇಲ್ಲವೆಂಬುದು ಸ್ಪಷ್ಟವಾಗಿರುವುದಾದರೂ ಆರ್ಥಿಕ ದೃಷ್ಟಿಯಿಂದ ಸಮಾಜವನ್ನು ಸಂಘಟಿಸುವುದಕ್ಕೆ ತೊಡಕು ಎಲ್ಲಿ ? ರಾಷ್ಟ್ರೀಯತೆಗಿಂತ ಜಾತಿ ಮತವೆ ಮಿಗಿಲೆಂಬ ಮೂಢಭಾವದ ಸೆರೆಯೊಳಗಿಂದ ನಮ್ಮ ನಾಡಿನ ಜನಗಳ ಮನಸು ಇನ್ನೂ ಮುಕ್ತವಾಗಿಲ್ಲ. ತಿಳುವಳಿಕೆಯುಂಟಾಗಿ ಈ ದಿಕ್ಕಿನಲ್ಲಿ ಸ್ವಲ್ಪ ಮುಂದಡಿಯಿಡಬೇಕೆನ್ನುವವರಿಗೆ ಇನ್ನೂ ಕೆಲವು ತೊಂದರೆಗಳಿವೆ. ತನ್ನದಲ್ಲದ ಇನ್ನೊಂದು ಜಾತಿ ಮತದವರ ಗೆಳೆತನ, ಅಭಿಮಾನ ಇದ್ದವನನ್ನು ಆತನ ಜಾತಿಬಂಧುಗಳು ದೂರವೆಣಿಸುವರು. ಆತನಿಗೆ ತನ್ನವರೆಂಬವರ ಸಹಕಾರ ಸಹಾನುಭೂತಿಗಳಿಗೆ ಎರವಾಗಬೇಕಾಗುವುದು. ಹೊಸದಾಗಿ ಸ್ನೇಹ ಮಾಡಿದ, ಅಥವಾ ಪಂಗಡದಲ್ಲಿ ಸೇರಿದವರಲ್ಲಿ ಒಬ್ಬಿಬ್ಬರು ಆತ್ಮೀಯತೆಯಿಂದ ನಡಸಿಕೊಂಡರೂ ಮಿಕ್ಕ ಜನ ಆತನನ್ನು ಸಂದೇಹದಿಂದ ಕಾಣುವರು. ಸ್ಥಾನಮಾನಗಳ ಲಾಭದ ಪ್ರಸಂಗಗಳಿದ್ದಾಗಲಂತೂ ಆ ಹೊಸಬನನ್ನು (ತಮ್ಮವ

ನಲ್ಲವೆಂದು) ಲೆಕ್ಕಕ್ಕೇ ಹಿಡಿಯುವುದಿಲ್ಲ! ಈ ಪರಿಸ್ಥಿತಿಯಲ್ಲಿ ಮುನ್ನಡೆವವನು ಕೇವಲ ತತ್ತ್ವನಿಷ್ಠನಾಗಿದ್ದರೆ ಮಾತ್ರ ತನ್ನ ನಿಶ್ಚಿತ ಮಾರ್ಗನಿಂದ ಕದಲುವುದಿಲ್ಲ. ಕೊನೆಗೆ ತಮ್ಮ ಜಾತಿಯವರೇ ತನಗೆ ಗತಿಯೆಂದು ಸಾಮಾನ್ಯರು ಗೊಣಗಬೇಕಾಗುವುದು. ಕೆಲವರಂತೂ ಇಂತಹ ಕಹಿ ಅನುಭವದಿಂದ ತಲೆತಿರುಕ ಜಾತಿವಾದಿಗಳಾಗುವುದೂ ಉಂಟು. ಇಂತಿವೆಲ್ಲ ತೊಡಕು ತೊಂದರೆಗಳೊಳಗಿಂದ ಸಂ-ಕ್ರಮಣ ಮಾಡುತ್ತ ರಾಷ್ಟ್ರೀಯ ಸಮಾಜವು ತಲೆಯೆತ್ತಬೇಕಾಗಿದೆ.

ಇಲ್ಲಿ ಇನ್ನೊಂದು ಗಂಡಾತರ. ಜಾತೀಯ ವಜ್ರಪಂಜರದೊಳಗಿಂದ ಬಿಡುಗಡೆ ಹೊಂದಿ ರಾಷ್ಟ್ರೀಯ ನಿಯೋಜಿತ ಸಮಾಜರಚನೆಯಲ್ಲಿ ದೇಶವು ರಾಜಕೀಯ ಪಕ್ಷದ ಲೋಹಮುಷ್ಟಿಯಲ್ಲಿ ಸಿಕ್ಕಿ, ಒರಲುವ ಹೊತ್ತು ಬರುವುದು. ಸೃಷ್ಟಿಯಲ್ಲಿ ಎರಡು ಶಕ್ತಿಗಳಿವೆ. ಆಕರ್ಷಣ ಮತ್ತು ಪ್ರತಿಸಾರಣ. ಆಕರ್ಷಣದಿಂದ ಕೇಂದ್ರೀಕರಣವಾಗುವುದಾದರೆ, ಪ್ರತಿಸಾರಣದಿಂದ ವಸ್ತುಗಳು ದೂರ ಹೋಗುವವು. ಇವೆರಡೂ ಶಕ್ತಿಗಳು ಸರಿಯಾಗಿ ಕೆಲಸಮಾಡುತ್ತಿದ್ದಾಗಲೆ ಸೃಷ್ಟಿಯು ಯಥಾಕ್ರಮದಲ್ಲಿ ಸಾಗುವುದು. ಸಾಮಾಜಿಕ ರಚನೆಯಲ್ಲಿಯೂ ಇದೇ ತತ್ತ್ವವನ್ನು ಅವಲಂಬಿಸಬೇಕು 'ಇಝಂ'ಗಳ ಗಾಳಿ ಬಡಿದು ಅತಿವಾದಿಗಳಾದ ಅವಿವೇಕಿಗಳಿಂದ, ಸಮಾಜದ ತೂಕ ತಪ್ಪುವ ಹೊತ್ತಿನಲ್ಲಿ ಅದನ್ನು ಎಚ್ಚರಿಸಿ ಸರಿದಾರಿಗೆ ತರುವ ಸಾಮರ್ಥ್ಯವನ್ನು ಸಮಾಜವು ತನ್ನಲ್ಲಿ ಉಳಿಸಿಕೊಳ್ಳಬೇಕಾಗಿದ್ದರೆ ವೈಯಕ್ತಿಕ ವಿಚಾರ ಸ್ವಾತಂತ್ರ್ಯಕ್ಕೂ ಸಾಕಷ್ಟು ಇಂಬು ಇರಲೇಬೇಕು. ನಿಯೋಜಿತ ಸಮಾಜ ರಚನೆಯೆಂದು ಎಲ್ಲರನ್ನೂ ತಮ್ಮ ಯೋಜನೆಗೆ ಬಿಟ್ಟೀಹಿಡಿಯುವ ಒತ್ತಾಯವು ಇರಕೂಡದು. ಸತ್ಯದ ಗುತ್ತಿಗೆ ತಮ್ಮದೊಂದೇ ಪಕ್ಷಕ್ಕೆ ಇದ್ದಂತೆ ಆವೇಶ ತಾಳಿ ಉಳಿದವರನ್ನು ಅಸಡ್ಡೆಯಿಂದ ನಡಸಿಕೊಳ್ಳುವುದು ಅನ್ಯಾಯ, ಅನೀತಿಯೆಂದು ಎಣಿಸಲ್ಪಡಬೇಕು. ಮಹಾಲೋಕವು ಎದುರಿಸಿದರೂ ತಮ್ಮ ಅಂತರಂಗದಲ್ಲಿ ಸರಿಯೆನಿಸದ—ಅನ್ಯಾಯ, ಅನೀತಿಯೆಂದು ಮನವರಿಕೆಯಾದ ಮಾತಿಗೆ ತಲೆವಾಗದೆ ಏಕಾಕಿಯಾದರೂ ಮನಃಪೂತ ಮಾರ್ಗದಿಂದ ಮುಂದೆ ಸಾಗಲು ಸಿದ್ಧರಿರುವ ವ್ಯಕ್ತಿಗಳು ಕಾಲಕಾಲಕ್ಕೆ ಜನ್ಮತಾಳುವ ದೇಶವೇ ಜೀವಂತ ಸಮಾಜವುಳ್ಳ ರಾಷ್ಟ್ರವೆನಿಸುವುದು.

ಜನಸಾಮಾನ್ಯರನ್ನು ಕಣ್‌ಗೆಟ್ಟವರನ್ನಾಗಿಟ್ಟು ಅವರು ತಮ್ಮನ್ನೆ ಅವಲಂಬಿಸಿಕೊಂಡಿರುವಂತೆ ಹಂಚಿಕೆಯನ್ನು ಮಾಡುವುದು, ಹೀನ ನೇತಾರರ ವಾಡಿಕೆ. ನಿಜವಾದ ಜ್ಞಾನದಿಂದ ಅವರನ್ನು ದೂರವಿರಿಸಿ, ಸುಳ್ಳು ಅಥವಾ ವಿಕೃತ ಸುದ್ದಿ, ಸಂಗತಿಗಳನ್ನು ತಲೆಯಲ್ಲಿ ತುಂಬಿ ಅವರ ಕಣ್‌ಗೆಡಿಸುವರು; ಹೆದರಿಕೆಯಲ್ಲಿಡುವರು. ಪರಲೋಕದ ಹೆದರಿಕೆ; ದೈವದ ಹೆದರಿಕೆ; ನರಕದ ಹೆದರಿಕೆ; ಇನ್ನೊಂದು ಜಾತಿಯವರ ಹೆದರಿಕೆ; ಪರಪಕ್ಷದ ಹೆದರಿಕೆ; ಇಂತಹ ಹೆದರಿಕೆಗಳಿಂದ ಗಾಬರಿಯಾಗಿ ವಿಕೃತ ಸಂಗತಿ, ಅಸತ್ಯ ವಾರ್ತೆಗಳಿಂದ ಇನ್ನಿಷ್ಟು ದಿಙ್ಮೂಢವಾದ ಅನುಯಾಯಿವರ್ಗವು ಕುಂಯ್ ಎನ್ನದೆ ತಮ್ಮ ಬೆಂಬತ್ತಿಕೊಂಡಿರುವಂತೆ ಪ್ರಚಾರಗಳು ನಡೆಯುವುವು. ಈಗಂತೂ ಪ್ರಚಾರದ ಸಾಧನಗಳು ತಲೆ ಹುಚ್ಚೆದ್ದು ಹೋಗುವಷ್ಟಾಗಿವೆ.

ಇವೆಲ್ಲವುಗಳೊಳಗಿಂದಲೂ ಪಾರಾಗಿ ವಿಚಾರಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವುದು, ಒಂದು ಯೋಗವೇ ಆಗಿದೆ. ಸತ್ಯವು ಅನಂತವೆಂಬ ದೃಢ ಶ್ರದ್ಧೆಯು ಭಾರತೀಯರದು. 'ಸಹಸ್ರ ಶೀರ್ಷಃ ಪುರುಷಃ....ಅತ್ಯತಿಷ್ಠದ್ದಶಾಂಗುಲಮ್.' ಇದು ಅವರ ನಿತ್ಯ ಧ್ಯಾನಮಂತ್ರ. ಇದರಲ್ಲಿಯೆ ಅವರ ಉದ್ಧಾರದ ಮಾರ್ಗವಿದೆ. ಸತ್ಯವು ಅನಂತವಾಗಿರುವುದರಿಂದ ಸತ್ಯದ ಗುತ್ತಿಗೆ ಯಾವನೊಬ್ಬನಿಗೆ ಇಲ್ಲವೆಂಬುದು ನಿಶ್ಚಿತ. ಆದುದರಿಂದ ಎಷ್ಟು ಜನರು ಎಷ್ಟು ವಿಧದಿಂದ ಅದನ್ನು ಕಂಡು ಅರುಹಿದರೂ ಅದು ಸ್ವಾಗತಾರ್ಹವೇ. ಮುಸಲ್ಮಾನ, ಕ್ರಿಸ್ತಿ ಧರ್ಮಗಳಂತೆ ಒಂದು ವ್ಯಕ್ತಿಯ ಅಭಿಪ್ರಾಯವೇ ಸರ್ವಸ್ವವಾದ ತತ್ತ್ವಜ್ಞಾನವಲ್ಲ, ನಮ್ಮದು. ಯುಗಯುಗಗಳಿಂದ ಲೋಕದ ಅನೇಕಾನೇಕ ಮಹಾನುಭಾವರ ಅನುಭವದ ಸಾರವು ಸಂಗ್ರಹವಾಗುತ್ತಲಿದೆ ಭಾರತದಲ್ಲಿ. ಮುಸಲ್ಮಾನರ ಆಗಮನದ ತರುವಾಯ ವಿಶಿಷ್ಟಮತದ ಒಂದೊಂದು ಮಠಗಳು ಸಮಾಜವನ್ನು ತುಂಡರಿಸಿ ಆಳಲಾರಂಭಿಸಿದ್ದುದು ಇತಿಹಾಸದಿಂದ ಗೊತ್ತಾಗುತ್ತದೆ. ಆ ಮೊದಲು ಇಂತಹ ಮಠ, ಪೀಠಗಳ ಹೆಸರು ಸಹ ದೊರೆಯುವುದಿಲ್ಲ. ನಮ್ಮ ಆಚಾರ್ಯರು ಹೇಳಿದ ಅರ್ಥವೇ ಅರ್ಥ; ಉಳಿದವರಿಗೆ ಬುದ್ಧಿಯಿಲ್ಲ ಎಂಬೀ ಬಗೆಯ ವಾದಸರಣಿ ಮುಸಲ್ಮಾನರ ಕಾಲದಿಂದ ಇತ್ತೀಚಿನದು. ಇದುವೆ ಆಧುನಿಕ ರಾಜಕೀಯ ಪಂಗಡಗಳ ವಿಚಾರದಲ್ಲೂ ಹೊಕ್ಕಿದೆ.

ಬೌದ್ಧಿಕ ಸ್ವಾತಂತ್ರ್ಯವು ಪುರಾತನದಿಂದಲೂ ಭಾರತ ಸಂಸ್ಕೃತಿಯ ವೈಶಿಷ್ಟ್ಯ. ಮಧ್ಯಕಾಲದಲ್ಲಿ ಭಕ್ತಿಮಾರ್ಗದ ಅತಿವಾದಿಗಳು ಬುದ್ಧಿಯನ್ನು ನಿಂದಿಸಿ, ಅದನ್ನು ಕೊಲ್ಲಲು ಉಪದೇಶಿಸಿದರು. ಭಾರತೀಯರು ಕಣ್ಗುರುಡರಾದರು.

ತಸ್ಮಾತ್ ಕೌಂತೇಯ ವಿದುಷಾ ಧರ್ಮಾಧರ್ಮ ವಿನಿಶ್ಚಯೇ ।
ಬುದ್ಧಿಮಾಸ್ಥಾಯ ಲೋಕೇಸ್ಮಿನ್ ವರ್ತಿತವ್ಯಂ ಕೃತಾತ್ಮನಾ ॥
ಶಾಂ, ಪ; ೧೪೧ ೧೦೨

ಯಸ್ಯ ನಾಸ್ತಿ ನಿಜಾ ಪ್ರಜ್ಞಾ ಕೇವಲಂ ತು ಬಹುಶ್ರುತಃ ।
ನ ಸ ಜಾನಾತಿ ಶಾಸ್ತ್ರಾರ್ಥಂ ದರ್ವೀ ಸೂಪರಸಾನಿವ ॥ ಸಭಾ.
ಕೇವಲಂ ಶಾಸ್ತ್ರಮಾಶ್ರಿತ್ಯ ನ ಕರ್ತವ್ಯೋ ವಿನಿರ್ಣಯಃ ।
ಯುಕ್ತಿಹೀನೇ ವಿಚಾರೇ ತು ಧರ್ಮಹಾನಿಃ ಪ್ರಜಾಯತೇ । ಬೃಹಸ್ಪತಿ ।

ಶ್ರೀಕೃಷ್ಣನು ಅರ್ಜುನನಿಗೆ 'ಬುದ್ಧಿಯೋಗ'ವನ್ನು ಹೇಳಿಕೊಟ್ಟನು. ಗಾಯತ್ರೀ ಉಪಾಸನೆ, ಸೂರ್ಯೋಪಾಸನೆ, ಅಗ್ನಿಯ ಆರಾಧನೆ ಇವೆಲ್ಲವೂ ಧೀಶಕ್ತಿಯ ಪ್ರಚೋದನೆಗಾಗಿಯೆ ಇವೆ. 'ಧಿಯೋಯೋನಃ ಪ್ರಚೋದಯಾತ್' ಎಂಬುದು ನಿತ್ಯ ಪ್ರಾರ್ಥನೆಯಲ್ಲವೆ? ಜ್ಞಾನಸೂರ್ಯನ ಉಪಾಸನೆಯಿಂದ ಧೀಶಕ್ತಿಯನ್ನು ಒಲಿಸಿಕೊಳ್ಳುತ್ತಿರುವ ವರೆಗೆ ಲೋಕದ ನೇತೃತ್ವವು ಭಾರತದ ಕಡೆಗೆ ಇತ್ತು. ಬುದ್ಧಿಯ ಆಧಾರದಿಂದಲೆ ಮುನ್ನಡೆಯು ಸಾಧ್ಯ. ತಿಳಿಗೇಡಿಯೂ ಯುಕ್ತಿಯುಕ್ತ ವಿಚಾರಮಾಡಲು ಅಸಮರ್ಥನೂ ಸಂಸಾರದಲ್ಲಿ ಹಾನಿಗೆ ಈಡಾಗುವನು.

ಭೀತಿಯಂತೆ, ಪರಂಪರಾಪ್ರಿಯತೆಯೂ ವಿಚಾರಸ್ವಾತಂತ್ರ್ಯದ ವೈರಿ. ರೂಢಿಗೆ ಹೂಡಿದ ಜನವು ರೂಢಿಯ ನೊಗವನ್ನು ಬಿಚ್ಚಿದೊಡನೆ ಗಾಬರಿಗೊಳ್ಳುವುದು. ಯಾವ ದಿಕ್ಕಿನಲ್ಲಿ ನಡೆಯಬೇಕೆಂಬುದು ತಿಳಿಯದೆ ಬೆದರುವುದು. ವಿಚಾರದ ಭಾಗಕ್ಕಿಂತ ಯಾಂತ್ರಿಕ ಕ್ರಿಯೆಗಳನ್ನು ನಿರ್ವಹಿಸುವುದು ಸುಲಭವೆನಿಸಿ ವಿಚಾರದ ಗುತ್ತಿಗೆಯನ್ನು ಬೇರೆಯವರಿಗೆ ಒಪ್ಪಿಸುವುದು. ಹಿರಿಯರೊ, ಗುರುಗಳೊ, ಮಹರ್ಷಿಗಳೊ ಮುಂದಾಳುಗಳೊ ಎಂಬ ಒಂದಿಲ್ಲೊಂದು ಹೆಸರಿನಲ್ಲಿ ಕೆವಲರು ಸಾಮಾನ್ಯ ಜನಗಳನ್ನು ಆಳುವರು. ಆದರೆ ಯಾರೇ ಆಗಲಿ ಮಾನವದೇಹಧಾರಿಗಳೆಲ್ಲರೂ ಅಪೂರ್ಣರು. ಯಾರನ್ನು ಯಾರೂ ಆಳಲರ್ಹರಲ್ಲ. ಯಾರೂ ಯಾರ ನೆರಳಿನಂತಾಗಿ ಹಿಂಬಾಲಿಗಳಾಗ

ಬಾರದು. ಈ ವಿಷಯದಲ್ಲಿ ತೈತ್ತರೇಯ ಉಪನಿಷತ್ತಿನ ಆದೇಶವು ಸ್ಪಷ್ಟವಿದೆ. 'ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ ನೋ ಇತರಾಣಿ' 'ಯಾನ್ಯಸ್ಮಾಕಂ ಸುಚರಿತಾನಿ ತಾನಿ ತ್ವಯೋಪಾಸ್ಯಾನಿ ನೋ ಇತರಾಣಿ' ಹಿರಿಯರಾದವರ ಸತ್ಕೃತಿಗಳನ್ನು ಮಾತ್ರ ಸ್ವೀಕರಿಸಬೇಕು; ಎಂದು ಈ ಮಹರ್ಷಿಯು ಹೇಳಿರುವುದರಿಂದ ಹಿರಿಯರಾದವರ ಕಿರುಕುಳ ಕೃತಿಗಳೂ ಇರುತ್ತವೆಂದು ಒಪ್ಪಿಕೊಂಡಂತೆಯೆ ಸರಿ. ಆದರೆ ಗುರುವು ಲಂಡಪಂಜಿಯನ್ನುಟ್ಟಿದ್ದರೆ ಶಿಷ್ಯರೂ ಹಾಗೆಯೆ ಬಟ್ಟೆಯನ್ನು ಹಾಕಿಕೊಳ್ಳುವುದು ರೂಢಿ. ಹಳೆಯದರೊಳಗಿನ ಒಳ್ಳೆಯ ಸಂಗತಿಗಳನ್ನು ಹೆಕ್ಕಿಕೊಂಡು ಮತ್ತೆ ಕಾಲೋಚಿತ ಹೊಸತೊಂದು ಹಾದಿಯನ್ನು ಕಂಡುಹಿಡಿಯುವ ಸಾಮರ್ಥ್ಯವು ವಿಚಾರ ಸ್ವಾತಂತ್ರ್ಯದಿಂದ ಮಾತ್ರ ಬರಬಲ್ಲದು. ರೂಢಿಮೂಢತೆ, ಸಂಪ್ರದಾಯ ಶರಣತೆಗಳು **ಪ್ರಗತಿಗೆ** ಅಡ್ಡಿ.

ಹದಿನೆಂಟು ಅಧ್ಯಾಯಗಳಲ್ಲಿ ತತ್ವಬೋಧಮಾಡಿ ಶ್ರೀಕೃಷ್ಣನು ಕೊನೆಗೆ ಅರ್ಜುನನಿಗೆ ವಿಜ್ಞಾಪಿಸಿದ್ದೇನು ?

ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು । (೧೮. ೬೩)

ನಾನು ಗುರು, ನೀನು ಶಿಷ್ಯ. ಕಾರಣ ನಾನು ಹೇಳಿದ್ದೆಲ್ಲ ಚಾಚೂ ಬಿಡದೆ ಅನುಸರಿಸು ಎಂದೊ? ಅಲ್ಲಲ್ಲ. ಎಲ್ಲವನ್ನೂ ಸಂಪೂರ್ಣವಾಗಿ ಮೊದಲು ವಿಮರ್ಶಿಸು. ಬಳಿಕ ಅಂತಃಕರಣಸಾಕ್ಷಿಯಾಗಿ ನಿನ್ನ ಅಭಿಪ್ರಾಯದಂತೆ ನಡೆ. ಎಂದು **ನರನಿಗೆ** ಗೀತೆಯ ಸಂದೇಶ. ನನ್ನ ಬಿನ್ನಹವಾದರೂ ಓದುಗರಲ್ಲಿ ಇದಕ್ಕಿಂತ ಬೇರೆಯಿಲ್ಲ.

**ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್.... ।**

**— ಈಶ**